ಅಪಿ ಮಯ್ಯನವದ್ಯಾತ್ಮಾ ದೃಷ್ಟ್ವಾ ಕಿಂಚಿಜ್ಜುಗುಪ್ಸಿತಮ್ ।
ಮತ್ಪಾಣಿಗ್ರಹಣೇ ನೂನಂ ನಾಯಾತಿ ಹಿ ಕೃತೋದ್ಯಮಃ
॥ ೨೪ ॥

ದುರ್ಭಗಾಯಾ ನ ಮೇ ಧಾತಾ ನಾನುಕೂಲೋ ಮಹೇಶ್ವರಃ ।
ದೇವೀ ವಾ ವಿಮುಖಾ ಗೌರೀ ರುದ್ರಾಣೀ ಗಿರಿಜಾ ಸತೀ
॥ ೨೫ ॥

ಏವಂ ಚಿಂತಯತೀ ಬಾಲಾ ಗೋವಿಂದಹೃತಮಾನಸಾ ।
ನ್ಯಮೀಲಯತ ಕಾಲಜ್ಞಾ ನೇತ್ರೇ ಚಾಶ್ರುಕಲಾಕುಲೇ
॥ ೨೬ ॥

ಏವಂ ವಧ್ವಾಃ ಪ್ರತೀಕ್ಷಂತ್ಯಾ ಗೋವಿಂದಾಗಮನಂ ನೃಪ ।
ವಾಮ ಊರುರ್ಭುಜೋ ನೇತ್ರಮಸ್ಫುರನ್ ಪ್ರಿಯಭಾಷಿಣಃ
॥ ೨೭ ॥

ಅಥ ಕೃಷ್ಣವಿನಿರ್ದಿಷ್ಟಃ ಸ ಏವ ದ್ವಿಜಸತ್ತಮಃ ।
ಅಂತಃಪುರಚರೀಂ ದೇವೀಂ ರಾಜಪುತ್ರೀಂ ದದರ್ಶ ಹ
॥ ೨೮ ॥

ಸಾ ತಂ ಪ್ರಹೃಷ್ಟವದನಮವ್ಯಗ್ರಾತ್ಮಗತಿಂ ಸತೀ ।
ಆಲಕ್ಷ್ಯ ಲಕ್ಷಣಾಭಿಜ್ಞಾ ಸಮಪೃಚ್ಛಚ್ಛುಚಿಸ್ಮಿತಾ
॥ ೨೯ ॥

ತಸ್ಯಾ ಆವೇದಯತ್ ಪ್ರಾಪ್ತಂ ಶಶಂಸ ಯದುನಂದನಮ್ ।
ಉಕ್ತಂ ಚ ಸತ್ಯವಚನಮಾತ್ಮೋಪನಯನಂ ಪ್ರತಿ
॥ ೩೦ ॥

ತಮಾಗತಂ ಸಮಾಜ್ಞಾಯ ವೈದರ್ಭೀ ಹೃಷ್ಟಮಾನಸಾ ।
ನ ಪಶ್ಯಂತೀ ಬ್ರಾಹ್ಮಣಾಯ ಪ್ರಿಯಮನ್ಯನ್ನನಾಮ ಸಾ
॥ ೩೧ ॥

ಪ್ರಾಪ್ತೌ ಶ್ರುತ್ವಾ ಸ್ವದುಹಿತುರುದ್ವಾಹಪ್ರೇಕ್ಷಣೋತ್ಸುಕೌ ।
ಅಭ್ಯಯಾತ್ತೂರ್ಯಘೋಷೇಣ ರಾಮಕೃಷ್ಣೌ ಸಮರ್ಹಣೈಃ
॥ ೩೨ ॥

ಮಧುಪರ್ಕಮುಪಾನೀಯ ವಾಸಾಂಸಿ ವಿರಜಾಂಸಿ ಸಃ ।
ಉಪಾಯನಾನ್ಯಭೀಷ್ಟಾನಿ ವಿಧಿವತ್ ಸಮಪೂಜಯತ್
॥ ೩೩ ॥

ತಯೋರ್ನಿವೇಶನಂ ಶ್ರೀಮದುಪಕಲ್ಪ್ಯ ಮಹಾಮತಿಃ ।
ಸಸೈನ್ಯಯೋಃ ಸಾನುಗಯೋರಾತಿಥ್ಯಂ ವಿದಧೇ ಯಥಾ
॥ ೩೪ ॥

ಪರಿಶುದ್ಧ ಹೃದಯನಾದ ಭಗವಾನ್ ಶ್ರೀಕೃಷ್ಣನೇನಾದರೂ ನನ್ನಲ್ಲಿ ಯಾವುದಾದರೂ ಜುಗುಪ್ಸಿತವಾದ ವ್ಯವಹಾರವನ್ನು ಕಂಡು ನನ್ನ ಪಾಣಿಗ್ರಹಣಕ್ಕೆ, ಪ್ರಯತ್ನಿಸದೆ ಇರುವುದು ಅವನು ಇಲ್ಲಿಗೆ ಬಾರದಿರುವ ಕಾರಣವಾಗಿರಬಹುದೇ ? ॥ ೨೪ ॥ ನಿಶ್ಚಯ ವಾಗಿಯೂ ನಾನು ದುರ್ಭಾಗ್ಯಳೇ ಸರಿ. ಬ್ರಹ್ಮನಾಗಲೀ, ಪರಶಿವ ನಾಗಲೀ ನನಗೆ ಅನುಕೂಲರಾಗಿಲ್ಲ, ರುದ್ರಪತ್ನಿಯಾದ ಗಿರಿರಾಜಕುಮಾರಿಯಾದ ಪಾರ್ವತಿಯೂ ನನ್ನ ವಿಷಯದಲ್ಲಿ ವಿಮುಖಳಾಗಿದ್ದಾಳೆಯೋ ಏನೋ ? ॥ ೨೫ ॥ ಪರೀಕ್ಷಿತನೇ ! ಗೋವಿಂದನಿಂದ ಅಪಹರಿಸಲ್ಪಟ್ಟ ಮನಸ್ಸುಳ್ಳ ರುಕ್ಮಿಣೀ ದೇವಿಯು ಹೀಗೆ ಚಿಂತಿಸುತ್ತಾ, 'ಇನ್ನೂ ಸಮಯವಿದೆಯಲ್ಲ!' ಎಂದು ತಿಳಿದು ಕಣ್ಣೀರಿನಿಂದ ತುಂಬಿದ ತನ್ನ ಕಂಗಳನ್ನು ಹಾಗೆಯೇ ಮುಚ್ಚಿ ಕೊಂಡಳು. ॥ ೨೬ ॥ ಪರೀಕ್ಷಿತನೇ ! ಹೀಗೆ ರುಕ್ಮಿಣಿಯು ಭಗವಾನ್ ಶ್ರೀಕೃಷ್ಣನ ಶುಭಾಗಮನವನ್ನು ಪ್ರತೀಕ್ಷೆ ಮಾಡುತ್ತಿದ್ದಾಗ ಆಕೆಯ ಎಡ ತೊಡೆ, ಭುಜ, ಕಣ್ಣುಗಳು ಅದುರತೊಡಗಿದವು. ಅವು ಪ್ರಿಯತಮನ ಆಗಮನದ ಪ್ರಿಯವಾರ್ತೆಯನ್ನು ಸೂಚಿಸು ತ್ತಿದ್ದವು.॥ ೨೭ ॥ ಅಷ್ಟರಲ್ಲಿಯೇ ಭಗವಾನ್ ಶ್ರೀಕೃಷ್ಣನು ಕಳಿಸಿರುವ ಆ ಬ್ರಾಹ್ಮಣನು ಬಂದು ಅಂತಃಪುರದಲ್ಲಿದ್ದ ರಾಜಕುಮಾರಿ ರುಕ್ಮಿಣಿಯನ್ನು ಧ್ಯಾನಮಗ್ನಳಾದ ಯಾರೋ ದೇವಿಯೇ ಆಗಿರುವಳೋ ಎಂಬಂತೆ ನೋಡಿದನು. ॥ ೨೮ ॥ ಸಾಧ್ವಿಯಾದ ರುಕ್ಮಿಣಿಯು - ಬ್ರಾಹ್ಮಣನ ಮುಖವು ಪ್ರಫುಲ್ಲಿತವಾಗಿದೆ. ಮುಖದಲ್ಲಿ, ಮನಸ್ಸಿನಲ್ಲಿ ಯಾವುದೇ ಅಳುಕೂ ಇಲ್ಲದ ಅವನನ್ನು ನೋಡಿ ಲಕ್ಷಣಶಾಸ್ತ್ರವನ್ನು ತಿಳಿದಿದ್ದ ಆಕೆಯು ತನ್ನ ಕಾರ್ಯವು ಸಿದ್ಧಿಯಾಗಿರುವುದೆಂದು ನಿಶ್ಚಯಿಸಿ, ಪ್ರಸನ್ನವದನೆಯಾಗಿ ಬ್ರಾಹ್ಮಣೋತ್ತಮನಲ್ಲಿ ಹೋದ ಕಾರ್ಯವೇನಾಯಿತೆಂದು ಕೇಳಿದಳು. ॥ ೨೯ ॥ ಆಗ ಭೂಸುರೋತ್ತಮನು - 'ಭಗವಾನ್ ಶ್ರೀಕೃಷ್ಣನು ಇಲ್ಲಿಗೆ ದಯಮಾಡಿಸಿರುವನು' ಎಂದು ನಿವೇದಿಸಿ ಕೊಂಡು ಶ್ರೀಕೃಷ್ಣನನ್ನು ಬಹಳವಾಗಿ ಪ್ರಶಂಸಿಸಿದನು. ರಾಜಕು ಮಾರಿಯೇ! ನಿನ್ನನ್ನು ಕೊಂಡು ಹೋಗುವುದಾಗಿ ಸತ್ಯಪ್ರತಿಜ್ಞೆ ಯನ್ನು ಮಾಡಿರುವನೆಂದೂ ತಿಳಿಸಿದನು. ॥ ೩೦ ॥ ಭಗವಂತನ ಶುಭಾಗಮನದ ವಾರ್ತೆಯನ್ನು ಕೇಳಿ ರುಕ್ಮಿಣೀದೇವಿಯ ಹೃದಯ ಆನಂದತುಂದಿಲವಾಯಿತು. ಆಕೆಯು ಇದಕ್ಕೆ ಬದಲಾಗಿ ಬ್ರಾಹ್ಮಣ ನಿಗೆ ಭಗವಂತನಲ್ಲದೆ ಬೇರೆ ಯಾವುದೂ ಪ್ರಿಯವಲ್ಲದ ಕಾರಣ ದಿಂದ ಅವನಿಗೆ ಕೇವಲ ಭಕ್ತಿಯಿಂದ ನಮಸ್ಕಾರವನ್ನು ಮಾಡಿದಳು. ॥ ೩೧ ॥

ಭಗವಾನ್ ಶ್ರೀಕೃಷ್ಣ ಮತ್ತು ಬಲರಾಮರು ತನ್ನ ಮಗಳ ವಿವಾಹ ವನ್ನು ನೋಡುವ ಉತ್ಸುಕತೆಯಿಂದ ಕುಂಡಿನ ನಗರಕ್ಕೆ ಆಗಮಿಸಿರುವ ರೆಂದು ಕೇಳಿದ ಭೀಷ್ಮಕನು ಮಂಗಳವಾದ್ಯಗಳ ಪುರಸ್ಸರವಾಗಿ ಅವರನ್ನು ಇದಿರ್ಗೊಂಡನು. ॥ ೩೨ ॥ ಮತ್ತೆ ಮಧುಪರ್ಕ ದಿಂದಲೂ, ಶುಭ್ರವಸ್ತ್ರಗಳಿಂದಲೂ, ಅಭೀಷ್ಟವಾದ ಕಾಣಿಕೆ ಗಳಿಂದಲೂ ಅವರನ್ನು ವಿಧಿಪೂರ್ವಕವಾಗಿ ಪೂಜಿಸಿದನು.॥ ೩೩ ॥ ಮೇಧಾವಿಯಾದ ಭೀಷ್ಮಕನು ಶ್ರೀಕೃಷ್ಣ-ಬಲರಾಮರಿಗೂ ಮತ್ತು ಅವರೊಡನೆ ಬಂದಿದ್ದ ಸೈನಿಕರಿಗೂ ಸಮಸ್ತ ಸಾಮಗ್ರಿಗಳಿಂದ ಕೂಡಿದ ಸುಂದರವಾದ ಬಿಡಾರಗಳನ್ನು ಕಲ್ಪಿಸಿಕೊಟ್ಟು ಯೋಗ್ಯ ರೀತಿಯಿಂದ ಆತಿಥ್ಯ-ಸತ್ಕಾರ ಮಾಡಿದನು. ॥ ೩೪ ॥

ಏವಂ ರಾಜ್ಞಾಂ ಸಮೇತಾನಾಂ ಯಥಾವೀರ್ಯಂ ಯಥಾವಯಃ ।
ಯಥಾಬಲಂ ಯಥಾವಿತ್ತಂ ಸರ್ವೈಃ ಕಾಮ್ಯೈಃ ಸಮರ್ಹಯತ್ ॥ ೩೫ ॥

ಕೃಷ್ಣಮಾಗತಮಾಕರ್ಣ್ಯ ವಿದರ್ಭಪುರವಾಸಿನಃ ।
ಆಗತ್ಯ ನೇತ್ರಾಂಜಲಿಭಿಃ ಪಪುಸ್ತನ್ಮುಖಪಂಕಜಮ್ ॥ ೩೬ ॥

ಅಸ್ಯೈವ ಭಾರ್ಯಾ ಭವಿತುಂ ರುಕ್ಮಿಣ್ಯರ್ಹತಿ ನಾಪರಾ ।
ಅಸಾವಪ್ಯನವದ್ಯಾತ್ಮಾ ಭೈಷ್ಮ್ಯಾಃ ಸಮುಚಿತಃ ಪತಿಃ ॥ ೩೭ ॥

ಕಿಂಚಿತ್ಸುಚರಿತಂ ಯನ್ನಸ್ತೇನ ತುಷ್ಟಸ್ತ್ರಿಲೋಕಕೃತ್ ।
ಅನುಗೃಹ್ಣಾತು ಗೃಹ್ಣಾತು ವೈದರ್ಭ್ಯಾಃ ಪಾಣಿಮಚ್ಯುತಃ ॥ ೩೮ ॥

ಏವಂ ಪ್ರೇಮಕಲಾಬದ್ಧಾ ವದಂತಿ ಸ್ಮ ಪುರೌಕಸಃ ।
ಕನ್ಯಾ ಚಾಂತಃಪುರಾತ್ ಪ್ರಾಗಾದ್ಭಟೈರ್ಗುಪ್ತಾಂಬಿಕಾಲಯಮ್ ॥ ೩೯ ॥

ಪದ್ಭ್ಯಾಂ ವಿನಿರ್ಯಯೌ ದ್ರಷ್ಟುಂ ಭವಾನ್ಯಾಃ ಪಾದಪಲ್ಲವಮ್ ।
ಸಾ ಚಾನುಧ್ಯಾಯತೀ ಸಮ್ಯಕ್ ಮುಕುಂದಚರಣಾಂಬುಜಮ್ ॥ ೪೦ ॥

ಯತವಾಙ್ಮಾತೃಭಿಃ ಸಾರ್ಧಂ ಸಖೀಭಿಃ ಪರಿವಾರಿತಾ ।
ಗುಪ್ತಾ ರಾಜಭಟೈಃ ಶೂರೈಃ ಸನ್ನದ್ಧೈರುದ್ಯತಾಯುಧೈಃ ।
ಮೃದಂಗಶಂಖಪಣವಾಸ್ತೂರ್ಯಭೇರ್ಯಶ್ಚ ಜಘ್ನಿರೇ ॥ ೪೧ ॥

ನಾನೋಪಹಾರಬಲಿಭಿರ್ವಾರಮುಖ್ಯಾಃ ಸಹಸ್ರಶಃ ।
ಸ್ರಗ್ಗಂಧವಸ್ತ್ರಾಭರಣೈರ್ದ್ವಿಜಪತ್ನ್ಯಃ ಸ್ವಲಂಕೃತಾಃ ॥ ೪೨ ॥

ಗಾಯಂತಶ್ಚ ಸ್ತುವಂತಶ್ಚ ಗಾಯಕಾ ವಾದ್ಯವಾದಕಾಃ ।
ಪರಿವಾರ್ಯ ವಧೂಂ ಜಗ್ಮುಃ ಸೂತಮಾಗಧವಂದಿನಃ ॥ ೪೩ ॥

ಆಸಾದ್ಯ ದೇವೀಸದನಂ ಧೌತಪಾದಕರಾಂಬುಜಾ ।
ಉಪಸ್ಪೃಶ್ಯ ಶುಚಿಃ ಶಾಂತಾ ಪ್ರವಿವೇಶಾಂಬಿಕಾಂತಿಕಮ್ ॥ ೪೪ ॥

ತಾಂ ವೈ ಪ್ರವಯಸೋ ಬಾಲಾಂ ವಿಧಿಜ್ಞಾ ವಿಪ್ರಯೋಷಿತಃ ।
ಭವಾನೀಂ ವಂದಯಾಂಚಕ್ರುರ್ಭವಪತ್ನೀಂ ಭವಾನ್ವಿತಾಮ್ ॥ ೪೫ ॥

ಹೀಗೆ ಭೀಷ್ಮಕ ಮಹಾರಾಜನು ತನ್ನ ಆಹ್ವಾನದಂತೆ ಬಂದಿರುವ ರಾಜರೆಲ್ಲರನ್ನೂ ಅವರವರ ಪರಾಕ್ರಮ, ವಯಸ್ಸು, ಬಲ, ಧನ ಇವುಗಳಿಗನುಸಾರವಾಗಿ ಅವರು ಬಯಸಿದ ವಸ್ತುಗಳೆಲ್ಲವನ್ನು ಕೊಟ್ಟು ಬಹಳವಾಗಿ ಸತ್ಕರಿಸಿದನು. ॥ ೩೫॥ ಭಗವಾನ್ ಶ್ರೀಕೃಷ್ಣನು ತಮ್ಮ ನಗರಕ್ಕೆ ಬಂದಿರುವನೆಂದು ಕೇಳಿದಾಗ ನಗರವಾಸಿಗಳು ಭಗವಂತನ ನಿವಾಸಸ್ಥಾನಕ್ಕೆ ಬಂದು ತಮ್ಮ ಕಣ್ಣುಗಳೆಂಬ ಬೊಗಸೆಗಳಿಂದ ಶ್ರೀಕೃಷ್ಣನ ಮುಖಾರವಿಂದದ ಮಧುರ ಮಕರಂದರಸವನ್ನು ಪಾನಮಾಡತೊಡಗಿದರು. ॥ ೩೬ ॥ ಅವರು ಪರಸ್ಪರ ಹೀಗೆ ಮಾತನಾಡಿಕೊಳ್ಳುತ್ತಿದ್ದರು - ನಮ್ಮ ರುಕ್ಮಿಣಿಯು ಇವನ ಅರ್ಧಾಂಗಿಯಾಗಲು ಯೋಗ್ಯಳೇ ಆಗಿದ್ದಾಳೆ. ಈ ಪರಮ ಪವಿತ್ರಮೂರ್ತಿಯಾದ ಶ್ಯಾಮಸುಂದರನೇ ರುಕ್ಮಿಣಿಗೆ ಯೋಗ್ಯಪತಿ ಯಾಗಿದ್ದಾನೆ. ॥ ೩೭ ॥ ನಾವೇನಾದರೂ ಹಿಂದಿನ ಜನ್ಮದಲ್ಲಿ ಅಥವಾ ಈ ಜನ್ಮದಲ್ಲಿ ಏನಾದರೂ ಸತ್ಕರ್ಮಮಾಡಿದ್ದರೆ, ತ್ರೈಲೋಕ್ಯ ವಿಧಾತನಾದ ಭಗವಂತನು ನಮ್ಮ ಮೇಲೆ ಪ್ರಸನ್ನನಾಗಿ ಶ್ಯಾಮಸುಂದರ ಶ್ರೀಕೃಷ್ಣನೇ ವಿದರ್ಭರಾಜಕುಮಾರಿ ರುಕ್ಮಿಣಿಯ ಪಾಣಿಗ್ರಹಣ ಮಾಡಿ ಅನುಗ್ರಹಿಸಲಿ. ॥ ೩೮ ॥

ಪರೀಕ್ಷಿತನೇ ! ಕುಂಡಿನಪುರ ನಿವಾಸಿಗಳೆಲ್ಲರೂ ಪ್ರೇಮ ಪರವಶರಾಗಿ ಮಾತನಾಡಿಕೊಳ್ಳುತ್ತಿರುವಾಗಲೇ ರಾಜಭಟರಿಂದ ರಕ್ಷಿಸಲ್ಪಡುತ್ತಿದ್ದ ಮದುವಣಗಿತ್ತಿಯು ಅಂತಃಪುರದಿಂದ ಹೊರಟು ಅಂಬಿಕಾಲಯಕ್ಕೆ ದೇವಿಯ ಪೂಜೆಗಾಗಿ ಹೊರಟಳು. ॥ ೩೯ ॥ ರುಕ್ಮಿಣಿಯಾದರೋ ಶ್ರೀಕೃಷ್ಣನ ಚರಣಕಮಲಗಳನ್ನೇ ಧ್ಯಾನಿಸುತ್ತಾ, ಭಗವತಿ ಭವಾನಿಯ ಪದ ಪಲ್ಲವಗಳನ್ನು ಸಂದರ್ಶಿಸಲು ಕಾಲ್ನಡಿಗೆ ಯಿಂದಲೇ ದೇವಾಲಯಕ್ಕೆ ಹೋದಳು. ॥ ೪೦ ॥ ಮೌನವಾಗಿದ್ದ ಆಕೆಯು ಮಾತೃವರ್ಗದವರಿಂದ ಪರಿವೃತಳಾಗಿದ್ದಳು. ಆಯುಧ ಗಳನ್ನು ಧರಿಸಿ ಸನ್ನದ್ಧರಾದ ಶೂರ ರಾಜಭಟರು ಸುತ್ತಲೂ ಆಕೆಯನ್ನು ರಕ್ಷಿಸುತ್ತಿದ್ದರು. ಭೇರಿ, ಮೃದಂಗ, ಶಂಖ, ಪಣವ, ತೂರ್ಯ - ಮೊದಲಾದ ಮಂಗಳವಾದ್ಯಗಳು ಮೊಳಗು ತ್ತಿದ್ದವು. ॥ ೪೧ ॥ ಹಲವಾರು ಬ್ರಾಹ್ಮಣಪತ್ನಿಯರು ಪುಷ್ಪಮಾಲೆ ಗಳಿಂದಲೂ, ಚಂದನಾದಿ ಸುಗಂಧ ದ್ರವ್ಯಗಳಿಂದಲೂ, ವಸ್ತ್ರಾ ಭರಣಗಳಿಂದಲೂ ಅಲಂಕರಿಸಿಕೊಂಡು ಜೊತೆ-ಜೊತೆಯಲ್ಲೇ ಹೋಗುತ್ತಿದ್ದರು. ಅನೇಕ ಪ್ರಕಾರದ ಕಾಣಿಕೆಗಳನ್ನು, ಪೂಜಾ ಸಾಮಗ್ರಿಗಳನ್ನು ಎತ್ತಿಕೊಂಡು ಸಾವಿರಾರು ವಾರಾಂಗನೆಯರು ವಧುವನ್ನು ಹಿಂಬಾಲಿಸುತ್ತಿದ್ದರು. ॥ ೪೨ ॥ ಗಾಯಕರು ಗಾನ ಮಾಡುತ್ತಿದ್ದರು. ವಾದ್ಯಗಾರರು ವಾದ್ಯಗಳನ್ನು ನುಡಿಸುತ್ತಾ ಸಾಗಿದ್ದರು. ಸೂತ-ಮಾಗಧ-ವಂದೀಜನರು ವಧುವಿನ ಸುತ್ತಲೂ ಜಯಕಾರ ಮಾಡುತ್ತಾ ಬಿರುದಾವಳಿಗಳನ್ನು ಉಚ್ಚರಿಸು ತ್ತಿದ್ದರು. ॥ ೪೩ ॥ ದೇವಿಯ ಮಂದಿರವನ್ನು ತಲುಪಿದ ರುಕ್ಮಿಣಿಯು ಕಮಲದಂತಿರುವ ಸುಕೋಮಲವಾದ ಕೈ-ಕಾಲು ಗಳನ್ನು ತೊಳೆದು, ಆಚಮನ ಮಾಡಿ, ಅಂತರ್ಬಾಹ್ಯಶುದ್ಧಳಾಗಿ, ಶಾಂತಭಾವದಿಂದ ಕೂಡಿಕೊಂಡು ಅಂಬಿಕೆಯ ಮಂದಿರವನ್ನು ಪ್ರವೇಶಿಸಿದಳು. ॥ ೪೪ ॥ ಜೊತೆಗಿದ್ದ ಅನೇಕ ವಿಧಿ-ವಿಧಾನಗಳನ್ನು ಬಲ್ಲ ಹಿರಿಯ ಬ್ರಾಹ್ಮಣ ಮುತ್ತೈದೆಯರು ಭಗವಾನ್ ಶಂಕರನ ಅರ್ಧಾಂಗಿನಿಯಾದ ಭವಾನಿಗೆ ಮತ್ತು ಭಗವಾನ್ ಪರಶಿವನಿಗೆ ರುಕ್ಮಿಣಿಯಿಂದ ನಮಸ್ಕಾರವನ್ನು ಮಾಡಿಸಿದರು. ॥ ೪೫ ॥

ನಮಸ್ಯೇ ತ್ವಾಂಬಿಕೇಽಭೀಕ್ಷ್ಣಂ ಸ್ವಸಂತಾನಯುತಾಂ ಶಿವಾಮ್ ।
ಭೂಯಾತ್ ಪತಿರ್ಮೇ ಭಗವಾನ್ ಕೃಷ್ಣಸ್ತದನುಮೋದತಾಮ್
॥ ೪೬ ॥

ಅದ್ಭಿರ್ಗಂಧಾಕ್ಷತೈರ್ಧೂಪೈರ್ವಾಸಃಸ್ರಙ್ಮಾಲ್ಯಭೂಷಣೈಃ ।
ನಾನೋಪಹಾರಬಲಿಭಿಃ ಪ್ರದೀಪಾವಲಿಭಿಃ ಪೃಥಕ್
॥ ೪೭ ॥

ವಿಪ್ರಸ್ತ್ರಿಯಃ ಪತಿಮತೀಸ್ತಥಾ ತೈಃ ಸಮಪೂಜಯತ್ ।
ಲವಣಾಪೂಪತಾಂಬೂಲಕಂಠಸೂತ್ರಫಲೇಕ್ಷುಭಿಃ
॥ ೪೮ ॥

ತಸ್ಯೈ ಸ್ತ್ರಿಯಸ್ತಾಃ ಪ್ರದದುಃ ಶೇಷಾಂ ಯುಯುಜುರಾಶಿಷಃ ।
ತಾಭ್ಯೋ ದೇವ್ಯೈ ನಮಶ್ಚಕ್ರೇ ಶೇಷಾಂ ಚ ಜಗೃಹೇ ವಧೂಃ
॥ ೪೯ ॥

ಮುನಿವ್ರತಮಥ ತ್ಯಕ್ತ್ವಾ ನಿಶ್ಚಕ್ರಾಮಾಂಬಿಕಾಗೃಹಾತ್ ।
ಪ್ರಗೃಹ್ಯ ಪಾಣಿನಾ ಭೃತ್ಯಾಂ ರತ್ನಮುದ್ರೋಪಶೋಭಿನಾ
॥ ೫೦ ॥

ತಾಂ ದೇವಮಾಯಾಮಿವ ವೀರಮೋಹಿನೀಂ
ಸುಮಧ್ಯಮಾಂ ಕುಂಡಲಮಂಡಿತಾನನಾಮ್ ।
ಶ್ಯಾಮಾಂ ನಿತಂಬಾರ್ಪಿತರತ್ನಮೇಖಲಾಂ
ವ್ಯಂಜತ್ಸ್ತನೀಂ ಕುಂತಲಶಂಕಿತೇಕ್ಷಣಾಮ್ ॥ ೫೧ ॥

ಶುಚಿಸ್ಮಿತಾಂ ಬಿಂಬಫಲಾಧರದ್ಯುತಿ-
ಶೋಣಾಯಮಾನದ್ವಿಜಕುಂದಕುಡ್ಮಲಾಮ್ ।
ಪದಾ ಚಲಂತೀಂ ಕಲಹಂಸಗಾಮಿನೀಂ
ಶಿಂಜತ್ಕಲಾನೂಪುರಧಾಮಶೋಭಿನಾ ।
ವಿಲೋಕ್ಯ ವೀರಾ ಮುಮುಹುಃ ಸಮಾಗತಾ
ಯಶಸ್ವಿನಸ್ತತ್ಕೃತಹೃಚ್ಛಯಾರ್ದಿತಾಃ ॥ ೫೨ ॥

ಯಾಂ ವೀಕ್ಷ್ಯ ತೇ ನೃಪತಯಸ್ತದುದಾರಹಾಸ-
ವ್ರೀಡಾವಲೋಕಹೃತಚೇತಸ ಉಜ್ಝಿತಾಸ್ತ್ರಾಃ ।
ಪೇತುಃ ಕ್ಷಿತೌ ಗಜರಥಾಶ್ವಗತಾ ವಿಮೂಢಾ
ಯಾತ್ರಾಚ್ಛಲೇನ ಹರಯೇಽರ್ಪಯತೀಂ ಸ್ವಶೋಭಾಮ್ ॥ ೫೩ ॥

ರುಕ್ಮಿಣಿಯು ಭಗವತಿಯಲ್ಲಿ ಪ್ರಾರ್ಥಿಸುತ್ತಾಳೆ – ಜಗದಂಬೇ! ನಿನ್ನ ಮಡಿಲಲ್ಲಿ ಕುಳಿತಿರುವ ಗಣಪತಿಗೆ ಮತ್ತು ನಿನಗೆ ನಾನು ಪದೇ-ಪದೇ ನಮಸ್ಕರಿಸುತ್ತೇನೆ. ತಾಯೆ! ಭಗವಾನ್ ಶ್ರೀಕೃಷ್ಣನೇ ನನ್ನ ಪತಿಯಾಗುವಂತೆ ಅನುಗ್ರಹಿಸಿ ಆಶೀರ್ವದಿಸು. ॥ ೪೬ ॥ ಬಳಿಕ ರುಕ್ಮಿಣಿಯು ಜಲ ಗಂಧ, ಅಕ್ಷತೆ, ವಸ್ತ್ರ, ಪುಷ್ಪಹಾರ, ಆಭೂಷಣಗಳು, ಧೂಪ, ದೀಪಾದಿಗಳಿಂದಲೂ, ನಾನಾ ವಿಧವಾದ ನೈವೇದ್ಯಗಳಿಂದಲೂ, ಕಾಣಿಕೆಗಳಿಂದಲೂ, ಮಂಗಳ ಆರತಿಗಳಿಂದಲೂ ಅಂಬಿಕೆಯನ್ನು ಪೂಜಿಸಿದಳು. ॥ ೪೭ ॥ ಅನಂತರ ಸುಮಂಗಲಿಯರಾದ ಬ್ರಾಹ್ಮಣ ಸ್ತ್ರೀಯರಿಗೆ ಮೇಲೆ ಹೇಳಿದ ಪೂಜಾ-ಸಾಮಗ್ರಿಗಳಿಂದಲೂ, ಉಪ್ಪು, ಅಪೂಪ, ತಾಂಬೂಲ, ಕಂಠಸೂತ್ರ, ಹಣ್ಣುಗಳು, ಕಬ್ಬು ಇತ್ಯಾದಿಗಳಿಂದಲೂ ವಿಧಿವತ್ತಾಗಿ ಪೂಜೆಯನ್ನು ಸಲ್ಲಿಸಿದಳು. ॥ ೪೮ ॥ ಬ್ರಾಹ್ಮಣ ಸ್ತ್ರೀಯರು ರಾಜಕುಮಾರಿಗೆ ಪ್ರಸಾದವನ್ನಿತ್ತು ಆಶೀರ್ವದಿಸಿದರು. ಮದುಮಗಳು ಬ್ರಾಹ್ಮಣಿಯರಿಗೂ, ಜಗದಂಬೆಗೂ ನಮಸ್ಕರಿಸಿ ಪ್ರಸಾದವನ್ನು ಸ್ವೀಕರಿಸಿದಳು. ॥ ೪೯ ॥ ಬಳಿಕ ರಾಜಕುಮಾರಿಯು ಮೌನವನ್ನು ಮುರಿದು ರತ್ನಖಚಿತವಾದ ಉಂಗುರದಿಂದ ಶೋಭಾಯಮಾನವಾದ ತನ್ನ ಕೈಯಿಂದ ಸೇವಕಿಯೊಬ್ಬಳ ಕೈಯನ್ನು ಹಿಡಿದುಕೊಂಡು ಅಂಬಿಕಾಗುಡಿಯಿಂದ ಹೊರಬಿದ್ದಳು. ॥ ೫೦ ॥

ಪರೀಕ್ಷಿತನೇ! ರುಕ್ಮಿಣಿಯು ಭಗವಂತನ ಮಾಯೆಯಂತೆಯೇ ವೀರಾಧಿವೀರರನ್ನು ವಿಮೋಹಗೊಳಿಸುತ್ತಿದ್ದಳು. ಆಕೆಯ ಕಟಿ ಪ್ರದೇಶವು ಸುಂದರವಾಗಿಯೂ, ತೆಳುವಾಗಿಯೂ ಇತ್ತು. ಥಳ ಥಳಿಸುವ ಕುಂಡಲಗಳಿಂದ ಮುಖಕಮಲವು ಸಮಲಂಕೃತವಾಗಿತ್ತು. ಯೌವನದ ಹೊಸ್ತಿಲನ್ನು ಆಗತಾನೇ ಮೆಟ್ಟಿದ್ದಳು. ನಿತಂಬವು ರತ್ನಮಯವಾದ ಸೊಂಟಪಟ್ಟಿಯಿಂದ ಅಲಂಕೃತವಾಗಿತ್ತು. ವಕ್ಷಸ್ಥಳವು ಆಗತಾನೇ ಎದ್ದು ಕಾಣುತ್ತಿತ್ತು. ಮುಂಗುರುಳುಗಳು ಮುಂದೆ ಚಾಚಿಕೊಂಡು ಇದ್ದುದರಿಂದ ನೋಟವು ಚಂಚಲ ವಾಗಿತ್ತು. ॥ ೫೧ ॥ ಆಕೆಯ ತುಟಿಗಳಲ್ಲಿ ಮನೋಹರವಾದ ಮುಗುಳ್ನಗೆ ಇತ್ತು, ತೊಂಡೆಹಣ್ಣಿನಂತಿದ್ದ ಅವಳ ತುಟಿಯ ಕೆಂಪಿನಿಂದ ಮಲ್ಲಿಗೆ ಮೊಗ್ಗುಗಳಂತಿದ್ದ ಆಕೆಯ ಹಲ್ಲುಗಳು ಸ್ವಲ್ಪ ಕೆಂಪಾಗಿ ಕಾಣುತ್ತಿದ್ದವು. ಝಣ-ಝಣಿಸುತ್ತಿದ್ದ ಕಾಲಂದುಗೆಗಳ ಕಾಂತಿಯಿಂದ ಮನೋಹರವಾಗಿ ಕಾಣುತ್ತಿದ್ದ ಕೋಮಲವಾದ ಕಾಲುಗಳಿಂದ ರಾಜಹಂಸದಂತೆ ನಡೆಯುತ್ತಿದ್ದಳು. ರುಕ್ಮಿಣಿಯ ಅಂತಹ ಅನುಪಮವಾದ ಅಂಗಕಾಂತಿಯನ್ನು ನೋಡಿ ಅಲ್ಲಿಗೆ ಬಂದ ದೊಡ್ಡ-ದೊಡ್ಡ ಯಶಸ್ವೀ ವೀರರೆಲ್ಲರೂ ಮೋಹಿತ ರಾದರು. ಮನ್ಮಥನೂ ಭಗವಂತನ ಕಾರ್ಯವನ್ನು ಸಾಧಿಸಿ ಕೊಡಲು ತನ್ನ ಹೂಬಾಣಗಳಿಂದ ಅವರ ಹೃದಯಗಳನ್ನು ಜರ್ಜರಿತವಾಗಿಸಿದ್ದನು. ॥ ೫೨ ॥ ರುಕ್ಮಿಣಿಯು ಹೀಗೆ ಯಾತ್ರೆಯ ವ್ಯಾಜದಿಂದ ಮಂದಗತಿಯಿಂದ ನಡೆಯುತ್ತಾ ಭಗವಾನ್ ಶ್ರೀಕೃಷ್ಣನಿಗೆ ತನ್ನ ಸೌಂದರ್ಯವನ್ನು ಅರ್ಪಿಸುತ್ತಿದ್ದಳು. ಆಕೆಯ ಲೋಕೋತ್ತರವಾದ ಮುಕ್ತಮಂದಹಾಸವನ್ನು ಹಾಗೂ ಕುಡಿ ನೋಟವನ್ನು ಕಂಡು ಬುದ್ಧಿಗೆಟ್ಟ ನರಪತಿಗಳು ತಾವು ಹಿಡಿದಿದ್ದ ಆಯುಧಗಳನ್ನು ಬಿಸಾಡಿ ತಾವು ಕುಳಿತಿದ್ದ ರಥಾಶ್ವ-ಗಜಗಳ ಮೇಲಿಂದ ಕೆಳಕ್ಕೆ ಬಿದ್ದು ಹೋದರು. ॥ ೫೩ ॥

ಸೈವಂ ಶನೈಶ್ಚಲಯತೀ ಚಲಪದ್ಮಕೋಶೌ
ಪ್ರಾಪ್ತಿಂ ತದಾ ಭಗವತಃ ಪ್ರಸಮೀಕ್ಷಮಾಣಾ ।
ಉತ್ಸಾರ್ಯ ವಾಮಕರಜೈರಲಕಾನಪಾಂಗೈಃ
ಪ್ರಾಪ್ತಾನ್ ಹ್ರಿಯೈಕ್ಷತ ನೃಪಾನ್ ದದೃಶೇಽಚ್ಯುತಂಸಾ ॥ ೫೪ ॥

ತಾಂ ರಾಜಕನ್ಯಾಂ ರಥಮಾರುರುಕ್ಷತೀಂ
ಜಹಾರ ಕೃಷ್ಣೋ ದ್ವಿಷತಾಂ ಸಮೀಕ್ಷತಾಮ್ ।
ರಥಂ ಸಮಾರೋಪ್ಯ ಸುಪರ್ಣಲಕ್ಷಣಂ
ರಾಜನ್ಯಚಕ್ರಂ ಪರಿಭೂಯ ಮಾಧವಃ ॥ ೫೫ ॥

ತತೋ ಯಯೌ ರಾಮಪುರೋಗಮೈಃ ಶನೈಃ
ಸೃಗಾಲಮಧ್ಯಾದಿವ ಭಾಗಹೃದ್ಧರಿಃ ॥ ೫೬ ॥

ತಂ ಮಾನಿನಃ ಸ್ವಾಭಿಭವಂ ಯಶಃಕ್ಷಯಂ
ಪರೇ ಜರಾಸಂಧವಶಾ ನ ಸೇಹಿರೇ ।
ಅಹೋ ಧಿಗಸ್ಮಾನ್ ಯಶ ಆತ್ತಧನ್ವನಾಂ
ಗೋಪೈರ್ಹೃತಂ ಕೇಸರಿಣಾಂ ಮೃಗೈರಿವ ॥ ೫೭ ॥

ಹೀಗೆ ರುಕ್ಮಿಣಿಯು ಭಗವಾನ್ ಶ್ರೀಕೃಷ್ಣನ ಶುಭಾಗಮನವನ್ನು ಪ್ರತೀಕ್ಷೆ ಮಾಡುತ್ತಾ ಕಮಲದಂತಹ ಸುಕೋಮಲವಾದ ಪಾದಪದ್ಮಗಳಿಂದ ಮೆಲ್ಲ-ಮೆಲ್ಲನೆ ನಡೆದುಕೊಂಡು ಹೋಗುತ್ತಿದ್ದಳು. ಮುಖವನ್ನು ಮುಚ್ಚುತ್ತಿದ್ದ ಮುಂಗುರುಳುಗಳನ್ನು ಎಡಗೈ ಬೆರಳುಗಳಿಂದ ಹಿಂದಕ್ಕೆ ಸರಿಸಿ, ಅಲ್ಲಿ ಬಂದಿರುವ ರಾಜರನ್ನು ಲಜ್ಜೆಯಿಂದ ಕೂಡಿದ ಕಡೆಗಣ್ಣಿನಿಂದ ನೋಡುತ್ತಿದ್ದಳು. ಹಾಗೆಯೇ ಆಕೆಗೆ ಶ್ಯಾಮಸುಂದರನಾದ ಶ್ರೀಕೃಷ್ಣನ ದರ್ಶನವಾಯಿತು. ॥ ೫೪ ॥ ರಾಜಕುಮಾರಿ ರುಕ್ಮಿಣಿಯು ರಥದಲ್ಲಿ ಹತ್ತಲು ಅಪೇಕ್ಷಿಸುತ್ತಿದ್ದಾಗಲೇ ಭಗವಾನ್ ಶ್ರೀಕೃಷ್ಣನು ಸಮಸ್ತ ಶತ್ರುಗಳು ನೋಡು ನೋಡುತ್ತಿರುವಂತೆ ರುಕ್ಮಿಣಿಯನ್ನು ಎತ್ತಿಕೊಂಡು, ನೂರಾರು ರಾಜರ ತಲೆಯನ್ನು ಮೆಟ್ಟಿ, ಗರುಡಧ್ವಜದಿಂದ ಶೋಭಿಸುವ ತನ್ನ ರಥದಲ್ಲಿ ಕುಳ್ಳಿರಿಸಿಕೊಂಡನು. ॥ ೫೫ ॥ ಬಳಿಕ ನರಿಗಳ ಮಧ್ಯದಲ್ಲಿದ್ದ ತನ್ನ ಬೇಟೆಯನ್ನು ಸಿಂಹವು ಎತ್ತಿಕೊಂಡು ಹೋಗುವಂತೆ ನರಿಗಳಂತಿದ್ದ ರಾಜರ ಮಧ್ಯದಿಂದ ರುಕ್ಮಿಣಿಯನ್ನು ಎತ್ತಿಕೊಂಡು ಶ್ರೀಕೃಷ್ಣನು ಬಲರಾಮಾದಿ ಯದುವಂಶೀಯ ಯೋಧರೊಡನೆ ಅಲ್ಲಿಂದ ಹೊರಟನು. ॥ ೫೬ ॥ ಆ ಸಮಯದಲ್ಲಿ ಜರಾಸಂಧನ ವಶವರ್ತಿಗಳಾದ ದುರಭಿಮಾನಿ ರಾಜರುಗಳಿಗೆ ಯಶಃಕೀರ್ತಿ ನಾಶಕವಾದ ಇಂತಹ ತಿರಸ್ಕಾರವನ್ನು ಸಹಿಸಿಕೊಳ್ಳಲಾಗಲಿಲ್ಲ. ಅವರೆಲ್ಲರೂ ಕೆರಳಿ ಕೂಗಾಡತೊಡಗಿದರು - ಆಹಾ ! ಆಯುಧಗಳನ್ನು ಹಿಡಿದು ನಿಂತಿರುವ ನಮಗೆ ಧಿಕ್ಕಾರವಿರಲಿ. ಸಿಂಹಗಳಿಗೆ ಸೇರಬೇಕಾದ ಭಾಗವನ್ನು ನರಿಗಳು ಅಪಹರಿಸುವಂತೆ ನಮ್ಮ ಯಶಸ್ಸನ್ನು ಸಾಧಾರಣರಾದ ಗೊಲ್ಲರು ಇಂದು ಅಪಹರಿಸಿಬಿಟ್ಟರಲ್ಲ! ॥ ೫೭ ॥

ಐವತ್ತಮೂರನೆಯ ಅಧ್ಯಾಯವು ಮುಗಿಯಿತು. ॥ ೫೩ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಉತ್ತರಾರ್ಧೇ ರುಕ್ಮಿಣೀಹರಣಂ ನಾಮ ತ್ರಿಪಂಚಾಶತ್ತಮೋಽಧ್ಯಾಯಃ ॥ ೫೩ ॥

# ಐವತ್ತನಾಲ್ಕನೆಯ ಅಧ್ಯಾಯ

## ಶಿಶುಪಾಲನ ಅನುಯಾಯಿಗಳ ಮತ್ತು ರುಕ್ಮಿಯ ಪರಾಜಯ - ಶ್ರೀಕೃಷ್ಣ ರುಕ್ಮಿಣಿಯರ ವಿವಾಹ

*ಶ್ರೀಶುಕ ಉವಾಚ*

ಇತಿ ಸರ್ವೇ ಸುಸಂರಬ್ಧಾ ವಾಹಾನಾರುಹ್ಯ ದಂಶಿತಾಃ ।
ಸ್ವೈಃ ಸ್ವೈರ್ಬಲೈಃ ಪರಿಕ್ರಾಂತಾ ಅನ್ವೀಯುರ್ಧೃತಕಾರ್ಮುಕಾಃ ॥ ೧ ॥

ತಾನಾಪತತ ಆಲೋಕ್ಯ ಯಾದವಾನೀಕಯೂಥಪಾಃ ।
ತಸ್ಥುಸ್ತತ್ಸಮ್ಮುಖಾ ರಾಜನ್ವಿಸ್ಫೂರ್ಜ್ಯ ಸ್ವಧನೂಂಷಿ ತೇ ॥ ೨ ॥

ಶ್ರೀಶುಕಮಹಾಮುನಿಗಳು ಹೇಳುತ್ತಾರೆ - ಎಲೈ ಪರೀಕ್ಷಿತನೇ ! ಹೀಗೆ ಹೇಳಿ-ಕೇಳಿ ಎಲ್ಲ ರಾಜರೂ ಕೋಪದಿಂದ ಕಿಡಿ-ಕಿಡಿಯಾದರು. ಕವಚಗಳನ್ನು ಧರಿಸಿ ವಾಹನಗಳನ್ನೇರಿದರು. ತಮ್ಮ ತಮ್ಮ ಸೈನ್ಯದೊಂದಿಗೆ ಧನಸ್ಸನ್ನೆತ್ತಿಕೊಂಡು ಶ್ರೀಕೃಷ್ಣನನ್ನು ಹಿಂಬಾಲಿಸಿದರು. ॥ ೧ ॥ ರಾಜೇಂದ್ರನೇ! ಶತ್ರುಗಳು ತಮ್ಮ ಮೇಲೆ ಆಕ್ರಮಿಸಿ ಬರುತ್ತಿರುವುದನ್ನು ನೋಡಿದ ಯದುವಂಶೀಯರಾದ ಸೇನಾಪತಿಗಳು ಹಿಂದಕ್ಕೆ ತಿರುಗಿ ಧನುಸ್ಸುಗಳನ್ನು ಟೆಂಕರಿಸುತ್ತಾ ಶತ್ರುಸೈನ್ಯದ ಇದಿರಾಗಿ ಸಿದ್ಧರಾಗಿ ನಿಂತರು. ॥ ೨ ॥

ಅಶ್ವಪೃಷ್ಠೇ ಗಜಸ್ಕಂಧೇ ರಥೋಪಸ್ಥೇ ಚ ಕೋವಿದಾಃ ।
ಮುಮುಚುಃ ಶರವರ್ಷಾಣಿ ಮೇಘಾ ಅದ್ರಿಷ್ವಪೋ ಯಥಾ ॥ ೩ ॥

ಪತ್ಯುರ್ಬಲಂ ಶರಾಸಾರೈಶ್ಛನ್ನಂ ವೀಕ್ಷ್ಯ ಸುಮಧ್ಯಮಾ ।
ಸವ್ರೀಡಮೈಕ್ಷತ್ತದ್ವಕ್ತ್ರಂ ಭಯವಿಹ್ವಲಲೋಚನಾ ॥ ೪ ॥

ಪ್ರಹಸ್ಯ ಭಗವಾನಾಹ ಮಾ ಸ್ಮ ಭೈರ್ವಾಮಲೋಚನೇ ।
ವಿನಂಕ್ಷ್ಯತ್ಯಧುನೈವೈತತ್ತಾವಕೈಃ ಶಾತ್ರವಂ ಬಲಮ್ ॥ ೫ ॥

ತೇಷಾಂ ತದ್ವಿಕ್ರಮಂ ವೀರಾ ಗದಸಂಕರ್ಷಣಾದಯಃ ।
ಅಮೃಷ್ಯಮಾಣಾ ನಾರಾಚೈರ್ಜಘ್ನುರ್ಹಯಗಜಾನ್ ರಥಾನ್ ॥ ೬ ॥

ಪೇತುಃ ಶಿರಾಂಸಿ ರಥಿನಾಮಶ್ವಿನಾಂ ಗಜಿನಾಂ ಭುವಿ ।
ಸಕುಂಡಲಕಿರೀಟಾನಿ ಸೋಷ್ಣೀಷಾಣಿ ಚ ಕೋಟಿಶಃ ॥ ೭ ॥

ಹಸ್ತಾಃ ಸಾಸಿಗದೇಷ್ವಾಸಾಃ ಕರಭಾ ಊರವೋಽಙ್ಘ್ರಯಃ ।
ಅಶ್ವಾಶ್ವತರನಾಗೋಷ್ಟ್ರಖರಮರ್ತ್ಯಶಿರಾಂಸಿ ಚ ॥ ೮ ॥

ಹನ್ಯಮಾನಬಲಾನೀಕಾ ವೃಷ್ಣಿಭಿರ್ಜಯಕಾಂಕ್ಷಿಭಿಃ ।
ರಾಜಾನೋ ವಿಮುಖಾ ಜಗ್ಮುರ್ಜರಾಸಂಧಪುರಸ್ಸರಾಃ ॥ ೯ ॥

ಶಿಶುಪಾಲಂ ಸಮಭ್ಯೇತ್ಯ ಹೃತದಾರಮಿವಾತುರಮ್ ।
ನಷ್ಟತ್ವಿಷಂ ಗತೋತ್ಸಾಹಂ ಶುಷ್ಯದ್ವದನಮಬ್ರುವನ್ ॥ ೧೦ ॥

ಭೋ ಭೋಃ ಪುರುಷಶಾರ್ದೂಲ ದೌರ್ಮನಸ್ಯಮಿದಂ ತ್ಯಜ ।
ನ ಪ್ರಿಯಾಪ್ರಿಯಯೋ ರಾಜನ್ ನಿಷ್ಠಾ ದೇಹಿಷು ದೃಶ್ಯತೇ ॥ ೧೧ ॥

ಯಥಾ ದಾರುಮಯೀ ಯೋಷಿನ್ನೃತ್ಯತೇ ಕುಹಕೇಚ್ಛಯಾ ।
ಏವಮೀಶ್ವರತಂತ್ರೋಽಯಮೀಹತೇ ಸುಖದುಃಖಯೋಃ ॥ ೧೨ ॥

ಶೌರೇಃ ಸಪ್ತದಶಾಹಂ ವೈ ಸಂಯುಗಾನಿ ಪರಾಜಿತಃ ।
ತ್ರಯೋವಿಂಶತಿಭಿಃ ಸೈನ್ಯೈರ್ಜಿಗ್ಯ ಏಕಮಹಂ ಪರಮ್ ॥ ೧೩ ॥

ಜರಾಸಂಧನ ಸೇನೆಯಲ್ಲಿ ಕೆಲವರು ಕುದುರೆಗಳ ಮೇಲೆ, ಕೆಲವರು ಆನೆಗಳ ಮೇಲೆ, ಕೆಲವರು ರಥದಲ್ಲಿ ಹತ್ತಿಕುಳಿತಿದ್ದರು. ಅವರೆಲ್ಲರೂ ಧನುರ್ವೇದದ ಮರ್ಮಜ್ಞರಾಗಿದ್ದರು. ಅವರು ಯದುವಂಶೀಯರ ಮೇಲೆ – ಮೇಘಗಳು ಪರ್ವತಗಳ ಮೇಲೆ ಮಳೆಗರೆಯುವಂತೆ ಬಾಣಗಳ ವೃಷ್ಟಿಯನ್ನೇ ಸುರಿಸಿಬಿಟ್ಟರು. ॥ ೩ ॥ ಪರಮ ಸುಂದರಿಯಾದ ರುಕ್ಮಿಣಿಯು ತನ್ನ ಪತಿಯಾದ ಶ್ರೀಕೃಷ್ಣನ ಸೇನೆಯು ಶತ್ರುಪಕ್ಷದವರ ಬಾಣಗಳ ವರ್ಷದಿಂದ ಮುಚ್ಚಿ ಹೋದುದನ್ನು ಕಂಡು ಲಜ್ಜೆಯೊಂದಿಗೆ ಭಯಗೊಂಡ ಕಣ್ಣುಗಳಿಂದ ಭಗವಾನ್ ಶ್ರೀಕೃಷ್ಣನ ಮುಖವನ್ನು ನೋಡಿದಳು. ॥ ೪ ॥ ಭಗವಂತನು ನಗುತ್ತಾ ಹೇಳಿದನು – ಸುಂದರೀ ! ಭಯಪಡಬೇಡ. ನಮ್ಮ ಕಡೆಯ ಸೈನ್ಯವು ಶತ್ರುಸೈನ್ಯವನ್ನು ಈಗಿಂದೀಗಲೇ ಧ್ವಂಸ ಮಾಡಿಬಿಡುತ್ತದೆ. ॥ ೫ ॥ ಇತ್ತ ಗದ-ಸಂಕರ್ಷಣರೇ ಮೊದಲಾದ ಯದುವಂಶೀಯ ವೀರರು ಶತ್ರುಗಳ ಪರಾಕ್ರಮವನ್ನು ನೋಡಿ ಸಹಿಸದೆ ತಮ್ಮ ಬಾಣಗಳಿಂದ ಶತ್ರುಗಳ ಗಜಾಶ್ವರಥಗಳನ್ನು ತುಂಡರಿಸ ತೊಡಗಿದರು. ॥ ೬ ॥ ಇವರ ಬಾಣಗಳಿಂದ ರಥ, ಕುದುರೆಗಳ ಮತ್ತು ಆನೆಗಳ ಮೇಲೆ ಕುಳಿತ ಪ್ರತಿಪಕ್ಷದ ವೀರರ ಕುಂಡಲ, ಕಿರೀಟ, ರುಮಾಲುಗಳಿಂದ ಸಮಲಂಕೃತವಾದ ಕೋಟಿ ಕೋಟಿ ತಲೆಗಳೂ, ಖಡ್ಗ, ಗದೆ, ಧನುಷ್ಯಗಳಿಂದ ಕೂಡಿದ ಕೈಗಳೂ, ತೊಡೆಗಳೂ, ಕಾಲುಗಳೂ ಕತ್ತರಿಸಲ್ಪಟ್ಟು ಭೂಮಿಗೆ ಬೀಳತೊಡಗಿದವು. ಹೀಗೆಯೇ ಕುದುರೆಗಳೂ, ಹೇಸರಕತ್ತೆಗಳೂ, ಒಂಟೆಗಳೂ, ಆನೆಗಳೂ, ಕತ್ತೆಗಳೂ ಮತ್ತು ಮನುಷ್ಯರ ತಲೆಗಳೂ ಲಕ್ಷ-ಲಕ್ಷ ಸಂಖ್ಯೆಯಲ್ಲಿ ನೆಲಕ್ಕುರುಳಿದವು. ॥ ೭-೮ ॥ ವಿಜಯಾಕಾಂಕ್ಷಿಗಳಾದ ಯಾದವರು ಶತ್ರುಸೈನ್ಯವೆಲ್ಲವನ್ನೂ ಧ್ವಂಸಮಾಡಿಬಿಟ್ಟರು. ಜರಾಸಂಧನೇ ಮೊದಲಾದ ರಾಜರೆಲ್ಲರೂ ಯುದ್ಧದಿಂದ ಪರಾಙ್ಮುಖರಾಗಿ ಪಲಾಯನ ಮಾಡಿದರು. ॥ ೯ ॥

ಅತ್ತ ಶಿಶುಪಾಲನು ತನ್ನನ್ನು ವಿವಾಹವಾಗಬೇಕಾಗಿದ್ದ ಭಾವೀ ಪತ್ನಿಯು ಕೈತಪ್ಪಿಹೋದ ಕಾರಣ ಅತೀವ ದುಃಖಿತನಾಗಿದ್ದನು. ಅವನ ಶರೀರದಲ್ಲಿ ಕಾಂತಿಯೂ, ಉತ್ಸಾಹವೂ ಉಡುಗಿ ಹೋಗಿತ್ತು. ಮುಖ ಬಾಡಿತ್ತು. ಜರಾಸಂಧನು ಅವನ ಬಳಿಗೆ ಹೋಗಿ ಸಮಾಧಾನ ಪಡಿಸುತ್ತಾ ಹೇಳಿದನು. ॥ ೧೦ ॥ ಶಿಶುಪಾಲನೇ ! ನೀನಾದರೋ ಶ್ರೇಷ್ಠ ಪುರುಷನಾಗಿರುವೆ. ಈ ದುಃಖದ ಮನೋಭಾವವನ್ನು ತ್ಯಜಿಸು. ತನ್ನ ಮನಸ್ಸಿಗೆ ಅನುಕೂಲವಾಗಿರಲೀ, ಪ್ರತಿಕೂಲವಾಗಿರಲೀ ಯಾವುದೇ ಮಾತು ಸ್ಥಿರವಾಗಿ ಇರುವುದನ್ನು ಪ್ರಾಣಿಗಳ ಜೀವನದಲ್ಲಿ ಕಂಡುಬರುವುದಿಲ್ಲ. ॥ ೧೧ ॥ ಸೂತ್ರದ ಬೊಂಬೆಯು ಆಡಿಸುವವನ ಇಚ್ಛೆಗನುಸಾರವಾಗಿಯೇ ಕುಣಿಯುವಂತೆ, ಈ ಜೀವನೂ ಕೂಡ ಭಗವದಿಚ್ಛೆಗೆ ಅಧೀನನಾಗಿ ಸುಖ-ದುಃಖಗಳ ನಡುವೆ ಸಿಕ್ಕಿಕೊಂಡು ಪರಮಾತ್ಮನು ಕುಣಿಸಿದಂತೆ ಕುಣಿಯುತ್ತಾ ಇರುತ್ತಾನೆ. ॥ ೧೨ ॥ ಇಪ್ಪತ್ತಮೂರು ಅಕ್ಷೌಹಿಣೀ ಸೈನ್ಯಸಮೇತನಾದ ನನ್ನನ್ನು ಶ್ರೀಕೃಷ್ಣನು ಹದಿನೇಳು ಬಾರಿ ಪರಾಜಯಗೊಳಿಸಿದನು. ಆದರೆ ನಾನು ಧೈರ್ಯಗೆಡಲಿಲ್ಲ. ಹದಿನೆಂಟನೆಯ ಬಾರಿ ನಾನು ಅವನನ್ನು ಸೋಲಿಸಲಿಲ್ಲವೇ ! ॥ ೧೩ ॥

ತಥಾಪ್ಯಹಂ ನ ಶೋಚಾಮಿ ನ ಪ್ರಹೃಷ್ಯಾಮಿ ಕರ್ಹಿಚಿತ್ ।
ಕಾಲೇನ ದೈವಯುಕ್ತೇನ ಜಾನನ್ ವಿದ್ರಾವಿತಂ ಜಗತ್
॥ ೧೪ ॥

ಅಧುನಾಪಿ ವಯಂ ಸರ್ವೇ ವೀರಯೂಥಪಯೂಥಪಾಃ ।
ಪರಾಜಿತಾಃ ಫಲ್ಗುತಂತ್ರೈರ್ಯದುಭಿಃ ಕೃಷ್ಣಪಾಲಿತೈಃ
॥ ೧೫ ॥

ರಿಪವೋ ಜಿಗ್ಯುರಧುನಾ ಕಾಲ ಆತ್ಮಾನುಸಾರಿಣಿ ।
ತದಾ ವಯಂ ವಿಜೇಷ್ಯಾಮೋ ಯದಾ ಕಾಲಃ ಪ್ರದಕ್ಷಿಣಃ
॥ ೧೬ ॥

ಏವಂ ಪ್ರಬೋಧಿತೋ ಮಿತ್ರೈಶ್ಚೈದ್ಯೋಽಗಾತ್ ಸಾನುಗಃ ಪುರಮ್ ।
ಹತಶೇಷಾಃ ಪುನಸ್ತೇಽಪಿ ಯಯುಃ ಸ್ವಂ ಸ್ವಂ ಪುರಂ ನೃಪಾಃ
॥ ೧೭ ॥

ರುಕ್ಮೀ ತು ರಾಕ್ಷಸೋದ್ವಾಹಂ ಕೃಷ್ಣದ್ವಿಡಸಹನ್ ಸ್ವಸುಃ ।
ಪೃಷ್ಠತೋಽನ್ವಗಮತ್ ಕೃಷ್ಣಮಕ್ಷೌಹಿಣ್ಯಾ ವೃತೋ ಬಲೀ
॥ ೧೮ ॥

ರುಕ್ಮ್ಯಮರ್ಷೀ ಸುಸಂರಬ್ಧಃ ಶೃಣ್ವತಾಂ ಸರ್ವಭೂಭುಜಾಮ್ ।
ಪ್ರತಿಜಜ್ಞೇ ಮಹಾಬಾಹುರ್ದಂಶಿತಃ ಸಶರಾಸನಃ
॥ ೧೯ ॥

ಅಹತ್ವಾ ಸಮರೇ ಕೃಷ್ಣಮಪ್ರತ್ಯೂಹ್ಯ ಚ ರುಕ್ಮಿಣೀಮ್ ।
ಕುಂಡಿನಂ ನ ಪ್ರವೇಕ್ಷ್ಯಾಮಿ ಸತ್ಯಮೇತದ್ಬ್ರವೀಮಿ ವಃ
॥ ೨೦ ॥

ಇತ್ಯುಕ್ತ್ವಾ ರಥಮಾರುಹ್ಯ ಸಾರಥಿಂ ಪ್ರಾಹ ಸತ್ವರಃ ।
ಚೋದಯಾಶ್ವಾನ್ ಯತಃ ಕೃಷ್ಣಸ್ತಸ್ಯ ಮೇ ಸಂಯುಗಂ ಭವೇತ್
॥ ೨೧ ॥

ಅದ್ಯಾಹಂ ನಿಶಿತೈರ್ಬಾಣೈರ್ಗೋಪಾಲಸ್ಯ ಸುದುರ್ಮತೇಃ ।
ನೇಷ್ಯೇ ವೀರ್ಯಮದಂ ಯೇನ ಸ್ವಸಾ ಮೇ ಪ್ರಸಭಂ ಹೃತಾ
॥ ೨೨ ॥

ವಿಕತ್ಥಮಾನಃ ಕುಮತಿರೀಶ್ವರಸ್ಯಾಪ್ರಮಾಣವಿತ್ ।
ರಥೇನೈಕೇನ ಗೋವಿಂದಂ ತಿಷ್ಠ ತಿಷ್ಠೇತ್ಯಥಾಹ್ವಯತ್
॥ ೨೩ ॥

ಧನುರ್ವಿಕೃಷ್ಯ ಸುದೃಢಂ ಜಘ್ನೇ ಕೃಷ್ಣಂ ತ್ರಿಭಿಃ ಶರೈಃ ।
ಆಹ ಚಾತ್ರ ಕ್ಷಣಂ ತಿಷ್ಠ ಯದೂನಾಂ ಕುಲಪಾಂಸನ
॥ ೨೪ ॥

ಕುತ್ರ ಯಾಸಿ ಸ್ವಸಾರಂ ಮೇ ಮುಷಿತ್ವಾ ಧ್ವಾಂಕ್ಷವದ್ಧವಿಃ ।
ಹರಿಷ್ಯೇಽದ್ಯ ಮದಂ ಮಂದ ಮಾಯಿನಃ ಕೂಟಯೋಧಿನಃ
॥ ೨೫ ॥

ಹೀಗಿದ್ದರೂ ಇದಕ್ಕಾಗಿ ನಾನು ಎಂದೂ ಶೋಕಿಸುವುದಿಲ್ಲ, ಹರ್ಷಿತನಾಗುವುದಿಲ್ಲ. ಏಕೆಂದರೆ, ದೈವಕ್ಕೆ ವಶವಾದ ಕಾಲನಿಂದ ಈ ಜಗತ್ತು ನಡೆಸಲ್ಪಡುತ್ತದೆ ಎಂಬುದನ್ನು ನಾನು ಅರಿತಿದ್ದೇನೆ. ॥ ೧೪ ॥ ನಾವುಗಳು ಮಹಾ-ಮಹಾ ವೀರ ಸೇನಾಪತಿಗಳಿಗೂ ಒಡೆಯರಾಗಿದ್ದೇವೆ. ಇದರಲ್ಲಿ ಸಂದೇಹವೇ ಇಲ್ಲ. ಹೀಗಿದ್ದರೂ ಈಗ ಶ್ರೀಕೃಷ್ಣನಿಂದ ಸುರಕ್ಷಿತವಾದ ಯಾದವರ ಅಲ್ಪ ಸೇನೆಯೂ ನಮ್ಮನ್ನು ಸೋಲಿಸಿಬಿಟ್ಟಿದೆ. ॥ ೧೫ ॥ ಈ ಸಲ ನಮ್ಮ ಶತ್ರುಗಳ ವಿಜಯವಾಗಿದೆ. ಏಕೆಂದರೆ, ಕಾಲವು ಅವರಿಗೆ ಅನುಕೂಲವಾಗಿತ್ತು. ಕಾಲವು ನಮಗೆ ಅನುಕೂಲವಾದಾಗ ನಾವುಗಳೂ ಕೂಡ ಅವರನ್ನು ಗೆಲ್ಲಬಲ್ಲೆವು. ॥ ೧೬ ॥ ಪರೀಕ್ಷಿತನೇ! ಜರಾಸಂಧನೆ ಮೊದಲಾದ ಮಿತ್ರರು ಹೀಗೆ ಸಮಾಧಾನ ಹೇಳಿದಾಗ ಚೇದಿರಾಜ ಶಿಶುಪಾಲನು ತನ್ನ ಅನುಯಾಯಿ ಗಳೊಂದಿಗೆ ತನ್ನ ರಾಜಧಾನಿಗೆ ಮರಳಿದನು. ಸಾಯದೇ ಉಳಿದಿರುವ ಇತರ ಅವರ ಮಿತ್ರರಾಜರೂ ತಮ್ಮ-ತಮ್ಮ ನಗರಗಳಿಗೆ ಹಿಂದಿರುಗಿದರು. ॥ ೧೭ ॥

ರುಕ್ಮಿಣಿಯ ಹಿರಿಯಣ್ಣನಾದ ರುಕ್ಮಿಯು ಶ್ರೀಕೃಷ್ಣನನ್ನು ಬಹಳವಾಗಿ ದ್ವೇಷಿಸುತ್ತಿದ್ದನು. ತನ್ನ ತಂಗಿಯನ್ನು ಶ್ರೀಕೃಷ್ಣನು ಕದ್ದುಕೊಂಡು ಹೋಗಿ ರಾಕ್ಷಸವಿಧಿಯಿಂದ ವಿವಾಹವಾಗುವುದನ್ನು ಅವನಿಂದ ಸಹಿಸಲಾಗಲಿಲ್ಲ. ಪರಾಕ್ರಮಿಯಾದ ರುಕ್ಮಿಯು ಒಂದು ಅಕ್ಷೌಹಿಣಿ ಸೈನ್ಯದೊಂದಿಗೆ ಶ್ರೀಕೃಷ್ಣನನ್ನು ಹಿಂಬಾಲಿಸಿದನು. ॥ ೧೮ ॥ ಮಹಾಬಾಹುವಾದ ರುಕ್ಮಿಯು ಕ್ರೋಧದಿಂದ ಉರಿಯುತ್ತಾ, ಕವಚವನ್ನು ಧರಿಸಿ, ಧನುಸ್ಸನ್ನೆತ್ತಿಕೊಂಡು ಸಮಸ್ತ ರಾಜರ ಮುಂದೆ ಹೀಗೆ ಪ್ರತಿಜ್ಞೆ ಮಾಡಿದನು. ॥ ೧೯ ॥ 'ಕೃಷ್ಣನನ್ನು ಯುದ್ಧದಲ್ಲಿ ಕೊಲ್ಲದೆ, ನನ್ನ ತಂಗಿಯಾದ ರುಕ್ಮಿಣಿಯನ್ನು ಹಿಂದಕ್ಕೆ ಕರೆತರದೆ ನಾನು ಕುಂಡಿನ ಪುರವನ್ನು ಪ್ರವೇಶಿಸುವುದಿಲ್ಲ'. ಸತ್ಯವಾದ ಈ ಮಾತನ್ನು ಪ್ರತಿಜ್ಞಾಪೂರ್ವಕ ನಿಮಗೆ ಹೇಳುತ್ತಿದ್ದೇನೆ. ॥ ೨೦ ॥ ಪರೀಕ್ಷಿತನೇ! ಹೀಗೆ ಹೇಳಿ ಅವನು ರಥವನ್ನು ಹತ್ತಿ, ಸಾರಥಿಗೆ ಹೇಳಿದನು - 'ಕೃಷ್ಣನಿರುವಲ್ಲಿಗೆ ನನ್ನ ರಥವನ್ನು ಬೇಗನೇ ಓಡಿಸು. ಇಂದು ನಾನು ಅವನೊಡನೆ ಯುದ್ಧಮಾಡಬೇಕಾಗಿದೆ. ॥ ೨೧ ॥ ನನ್ನ ತಂಗಿಯನ್ನು ಬಲಾತ್ಕಾರವಾಗಿ ಸೆಳೆದುಕೊಂಡು ಹೋದ ಆ ದುರ್ಬುದ್ಧಿಯಾದ ಗೋಪಾಲನ ಪರಾಕ್ರಮ ಮದವನ್ನು ತೀಕ್ಷ್ಣವಾದ ಬಾಣಗಳಿಂದ ತೊಡೆದುಹಾಕುತ್ತೇನೆ.' ॥ ೨೨ ॥ ಪರೀಕ್ಷಿತ ಮಹಾರಾಜ! ಕುಬುದ್ಧಿಯವನಾಗಿದ್ದ ರುಕ್ಮಿಯು ಸರ್ವೇಶ್ವರನಾದ ಶ್ರೀಕೃಷ್ಣನ ಪ್ರಭಾವವೆಷ್ಟೆಂಬುದನ್ನು ತಿಳಿದವನಾಗಿರಲಿಲ್ಲ. ಅವನು ಮನಬಂದಂತೆ ಬಡಬಡಿಸುತ್ತಾ ರಥೈಕ ಸಹಾಯಕನಾಗಿ ಶ್ರೀಕೃಷ್ಣನ ರಥದ ಇದಿರಿಗೆ ಹೋಗಿ ನಿಲ್ಲು! ನಿಲ್ಲು! ಎಂದು ಹೇಳುತ್ತಾ ಅವನನ್ನು ಯುದ್ಧಕ್ಕೆ ಆಹ್ವಾನಿಸಿದನು. ॥ ೨೩ ॥ ಅವನು ಸುದೃಢವಾದ ಧನುಸ್ಸನ್ನು ಬಲವಾಗಿ ಸೆಳೆದು ಶ್ರೀಕೃಷ್ಣನ ಮೇಲೆ ಮೂರು ಬಾಣಗಳನ್ನು ಪ್ರಯೋಗಿಸಿ, ಹೇಳಿದನು - ಯದುಕುಲಕಲಂಕನೇ! ಕ್ಷಣಕಾಲ ನಿಲ್ಲು, ಕಾಗೆಯು ಮಂತ್ರಪೂತವಾದ ಹವಿಸ್ಸನ್ನು ಎತ್ತಿಕೊಂಡು ಹೋಗುವಂತೆ, ನನ್ನ ತಂಗಿಯನ್ನು ಕದ್ದುಕೊಂಡು ಎಲ್ಲಿಗೆ ಹೋಗುತ್ತಿರುವೆ? ಕೂಟ ಯುದ್ಧ ಮಾಡುವುದರಲ್ಲಿ ನಿಷ್ಣಾತನಾದ, ಮಾಯಾವಿಯಾದ, ಮಂದಬುದ್ಧಿಯವನಾದ ನಿನ್ನ ಮದವನ್ನು ಕ್ಷಣಮಾತ್ರದಲ್ಲಿ ಅಡಗಿಸಿಬಿಡುತ್ತೇನೆ. ॥ ೨೪-೨೫ ॥

ಯಾವನ್ನ ಮೇ ಹತೋ ಬಾಣೈಃ
ಶಯೀಥಾ ಮುಂಚ ದಾರಿಕಾಮ್ ।
ಸ್ಮಯನ್ ಕೃಷ್ಣೋ ಧನುಶ್ಛಿತ್ತ್ವಾ
ಷಡ್ಭಿರ್ವಿವ್ಯಾಧ ರುಕ್ಮಿಣಮ್ ॥ ೨೬ ॥

ಅಷ್ಟಭಿಶ್ಚತುರೋ ವಾಹಾನ್ ದ್ವಾಭ್ಯಾಂ ಸೂತಂ ಧ್ವಜಂ ತ್ರಿಭಿಃ ।
ಸ ಚಾನ್ಯದ್ಧನುರಾದಾಯ ಕೃಷ್ಣಂ ವಿವ್ಯಾಧ ಪಂಚಭಿಃ
॥ ೨೭ ॥

ತೈಸ್ತಾಡಿತಃ ಶರೌಘೈಸ್ತು ಚಿಚ್ಛೇದ ಧನುರಚ್ಯುತಃ ।
ಪುನರನ್ಯದುಪಾದತ್ತ ತದಪ್ಯಚ್ಛಿನದವ್ಯಯಃ
॥ ೨೮ ॥

ಪರಿಘಂ ಪಟ್ಟಿಶಂ ಶೂಲಂ ಚರ್ಮಾಸೀ ಶಕ್ತಿತೋಮರೌ ।
ಯದ್ಯದಾಯುಧಮಾದತ್ತ ತತ್ ಸರ್ವಂ ಸೋಽಚ್ಛಿನದ್ಧರಿಃ
॥ ೨೯ ॥

ತತೋ ರಥಾದವಪ್ಲುತ್ಯ ಖಡ್ಗಪಾಣಿರ್ಜಿಘಾಂಸಯಾ ।
ಕೃಷ್ಣಮಭ್ಯದ್ರವತ್ ಕ್ರುದ್ಧಃ ಪತಂಗ ಇವ ಪಾವಕಮ್
॥ ೩೦ ॥

ತಸ್ಯ ಚಾಪತತಃ ಖಡ್ಗಂ ತಿಲಶಶ್ಚರ್ಮ ಚೇಷುಭಿಃ ।
ಛಿತ್ತ್ವಾಸಿಮಾದದೇ ತಿಗ್ಮಂ ರುಕ್ಮಿಣಂ ಹಂತುಮುದ್ಯತಃ
॥ ೩೧ ॥

ದೃಷ್ಟ್ವಾ ಭ್ರಾತೃವಧೋದ್ಯೋಗಂ ರುಕ್ಮಿಣೀ ಭಯವಿಹ್ವಲಾ ।
ಪತಿತ್ವಾ ಪಾದಯೋರ್ಭರ್ತುರುವಾಚ ಕರುಣಂ ಸತೀ
॥ ೩೨ ॥

ಯೋಗೇಶ್ವರಾಪ್ರಮೇಯಾತ್ಮನ್ ದೇವದೇವ ಜಗತ್ಪತೇ ।
ಹಂತುಂ ನಾರ್ಹಸಿ ಕಲ್ಯಾಣ ಭ್ರಾತರಂ ಮೇ ಮಹಾಭುಜ
॥ ೩೩ ॥

ಶ್ರೀಶುಕ ಉವಾಚ

ತಯಾ ಪರಿತ್ರಾಸವಿಕಂಪಿತಾಂಗಯಾ
ಶುಚಾವಶುಷ್ಯನ್ಮುಖರುದ್ಧಕಂಠಯಾ ।
ಕಾತರ್ಯವಿಸ್ರಂಸಿತಹೇಮಮಾಲಯಾ
ಗೃಹೀತಪಾದಃ ಕರುಣೋ ನ್ಯವರ್ತತ ॥ ೩೪ ॥

ಚೈಲೇನ ಬದ್ಧ್ವಾ ತಮಸಾಧುಕಾರಿಣಂ
ಸಶ್ಮಶ್ರುಕೇಶಂ ಪ್ರವಪನ್ ವ್ಯರೂಪಯತ್ ।
ತಾವನ್ಮಮರ್ದುಃ ಪರಸೈನ್ಯಮದ್ಭುತಂ
ಯದುಪ್ರವೀರಾ ನಲಿನೀಂ ಯಥಾ ಗಜಾಃ ॥ ೩೫ ॥

ನೋಡು, ನನ್ನ ಬಾಣಗಳಿಂದ ಹತನಾಗಿ ಭೂಮಿಯ ಮೇಲೆ ಮಲಗುವ ಮೊದಲೇ ನನ್ನ ತಂಗಿಯನ್ನು ಬಿಟ್ಟು ಹೋಗು. ರುಕ್ಮಿಯ ಮಾತನ್ನು ಕೇಳಿ ಭಗವಾನ್ ಶ್ರೀಕೃಷ್ಣನು ನಗುನಗುತ್ತಲೇ ಅವನ ಧನಸ್ಸನ್ನು ತುಂಡರಿಸಿ, ಅವನ ಮೇಲೆ ಆರು ಬಾಣಗಳನ್ನು ಎಸೆದನು. ॥ ೨೬ ॥ ಹಾಗೆಯೇ ಶ್ರೀಕೃಷ್ಣನು ಎಂಟು ಬಾಣಗಳನ್ನು ಕುದುರೆಗಳ ಮೇಲೆ, ಎರಡು ಬಾಣಗಳನ್ನು ಸಾರಥಿಗೆ ಹೊಡೆದು, ಮೂರು ಬಾಣಗಳಿಂದ ಅವನ ರಥದ ಧ್ವಜವನ್ನು ಕೆಡಹಿದನು. ಆಗ ರುಕ್ಮಿಯು ಮತ್ತೊಂದು ಧನುಸ್ಸನ್ನೆತ್ತಿಕೊಂಡು ಶ್ರೀಕೃಷ್ಣನಿಗೆ ಐದು ಬಾಣಗಳನ್ನು ಪ್ರಯೋಗಿಸಿದನು. ॥ ೨೭ ॥ ಆ ಬಾಣಗಳು ಬರುತ್ತಿರುವಂತೆ ಶ್ರೀಕೃಷ್ಣನು ಅವನ್ನು ತುಂಡರಿಸಿ, ರುಕ್ಮಿಯ ಧನುಷ್ಷವನ್ನೂ ಕತ್ತರಿಸಿ ಬಿಟ್ಟನು. ಅವನು ಮತ್ತೊಂದು ಧನುಸ್ಸನ್ನು ಎತ್ತಿಕೊಂಡು ಹೆದೆಯೇರಿಸುವ ಮೊದಲೇ ಅದನ್ನೂ ತುಂಡರಿಸಿ ಬಿಟ್ಟನು. ॥ ೨೮ ॥ ಹೀಗೆ ರುಕ್ಮಿಯು ಪರಿಘ, ಪಟ್ಟಿಶ, ಶೂಲ, ಕತ್ತಿ-ಗುರಾಣಿ, ಶಕ್ತಿ ತೋಮರ ಮೊದಲಾದ ಶಸ್ತ್ರಗಳನ್ನು ಎತ್ತಿಕೊಳ್ಳುತ್ತಿದ್ದಂತೆಯೇ ಅವೆಲ್ಲವನ್ನೂ ಪ್ರಹರಿಸುವ ಮೊದಲೇ ಭಗವಂತನು ಕತ್ತರಿಸಿಹಾಕಿದನು. ॥ ೨೯ ॥ ಆಗ ರುಕ್ಮಿಯು ಅತ್ಯಂತ ಕ್ರುದ್ಧನಾಗಿ ಕೈಯಲ್ಲಿ ಖಡ್ಗವನ್ನು ಹಿಡಿದುಕೊಂಡು ರಥದಿಂದ ಧುಮುಕಿ ಕೃಷ್ಣನನ್ನು ಕೊಂದುಬಿಡಬೇಕೆಂಬ ಛಲದಿಂದ ಪತಂಗದ ಹುಳುವು ಬೆಂಕಿಯ ಕಡೆಗೆ ರಭಸದಿಂದ ಧಾವಿಸುವಂತೆ ಶ್ರೀಕೃಷ್ಣನ ಕಡೆಗೆ ನುಗ್ಗಿದನು. ॥ ೩೦ ॥ ರುಕ್ಮಿಯು ತನ್ನ ಮೇಲೆ ಬೀಳಲು ರಭಸದಿಂದ ಮುನ್ನುಗ್ಗುತ್ತಿರುವುದನ್ನು ನೋಡಿದ ಭಗವಂತನು ತನ್ನ ಬಾಣಗಳಿಂದ ಕತ್ತಿ-ಗುರಾಣಿಗಳನ್ನು ನುಚ್ಚುನೂರಾಗಿಸಿದನು ಹಾಗೂ ಅವನನ್ನು ಕೊಂದೇ ಬಿಡಲು ಕೈಯಲ್ಲಿ ಖಡ್ಗವನ್ನೆತ್ತಿಕೊಂಡನು. ॥ ೩೧ ॥ ಭಗವಂತನು ತನ್ನ ಅಣ್ಣನಾದ ರುಕ್ಮಿಯನ್ನು ಕೊಂದೇ ಬಿಡುವನೆಂದು ನೋಡಿದ ರುಕ್ಮಿಣಿಯು ಭಯದಿಂದ ಕಳವಳಗೊಂಡು ಪ್ರಿಯತಮನಾದ ಭಗವಾನ್ ಶ್ರೀಕೃಷ್ಣನ ಚರಣಗಳಲ್ಲಿ ಬಿದ್ದು ಕರುಣಾಸ್ವರದಿಂದ ಇಂತೆಂದಳು. ॥ ೩೨ ॥ "ದೇವದೇವನೇ ! ಜಗತ್ಪತಿಯೇ ! ಯಾರಿಂದಲೂ ತಿಳಿಯಲಾಗದ ಆತ್ಮಸ್ವರೂಪವುಳ್ಳವನೇ ! ಮಹಾಭುಜನೇ ! ಕಲ್ಯಾಣಸ್ವರೂಪನೇ ! ಪ್ರಭುವೇ ! ನನ್ನ ಅಣ್ಣನನ್ನು ಸಂಹರಿಸುವುದು ನಿನಗೆ ಯೋಗ್ಯವಲ್ಲ." ॥ ೩೩ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** - ಪರೀಕ್ಷಿತನೇ ! ಆ ಸಮಯದಲ್ಲಿ ರುಕ್ಮಿಣಿಯ ಒಂದೊಂದು ಅವಯವಗಳೂ ಭಯದಿಂದ ನಡುಗುತ್ತಿದ್ದವು. ಶೋಕ ಹೆಚ್ಚಳದಿಂದ ಮುಖವು ಬಾಡಿ, ಗಂಟಲು ಒಣಗಿಹೋಗಿತ್ತು. ಕಾತುರಳಾದ ಆಕೆಯ ಕೊರಳಿನ ಸ್ವರ್ಣಹಾರವು ಕೆಳಗೆ ಬಿದ್ದುಬಿಟ್ಟಿತು. ಇದೇ ಸ್ಥಿತಿಯಲ್ಲಿ ಭಗವಂತನ ಚರಣಗಳನ್ನು ಹಿಡಿದುಕೊಂಡಿದ್ದಳು. ಪರಮ ದಯಾಳುವಾದ ಭಗವಂತನು ಭಯಗೊಂಡಿರುವ ಆಕೆಯನ್ನು ನೋಡಿ ರುಕ್ಮಿಯನ್ನು ಕೊಲ್ಲುವ ವಿಚಾರವನ್ನು ಬಿಟ್ಟು ಬಿಟ್ಟನು. ॥ ೩೪ ॥ ಹೀಗಿದ್ದರೂ ರುಕ್ಮಿಯು ಕೃಷ್ಣನ ಕುರಿತು ಪ್ರತೀಕಾರ ಮಾಡುವುದನ್ನು ಬಿಡಲಿಲ್ಲ. ಆಗ ಭಗವಾನ್ ಶ್ರೀಕೃಷ್ಣನು ಅವನ ವಲ್ಲಿಯಿಂದಲೇ ಅವನನ್ನು ಕಟ್ಟಿ ಗಡ್ಡ-ಮೀಸೆ-ತಲೆಗೂದಲು ಅಲ್ಲಲ್ಲಿ ಬೋಳಿಸಿ ಕುರೂಪಗೊಳಿಸಿದನು. ಅಷ್ಟರಲ್ಲಿ ಯಾದವವೀರರು ಶತ್ರು ಸೈನ್ಯವೆಲ್ಲವನ್ನೂ ಆನೆಯು ಕಮಲ ವನವನ್ನು ಧ್ವಂಸಮಾಡುವಂತೆ ನಿರ್ನಾಮಮಾಡಿದರು.॥ ೩೫ ॥

ಕೃಷ್ಣಾಂತಿಕಮುಪವ್ರಜ್ಯ ದದೃಶುಸ್ತತ್ರ ರುಕ್ಮಿಣಮ್ ।
ತಥಾಭೂತಂ ಹತಪ್ರಾಯಂ ದೃಷ್ಟ್ವಾ ಸಂಕರ್ಷಣೋ ವಿಭುಃ ।
ವಿಮುಚ್ಯ ಬದ್ಧಂ ಕರುಣೋ ಭಗವಾನ್ ಕೃಷ್ಣಮಬ್ರವೀತ್
॥ ೩೬ ॥

ಮತ್ತೆ ಅವರು ಮರಳಿ ಶ್ರೀಕೃಷ್ಣನ ಬಳಿಗೆ ಬಂದು ನೋಡುತ್ತಾರೆ ರುಕ್ಮಿಯು ಬಟ್ಟೆಯಿಂದ ಕಟ್ಟಲ್ಪಟ್ಟು ಹತಪ್ರಾಯನಾಗಿಬಿದ್ದಿದ್ದನು. ಅವನನ್ನು ನೋಡಿದ ಭಗವಾನ್ ಬಲರಾಮನಿಗೆ ದಯೆ ಉಂಟಾಗಿ, ಅವನ ಬಂಧವನ್ನು ಬಿಡಿಸಿ ಶ್ರೀಕೃಷ್ಣನಲ್ಲಿ ಹೇಳಿದನು - ॥ ೩೬ ॥

ಅಸಾಧ್ವಿದಂ ತ್ವಯಾ ಕೃಷ್ಣ ಕೃತಮಸ್ಮಜ್ಜುಗುಪ್ಸಿತಮ್ ।
ವಪನಂ ಶ್ಮಶ್ರುಕೇಶಾನಾಂ ವೈರೂಪ್ಯಂ ಸುಹೃದೋ ವಧಃ
॥ ೩೭ ॥

ಕೃಷ್ಣ! ನೀನು ಮಾಡಿದುದು ಸರಿಯಲ್ಲ. ಇಂತಹ ನಿಂದಿತ ಕಾರ್ಯವು ನಮ್ಮಂತಹವರಿಗೆ ಯೋಗ್ಯವಲ್ಲ. ತಮ್ಮ ಸಂಬಂಧಿಕರ ಗಡ್ಡ-ಮೀಸೆ ಬೋಳಿಸಿ ವಿರೂಪಗೊಳಿಸುವುದು ಒಂದು ರೀತಿಯಿಂದ ವಧೆಯೆ ಆಗಿದೆ. ॥ ೩೭ ॥ ಬಳಿಕ ಬಲರಾಮನು ರುಕ್ಮಿಣಿಯನ್ನು ಸಂಬೋಧಿಸಿ ಹೇಳಿದನು - ಸಾಧ್ವಿಯೇ! ಶ್ರೀಕೃಷ್ಣನು ನಿನ್ನಣ್ಣನನ್ನು ವಿರೂಪಗೊಳಿಸಿದನೆಂದು ನಮ್ಮ ಕುರಿತು ನೀನು ದೋಷ ವೆಣಿಸಬೇಡ. ಏಕೆಂದರೆ, ಜೀವನಿಗೆ ಸುಖ-ದುಃಖಗಳನ್ನು ಕೊಡುವವನು ಬೇರೆಯಾರೂ ಆಗಿರದೆ ತನ್ನ ಕರ್ಮಗಳನ್ನೇ ಭೋಗಿಸ ಬೇಕಾಗುತ್ತದೆ. ॥ ೩೮ ॥ ಈಗ ಶ್ರೀಕೃಷ್ಣನನ್ನು ಸಂಬೋಧಿಸಿ ಹೇಳುತ್ತಾನೆ - ಕೃಷ್ಣಾ! ನಮ್ಮ ಸಂಬಂಧಿಯು ವಧಾರ್ಹವಾದ ಅಪರಾಧವನ್ನೇ ಮಾಡಿದ್ದರೂ ನಾವು ಅವನನ್ನು ವಧಿಸಬಾರದು. ಅವನನ್ನು ಬಿಟ್ಟುಬಿಡಬೇಕು. ಅವನಾದರೋ ತನ್ನ ದೋಷದಿಂದಲೇ ಸತ್ತುಹೋಗಿರುವನು. ಅಂತಹವನನ್ನು ಪುನಃ ಸಾಯಿಸಲು ಹೋಗುವುದೇ ? ॥ ೩೯ ॥ ಮತ್ತೆ ರುಕ್ಮಿಣಿಗೆ ಹೇಳುತ್ತಾನೆ ಸಾಧ್ವಿಮಣಿಯೇ! ಧರ್ಮರಕ್ಷಣೆಗಾಗಿ ಕ್ಷತ್ರಿಯ ನಾದವನು ತನ್ನ ಸೋದರನನ್ನೇ ಕೊಲ್ಲಬೇಕಾಗುತ್ತದೆ. ಬ್ರಹ್ಮನೇ ಕ್ಷತ್ರಿಯರಿಗೆ ಈ ಧರ್ಮವನ್ನು ವಿಧಿಸಿದ್ದಾನೆ. ಅದಕ್ಕಾಗಿ ಈ ಕ್ಷತ್ರಿಯಧರ್ಮವು ಅತ್ಯಂತ ಘೋರವಾಗಿದೆ. ॥ ೪೦ ॥ ಪುನಃ ಶ್ರೀಕೃಷ್ಣನಲ್ಲಿ ಹೇಳಿದನು ತಮ್ಮ! ಧನಮದದಿಂದ ಅಂಧರಾದ ದುರಹಂಕಾರಿಗಳು ರಾಜ್ಯ, ಭೂಮಿ, ಧನ, ಸ್ತ್ರೀ, ಮಾನ, ತೇಜಸ್ಸು ಇವುಗಳಿಂದಲೋ ಅಥವಾ ಬೇರೆ ಯಾವುದೇ ಕಾರಣದಿಂದ ತನ್ನ ಬಂಧುಗಳನ್ನೇ ತಿರಸ್ಕರಿಸುತ್ತಾರೆ. ॥ ೪೧ ॥ ರುಕ್ಮಿಣಿಯ ಬಳಿ ಹೇಳುತ್ತಾನೆ - ಸಾಧ್ವಿ ! ನಿನ್ನ ಬಂಧುಗಳು ಸಮಸ್ತ ಪ್ರಾಣಿಗಳ ವಿಷಯದಲ್ಲಿ ದುರ್ಭಾವನೆಯನ್ನಿಟ್ಟುಕೊಂಡಿರುವರು. ನಾವು ಅವರಿಗೆ ಒಳ್ಳೆಯದಾಗಲೆಂದೇ ಈ ಶಿಕ್ಷೆಯನ್ನು ವಿಧಿಸಿದ್ದೇವೆ. ಇದನ್ನು ನೀನು ಅಜ್ಞಾನಿಗಳಂತೆ ಅಮಂಗಳವೆಂದು ಭಾವಿಸಬೇಡ. ॥ ೪೨ ॥ ದೇವಿ ! ಭಗವಂತನ ಮಾಯೆಯಿಂದ ಮೋಹಿತರಾಗಿ ದೇಹವನ್ನೇ ಆತ್ಮನೆಂದು ತಿಳಿದವರಿಗೆ ಇವನು ಮಿತ್ರನು, ಇವನು ಶತ್ರುವು, ಇವನು ಉದಾಸೀನ ಇಂತಹ ಆತ್ಮಮೋಹ ಉಂಟಾಗುತ್ತದೆ. ॥ ೪೩ ॥ ಸಮಸ್ತ ದೇಹಧಾರಿಗಳ ಆತ್ಮವು ಒಂದೇ ಆಗಿದೆ. ಅದಕ್ಕೆ ಮಾಯೆಯ ಯಾವ ಸಂಬಂಧವೂ ಇಲ್ಲ. ನೀರು, ಘಟ ಮುಂತಾದವುಗಳ ಭೇದದಿಂದ ಒಂದೇಯಾಗಿರುವ ಸೂರ್ಯ, ಚಂದ್ರರೇ ಮೊದಲಾದ ಪ್ರಕಾಶಮಾನ ಪದಾರ್ಥಗಳು ಮತ್ತು ಆಕಾಶವು ಭಿನ್ನ-ಭಿನ್ನವಾಗಿ ಕಂಡುಬರುವಂತೆ ಮೂರ್ಖಜನರು ಶರೀರ ಭೇದದಿಂದ ಆತ್ಮನಲ್ಲಿ ಭೇದವನ್ನು ಭಾವಿಸುತ್ತಾರೆ. ॥ ೪೪ ॥

ಮೈವಾಸ್ಮಾನ್ ಸಾಧ್ವ್ಯಸೂಯೇಥಾ
ಭ್ರಾತುರ್ವೈರೂಪ್ಯಚಿಂತಯಾ ।
ಸುಖದುಃಖದೋ ನ ಚಾನ್ಯೋಽಸ್ತಿ
ಯತಃ ಸ್ವಕೃತಭುಕ್ ಪುಮಾನ್ ॥ ೩೮ ॥

ಬಂಧುರ್ವಧಾರ್ಹದೋಷೋಽಪಿ ನ ಬಂಧೋರ್ವಧಮರ್ಹತಿ ।
ತ್ಯಾಜ್ಯಃ ಸ್ವೇನೈವ ದೋಷೇಣ ಹತಃ ಕಿಂ ಹನ್ಯತೇ ಪುನಃ
॥ ೩೯ ॥

ಕ್ಷತ್ರಿಯಾಣಾಮಯಂ ಧರ್ಮಃ ಪ್ರಜಾಪತಿವಿನಿರ್ಮಿತಃ ।
ಭ್ರಾತಾಪಿ ಭ್ರಾತರಂ ಹನ್ಯಾದ್ಯೇನ ಘೋರತರಸ್ತತಃ
॥ ೪೦ ॥

ರಾಜ್ಯಸ್ಯ ಭೂಮೇರ್ವಿತ್ತಸ್ಯ ಸ್ತ್ರಿಯೋ ಮಾನಸ್ಯ ತೇಜಸಃ ।
ಮಾನಿನೋಽನ್ಯಸ್ಯ ವಾ ಹೇತೋಃ ಶ್ರೀಮದಾಂಧಾಃ ಕ್ಷಿಪಂತಿ ಹಿ
॥ ೪೧ ॥

ತವೇಯಂ ವಿಷಮಾ ಬುದ್ಧಿಃ ಸರ್ವಭೂತೇಷು ದುರ್ಹೃದಾಮ್ ।
ಯನ್ಮನ್ಯಸೇ ಸದಾಭದ್ರಂ ಸುಹೃದಾಂ ಭದ್ರಮಜ್ಞವತ್
॥ ೪೨ ॥

ಆತ್ಮಮೋಹೋ ನೃಣಾಮೇಷ ಕಲ್ಪ್ಯತೇ ದೇವಮಾಯಯಾ ।
ಸುಹೃದ್ದುರ್ಹೃದುದಾಸೀನ ಇತಿ ದೇಹಾತ್ಮಮಾನಿನಾಮ್
॥ ೪೩ ॥

ಏಕ ಏವ ಪರೋ ಹ್ಯಾತ್ಮಾ ಸರ್ವೇಷಾಮಪಿ ದೇಹಿನಾಮ್ ।
ನಾನೇವ ಗೃಹ್ಯತೇ ಮೂಢೈರ್ಯಥಾ ಜ್ಯೋತಿರ್ಯಥಾ ನಭಃ
॥ ೪೪ ॥

ದೇಹ ಆದ್ಯಂತವಾನೇಷ ದ್ರವ್ಯಪ್ರಾಣಗುಣಾತ್ಮಕಃ ।
ಆತ್ಮನ್ಯವಿದ್ಯಯಾ ಕ್ಲೃಪ್ತಃ ಸಂಸಾರಯತಿ ದೇಹಿನಮ್ ॥ ೪೫ ॥

ನಾತ್ಮನೋಽನ್ಯೇನ ಸಂಯೋಗೋ ವಿಯೋಗಶ್ಚಾಸತಃ ಸತಿ ।
ತದ್ಧೇತುತ್ವಾತ್ತತ್ಪ್ರಸಿದ್ಧೇರ್ದೃಗ್ರೂಪಾಭ್ಯಾಂ ಯಥಾ ರವೇಃ ॥ ೪೬ ॥

ಜನ್ಮಾದಯಸ್ತು ದೇಹಸ್ಯ ವಿಕ್ರಿಯಾ ನಾತ್ಮನಃ ಕ್ವಚಿತ್ ।
ಕಲಾನಾಮಿವ ನೈವೇಂದೋರ್ಮೃತಿರ್ಹ್ಯಸ್ಯ ಕುಹೂರಿವ ॥ ೪೭ ॥

ಯಥಾ ಶಯಾನ ಆತ್ಮಾನಂ ವಿಷಯಾನ್ ಫಲಮೇವ ಚ ।
ಅನುಭುಂಕ್ತೇಽಪ್ಯಸತ್ಯರ್ಥೇ ತಥಾಽಽಪ್ನೋತ್ಯಬುಧೋ ಭವಮ್ ॥ ೪೮ ॥

ತಸ್ಮಾದಜ್ಞಾನಜಂ ಶೋಕಮಾತ್ಮಶೋಷವಿಮೋಹನಮ್ ।
ತತ್ತ್ವಜ್ಞಾನೇನ ನಿರ್ಹೃತ್ಯ ಸ್ವಸ್ಥಾ ಭವ ಶುಚಿಸ್ಮಿತೇ ॥ ೪೯ ॥

ಶ್ರೀಶುಕ ಉವಾಚ

ಏವಂ ಭಗವತಾ ತನ್ವೀ ರಾಮೇಣ ಪ್ರತಿಬೋಧಿತಾ ।
ವೈಮನಸ್ಯಂ ಪರಿತ್ಯಜ್ಯ ಮನೋ ಬುದ್ಧ್ಯಾ ಸಮಾದಧೇ ॥ ೫೦ ॥

ಪ್ರಾಣಾವಶೇಷ ಉತ್ಸೃಷ್ಟೋ ದ್ವಿಡ್ಭಿರ್ಹತಬಲಪ್ರಭಃ ।
ಸ್ಮರನ್ ವಿರೂಪಕರಣಂ ವಿತಥಾತ್ಮಮನೋರಥಃ ॥ ೫೧ ॥

ಚಕ್ರೇ ಭೋಜಕಟಂ ನಾಮ ನಿವಾಸಾಯ ಮಹತ್ ಪುರಮ್ ।
ಅಹತ್ವಾ ದುರ್ಮತಿಂ ಕೃಷ್ಣಮಪ್ರತ್ಯೂಹ್ಯ ಯವೀಯಸೀಮ್ ।
ಕುಂಡಿನಂ ನ ಪ್ರವೇಕ್ಷ್ಯಾಮೀತ್ಯುಕ್ತ್ವಾ ತತ್ರಾವಸದ್ರುಷಾ ॥ ೫೨ ॥

ಈ ಶರೀರವು ಆದಿ-ಅಂತ್ಯವುಳ್ಳದ್ದು, ಪಂಚಭೂತಗಳು, ಪಂಚ ಪ್ರಾಣಗಳು, ಪಂಚತನ್ಮಾತ್ರೆಗಳು, ಮತ್ತು ತ್ರಿಗುಣಗಳೇ ಇದರ ಸ್ವರೂಪವಾಗಿದೆ. ಆತ್ಮನಲ್ಲಿರುವ ಅಜ್ಞಾನದಿಂದಲೇ ಈ ಶರೀರ ಕಲ್ಪಿತವಾಗಿದೆ. ಅದನ್ನೇ 'ನಾನು-ನನ್ನದು' ಎಂದು ತಿಳಿದು ಹುಟ್ಟು-ಸಾವಿನ ಸಂಸಾರ ಚಕ್ರದಲ್ಲಿ ಬೀಳುತ್ತಾನೆ. ॥ ೪೫ ॥ ಸಾಧ್ವಿ ! ನೇತ್ರ ಮತ್ತು ರೂಪ ಎರಡೂ ಸೂರ್ಯನಿಂದ ಪ್ರಕಾಶಿಸುತ್ತವೆ. ಸೂರ್ಯನೇ ಅವುಗಳ ಕಾರಣನಾಗಿದ್ದಾನೆ. ಆದರಿಂದ ಸೂರ್ಯನೊಂದಿಗೆ ನೇತ್ರ ಮತ್ತು ರೂಪ ಇವುಗಳ ಸಂಯೋಗ-ವಿಯೋಗ ಎಂದೂ ಆಗುವುದಿಲ್ಲ. ಹೀಗೆಯೇ ಸಮಸ್ತ ಪ್ರಪಂಚದ ಅಸ್ತಿತ್ವವು ಆತ್ಮನ ಅಸ್ತಿತ್ವದ ಕಾರಣದಿಂದಲೇ ಕಂಡುಬರುತ್ತದೆ. ಸಮಸ್ತ ಪ್ರಪಂಚದ ಪ್ರಕಾಶವು ಆತ್ಮವೇ ಆಗಿದೆ. ಹಾಗಿರುವಾಗ ಆತ್ಮನೊಂದಿಗೆ ಬೇರೆ ಅಸತ್ ಪದಾರ್ಥಗಳ ಸಂಯೋಗ-ವಿಯೋಗ ಹೇಗಾಗಬಲ್ಲದು ? ॥ ೪೬ ॥ ಹುಟ್ಟುವುದು, ಇರುವುದು, ಬೆಳೆಯುವುದು, ಬದಲಾಗುವುದು, ಕುಗ್ಗುವುದು, ಸಾಯುವುದು – ಈ ವಿಕಾರಗಳೆಲ್ಲವೂ ಶರೀರದ್ದಾಗಿರುತ್ತವೆ, ಆತ್ಮನದಲ್ಲ. ಕೃಷ್ಣಪಕ್ಷದಲ್ಲಿ ಚಂದ್ರನ ಕಲೆಗಳದ್ದೇ ಕ್ಷಯವಾಗುತ್ತದೆ, ಚಂದ್ರನದ್ದಲ್ಲ. ಆದರೆ ಅಮಾವಾಸ್ಯೆಯದಿನ ಜನರು ವ್ಯವಹಾರದಲ್ಲಿ ಚಂದ್ರನದೇ ಕ್ಷಯವಾಯಿತೆಂದು ಹೇಳುತ್ತಾ-ಕೇಳುತ್ತಾ ಇರುತ್ತಾರೆ. ಹಾಗೆಯೇ ಹುಟ್ಟು-ಸಾವು ಮುಂತಾದ ವಿಕಾರಗಳೆಲ್ಲವೂ ಶರೀರದ್ದೇ ಆಗಿರುತ್ತವೆ. ಆದರೆ ಜನರು ಭ್ರಮೆಯಿಂದ ಆತ್ಮನದೇ ಎಂದು ಭಾವಿಸುತ್ತಾರೆ. ॥ ೪೭ ॥ ಮಲಗಿರುವ ವ್ಯಕ್ತಿಯು ಯಾವುದೇ ಪದಾರ್ಥಗಳು ಇಲ್ಲದೆಯೇ ಸ್ವಪ್ನದಲ್ಲಿ ಭೋಕ್ತಾ, ಭೋಗ್ಯ ಮತ್ತು ಭೋಗರೂಪವಾದ ಫಲಗಳನ್ನು ಅನುಭವಿಸುತ್ತಾನೆ. ಹಾಗೆಯೇ ಅಜ್ಞಾನೀ ಜನರು ಮಿಥ್ಯೆಯೇ ಆದ ಸಂಸಾರ ಚಕ್ರವನ್ನು ಅನುಭವಿಸುತ್ತಾರೆ. ॥ ೪೮ ॥ ಅದಕ್ಕಾಗಿ ಸಾಧ್ವಿಯೇ ! ಅಜ್ಞಾನದಿಂದ ಉಂಟಾದ ಈ ಶೋಕವನ್ನು ತ್ಯಜಿಸು. ಅದು ಅಂತಃಕರಣವನ್ನು ಶೋಷಿಸಿಬಿಡುತ್ತದೆ ; ಮೋಹಿತಗೊಳಿಸುತ್ತದೆ. ಆದುದರಿಂದ ಈ ಶೋಕವನ್ನು ಬಿಟ್ಟು ನೀನು ನಿನ್ನ ಸ್ವರೂಪದಲ್ಲಿ ಸ್ಥಿತಳಾಗು. ॥ ೪೯ ॥

ಶ್ರೀಶುಕಮಹಾಮುನಿಗಳು ಹೇಳುತ್ತಾರೆ – ಪರೀಕ್ಷಿತನೇ ! ಬಲರಾಮನು ಈ ಪ್ರಕಾರವಾಗಿ ಸಮಜಾಯಿಸಿದಾಗ ಪರಮ ಸುಂದರಿಯಾದ ರುಕ್ಮಿಣಿಯು ತನ್ನ ಮನಸ್ಸನ್ನು ಸಾಂತ್ವನಗೊಳಿಸಿ ವಿವೇಕ ಬುದ್ಧಿಯಿಂದ ಅದನ್ನು ಸಮಾಧಾನಗೊಳಿಸಿದಳು. ॥ ೫೦ ॥ ರುಕ್ಮಿಯ ಸೈನ್ಯ ಮತ್ತು ತೇಜವು ನಾಶವಾಗಿ ಹೋಗಿತ್ತು. ಕೇವಲ ಪ್ರಾಣಗಳು ಉಳಿದಿದ್ದವು. ಅವನ ಮನಸ್ಸಿನ ಎಲ್ಲ ಆಸೆ ಆಕಾಂಕ್ಷೆಗಳು ವ್ಯರ್ಥವಾಗಿ ಹೋಗಿದ್ದವು. ಶತ್ರುಗಳು ಅವನನ್ನು ಅವಮಾನಿತಗೊಳಿಸಿ ಬಿಟ್ಟುಬಿಟ್ಟಿದ್ದರು. ತನ್ನನ್ನು ವಿರೂಪಗೊಳಿಸಿದ ಕಷ್ಟದಾಯಕ ಸ್ಮೃತಿಯನ್ನು ಅವನಿಂದ ಮರೆಯಲಾಗಲಿಲ್ಲ. ॥ ೫೧ ॥ 'ದುರ್ಬುದ್ಧಿಯಾದ ಕೃಷ್ಣನನ್ನು ಕೊಲ್ಲದೆ, ತಂಗಿಯನ್ನು ಮರಳಿ ತರದೆ ಕುಂಡಿನ ಪುರವನ್ನು ಪ್ರವೇಶಿಸುವುದಿಲ್ಲ' ಎಂದು ಅವನು ಹಿಂದೆಯೇ ಪ್ರತಿಜ್ಞೆ ಮಾಡಿದ್ದನು. ಆದ್ದರಿಂದ ಅವನು ಭೋಜಕಟ ಎಂಬ ನಗರವನ್ನು ನಿರ್ಮಿಸಿಕೊಂಡು, ಅಲ್ಲಿಯೇ ಕ್ರುದ್ಧನಾಗಿ ಇರತೊಡಗಿದನು. ॥ ೫೨ ॥

ಭಗವಾನ್ ಭೀಷ್ಮಕಸುತಾಮೇವಂ ನಿರ್ಜಿತ್ಯ ಭೂಮಿಪಾನ್ ।
ಪುರಮಾನೀಯ ವಿಧಿವದುಪಯೇಮೇ ಕುರೂದ್ವಹ ॥ ೫೩ ॥

ತದಾ ಮಹೋತ್ಸವೋ ನೃಣಾಂ ಯದುಪುರ್ಯಾಂ ಗೃಹೇ ಗೃಹೇ ।
ಅಭೂದನನ್ಯಭಾವಾನಾಂ ಕೃಷ್ಣೇ ಯದುಪತೌ ನೃಪ ॥ ೫೪ ॥

ನರಾ ನಾರ್ಯಶ್ಚ ಮುದಿತಾಃ ಪ್ರಮೃಷ್ಟಮಣಿಕುಂಡಲಾಃ ।
ಪಾರಿಬರ್ಹಮುಪಾಜಹ್ರುರ್ವರಯೋಶ್ಚಿತ್ರವಾಸಸೋಃ ॥ ೫೫ ॥

ಸಾ ವೃಷ್ಣಿಪುರ್ಯುತ್ತಭಿತೇಂದ್ರಕೇತುಭಿ-
ರ್ವಿಚಿತ್ರಮಾಲ್ಯಾಂಬರರತ್ನತೋರಣೈಃ ।
ಬಭೌ ಪ್ರತಿದ್ವಾರ್ಯುಪಕ್ಲೃಪ್ತಮಂಗಲೈ-
ರಾಪೂರ್ಣಕುಂಭಾಗುರುಧೂಪದೀಪಕೈಃ ॥ ೫೬ ॥

ಸಿಕ್ತಮಾರ್ಗಾ ಮದಚ್ಯುದ್ಭಿರಾಹೂತಪ್ರೇಷ್ಠಭೂಭುಜಾಮ್ ।
ಗಜೈರ್ದ್ವಾಃಸ್ಸು ಪರಾಮೃಷ್ಟರಂಭಾಪೂಗೋಪಶೋಭಿತಾ ॥ ೫೭ ॥

ಕುರುಸೃಂಜಯಕೈಕೇಯವಿದರ್ಭಯದುಕುಂತಯಃ ।
ಮಿಥೋ ಮುಮುದಿರೇ ತಸ್ಮಿನ್ಸಂಭ್ರಮಾತ್ ಪರಿಧಾವತಾಮ್ ॥ ೫೮ ॥

ರುಕ್ಮಿಣ್ಯಾ ಹರಣಂ ಶ್ರುತ್ವಾ ಗೀಯಮಾನಂ ತತಸ್ತತಃ ।
ರಾಜಾನೋ ರಾಜಕನ್ಯಾಶ್ಚ ಬಭೂವುರ್ಭೃಶವಿಸ್ಮಿತಾಃ ॥ ೫೯ ॥

ದ್ವಾರಕಾಯಾಮಭೂದ್ ರಾಜನ್
ಮಹಾಮೋದಃ ಪುರೌಕಸಾಮ್ ।
ರುಕ್ಮಿಣ್ಯಾ ರಮಯೋಪೇತಂ
ದೃಷ್ಟ್ವಾ ಕೃಷ್ಣಂ ಶ್ರಿಯಃಪತಿಮ್ ॥ ೬೦ ॥

ಪರೀಕ್ಷಿತನೇ! ಭಗವಾನ್ ಶ್ರೀಕೃಷ್ಣನು ಹೀಗೆ ಎಲ್ಲ ರಾಜರನ್ನು ಗೆದ್ದುಕೊಂಡು ರುಕ್ಮಿಣಿಯನ್ನು ದ್ವಾರಕೆಗೆ ಕರೆತಂದು ಆಕೆಯನ್ನು ವಿಧಿಪೂರ್ವಕವಾಗಿ ವಿವಾಹವಾದನು. ॥ ೫೩ ॥ ರಾಜೇಂದ್ರನೇ! ಯದುಪತಿಯಾದ ಶ್ರೀಕೃಷ್ಣನಲ್ಲಿ ಅನನ್ಯವಾದ ಪ್ರೇಮವನ್ನು ಇರಿಸಿಕೊಂಡಿದ್ದ ದ್ವಾರಕಾನಗರದ ನಿವಾಸಿಗಳ ಮನೆ-ಮನೆಗಳಲ್ಲಿ ಶ್ರೀಕೃಷ್ಣನ ವಿವಾಹೋತ್ಸವವನ್ನು ಆಚರಿಸಿದರು. ॥ ೫೪ ॥ ಜಗಜಗಿಸುವ ರತ್ನದ ಕುಂಡಲಗಳನ್ನು ಧರಿಸಿದ್ದ ಅಲ್ಲಿಯ ನರ-ನಾರಿಯರು ಶ್ರೀಕೃಷ್ಣ-ರುಕ್ಮಿಣಿಯರ ವಿವಾಹ ಮಹೋತ್ಸವದಿಂದ ಆನಂದಭರಿತರಾಗಿ ಚಿತ್ರ-ವಿಚಿತ್ರವಾದ ವಸ್ತ್ರಗಳನ್ನು ಧರಿಸಿದ್ದ ವಧೂ-ವರರಿಗೆ ನಾನಾ ವಿಧವಾದ ಕಾಣಿಕೆ - ಉಡುಗೊರೆಗಳನ್ನು ತಂದೊಪ್ಪಿಸಿದರು. ॥ ೫೫ ॥ ಆ ಸಮಯದಲ್ಲಿ ದ್ವಾರಕಾಪಟ್ಟಣವು ಅಪೂರ್ವವಾದ ಶೋಭೆಯಿಂದ ಬೆಳಗುತ್ತಿದ್ದಿತು. ಎತ್ತರವಾದ ಇಂದ್ರಧ್ವಜಗಳು ಎಲ್ಲೆಡೆಯಲ್ಲಿಯೂ ಹಾರಾಡುತ್ತಿದ್ದವು. ಹಲವು ಬಣ್ಣದ ಪುಷ್ಪಹಾರಗಳ, ವಸ್ತ್ರಗಳ ಮತ್ತು ಮಣಿಗಳ ತೋರಣಗಳಿಂದ ಪಟ್ಟಣವು ಸಮಲಂಕೃತವಾಗಿತ್ತು. ಪ್ರತಿ ಮನೆಯ ಬಾಗಿಲುಗಳಲ್ಲಿಯೂ ಅರಳು, ಗರಿಕೆ, ಹೂವು ಮೊದಲಾದ ಮಂಗಳ ದ್ರವ್ಯಗಳನ್ನು ಪೂರ್ಣಕುಂಭಗಳನ್ನು ಇರಿಸಿದ್ದರು. ಅಗರು-ಧೂಪಗಳಿಂದಲೂ, ಸಾಲುದೀಪಗಳಿಂದಲೂ ಅಲ್ಲಿಯ ಶೋಭೆಯು ವಿಲಕ್ಷಣವಾಗಿತ್ತು. ॥ ೫೬ ॥ ವಿವಾಹಕ್ಕೆ ಆಹ್ವಾನಿಸಲ್ಪಟ್ಟ ಮಿತ್ರ ರಾಜರ ಮತ್ತಗಜಗಳ ಮದೋದಕದಿಂದ ಅಲ್ಲಿಯ ಬೀದಿಗಳು ತೊಯ್ದು ಹೋಗಿದ್ದವು. ಬಾಗಿಲುಗಳು ಸಾರಿಸಲ್ಪಟ್ಟು ಬಾಳೆಯ ಕಂಬಗಳಿಂದಲೂ, ಹೊಂಬಾಳೆಗಳಿಂದಲೂ, ಅಲಂಕರಿಸಲ್ಪಟ್ಟು ಅತ್ಯಂತ ಶೋಭಾಯಮಾನವಾಗಿ ಕಾಣುತ್ತಿದ್ದವು. ॥ ೫೭ ॥ ಆ ವಿವಾಹಮಹೋತ್ಸವ ಸಂದರ್ಭದಲ್ಲಿ ಸಂಭ್ರಮದಿಂದ ಓಡಾಡುತ್ತಿದ್ದವರಲ್ಲಿ ಕುರು-ಸೃಂಜಯ-ಕೇಕಯ-ವಿದರ್ಭ-ಯದು ಮತ್ತು ಕುಂತೀದೇಶದ ಅರಸರೂ ಪ್ರಜೆಗಳೂ ಪರಸ್ಪರವಾಗಿ ಮಾತನಾಡಿಕೊಳ್ಳುತ್ತಾ ಆನಂದತುಂದಿಲರಾಗಿದ್ದರು. ॥ ೫೮ ॥ ಅಲ್ಲಲ್ಲಿ ಗಾಯಕರು ರುಕ್ಮಿಣೀಹರಣ ಪ್ರಸಂಗವನ್ನು ಮಧುರವಾಗಿ ಗಾಯನಮಾಡುತ್ತಿದ್ದರು. ಇದನ್ನು ಕೇಳಿದ ರಾಜರೂ ಮತ್ತು ರಾಜಕನ್ಯೆಯರೂ ಅತ್ಯಂತ ವಿಸ್ಮಿತರಾದರು. ॥ ೫೯ ॥ ರಾಜೇಂದ್ರನೇ! ಲಕ್ಷ್ಮೀದೇವಿಯು ರುಕ್ಮಿಣೀರೂಪದಲ್ಲಿದ್ದು ಸಾಕ್ಷಾತ್ ಲಕ್ಷ್ಮೀಪತಿಯಾದ ಶ್ರೀಕೃಷ್ಣನೊಡನೆ ಸೇರಿರುವುದನ್ನು ನೋಡಿ ದ್ವಾರಕಾವಾಸಿಗಳಾದ ನರ-ನಾರಿಯರೆಲ್ಲರೂ ಆನಂದ ಸಾಗರದಲ್ಲಿ ಮುಳುಗಿಹೋದರು. ॥ ೬೦ ॥

*ಐವತ್ತನಾಲ್ಕನೆಯ ಅಧ್ಯಾಯವು ಮುಗಿಯಿತು. ॥ ೫೪ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಉತ್ತರಾರ್ಧೇ
ರುಕ್ಮಿಣ್ಯುದ್ವಾಹೋತ್ಸವೋ ನಾಮ ಚತುಃಪಂಚಾಶತ್ತಮೋಽಧ್ಯಾಯಃ ॥ ೫೪ ॥

# ಐವತ್ತೈದನೆಯ ಅಧ್ಯಾಯ

## ಪ್ರದ್ಯುಮ್ನನ ಜನ್ಮ - ಶಂಬರಾಸುರನ ವಧೆ

ಶ್ರೀಶುಕ ಉವಾಚ

ಕಾಮಸ್ತು ವಾಸುದೇವಾಂಶೋ ದಗ್ಧಃ ಪ್ರಾಗ್ರುದ್ರಮನ್ಯುನಾ ।
ದೇಹೋಪಪತ್ತಯೇ ಭೂಯಸ್ತಮೇವ ಪ್ರತ್ಯಪದ್ಯತ ॥ ೧ ॥

ಸ ಏವ ಜಾತೋ ವೈದರ್ಭ್ಯಾಂ ಕೃಷ್ಣವೀರ್ಯಸಮುದ್ಭವಃ ।
ಪ್ರದ್ಯುಮ್ನ ಇತಿ ವಿಖ್ಯಾತಃ ಸರ್ವತೋಽನವಮಃ ಪಿತುಃ ॥ ೨ ॥

ತಂ ಶಂಬರಃ ಕಾಮರೂಪೀ ಹೃತ್ವಾತೋಕಮನಿರ್ದಶಮ್ ।
ಸ ವಿದಿತ್ವಾತ್ಮನಃ ಶತ್ರುಂ ಪ್ರಾಸ್ಯೋದನ್ವತ್ಯಗಾದ್ಗೃಹಮ್ ॥ ೩ ॥

ತಂ ನಿರ್ಜಗಾರ ಬಲವಾನ್ ಮೀನಃ ಸೋಽಪ್ಯಪರೈಃ ಸಹ ।
ವೃತೋ ಜಾಲೇನ ಮಹತಾ ಗೃಹೀತೋ ಮತ್ಸ್ಯಜೀವಿಭಿಃ ॥ ೪ ॥

ತಂ ಶಂಬರಾಯ ಕೈವರ್ತಾ ಉಪಾಜಹ್ರುರುಪಾಯನಮ್ ।
ಸೂದಾ ಮಹಾನಸಂ ನೀತ್ವಾವದ್ಯನ್ ಸ್ವಧಿತಿನಾದ್ಭುತಮ್ ॥ ೫ ॥

ದೃಷ್ಟ್ವಾತದುದರೇ ಬಾಲಂ ಮಾಯಾವತ್ಯೈ ನ್ಯವೇದಯನ್ ।
ನಾರದೋಽಕಥಯತ್ ಸರ್ವಂ ತಸ್ಯಾಃ ಶಂಕಿತಚೇತಸಃ ।
ಬಾಲಸ್ಯ ತತ್ತ್ವಮುತ್ಪತ್ತಿಂ ಮತ್ಸ್ಯೋದರನಿವೇಶನಮ್ ॥ ೬ ॥

ಸಾ ಚ ಕಾಮಸ್ಯ ವೈ ಪತ್ನೀ ರತಿರ್ನಾಮ ಯಶಸ್ವಿನೀ ।
ಪತ್ಯುರ್ನಿರ್ದಗ್ಧದೇಹಸ್ಯ ದೇಹೋತ್ಪತ್ತಿಂ ಪ್ರತೀಕ್ಷತೀ ॥ ೭ ॥

ನಿರೂಪಿತಾ ಶಂಬರೇಣ ಸಾ ಸೂಪೌದನಸಾಧನೇ ।
ಕಾಮದೇವಂ ಶಿಶುಂ ಬುದ್ಧ್ವಾ ಚಕ್ರೇ ಸ್ನೇಹಂ ತದಾರ್ಭಕೇ ॥ ೮ ॥

ನಾತಿದೀರ್ಘೇಣ ಕಾಲೇನ ಸ ಕಾರ್ಷ್ಣಿ ರೂಢಯೌವನಃ ।
ಜನಯಾಮಾಸ ನಾರೀಣಾಂ ವೀಕ್ಷಂತೀನಾಂ ಚ ವಿಭ್ರಮಮ್ ॥ ೯ ॥

ಶ್ರೀಶುಕಮಹಾಮುನಿಗಳು ಹೇಳುತ್ತಾರೆ - ಪರೀಕ್ಷಿತನೇ! ರುದ್ರನಕ್ರೋಧಾಗ್ನಿಯಿಂದ ದಗ್ಧನಾಗಿ ಹೋಗಿದ್ದ ಕಾಮದೇವನು ಪುನಃ ಶರೀರವನ್ನು ಹೊಂದುವುದಕ್ಕಾಗಿ, ವಾಸುದೇವನ ಅಂಶನಾದ ಅವನು ತನ್ನ ಅಂಶೀ ವಾಸುದೇವನನ್ನೇ ಆಶ್ರಯಿಸಿದನು. ॥ ೧ ॥ ಅದೇ ಕಾಮದೇವನು ಈ ಬಾರಿ ಶ್ರೀಕೃಷ್ಣನಿಂದ ರುಕ್ಮಿಣೀದೇವಿಯಲ್ಲಿ ಹುಟ್ಟಿ ಪ್ರದ್ಯುಮ್ನನೆಂಬ ಹೆಸರಿನಿಂದ ಪ್ರಸಿದ್ಧನಾದನು. ಸೌಂದರ್ಯದಿಂದಾಗಲೀ, ವೀರ್ಯ-ಪರಾಕ್ರಮದಿಂದಾಗಲೀ, ಸೌಶೀಲ್ಯಾದಿ ಗುಣಗಳಿಂದಾಗಲೀ ಅವನು ಶ್ರೀಕೃಷ್ಣನಿಂದ ಯಾವ ವಿಧದಿಂದಲೂ ಕಡಿಮೆಯಾಗಿರಲಿಲ್ಲ. ॥ ೨ ॥ ಬಾಲಕ ಪ್ರದ್ಯುಮ್ನನಿಗೆ ಇನ್ನೂ ಹತ್ತು ದಿನಗಳಾದಾಗಲೇ ಇವನೇ ತನ್ನ ಭಾವೀ ಶತ್ರುವೆಂದು ತಿಳಿದಿದ್ದ ಕಾಮರೂಪಿಯಾದ ಶಂಬರಾಸುರನು ವೇಷವನ್ನು ಮರೆಸಿ ಸೂತಿಕಾಗೃಹದಿಂದ ಅವನನ್ನು ಕದ್ದುಕೊಂಡು ಹೋಗಿ ಸಮುದ್ರಕ್ಕೆಸೆದು ತನ್ನ ಮನೆಗೆ ಹೊರಟುಹೋದನು. ॥ ೩ ॥ ಬಾಲಕ ಪ್ರದ್ಯುಮ್ನನನ್ನು ಸಮುದ್ರದಲ್ಲಿ ಒಂದು ದೊಡ್ಡ ಮೀನು ನುಂಗಿಬಿಟ್ಟಿತು. ಮೀನು ಹಿಡಿಯುವ ಬೆಸ್ತರು ದೊಡ್ಡದೊಂದು ಬಲೆಯನ್ನು ಬೀಸಿ ಇತರ ಮೀನುಗಳ ಜೊತೆಗೆ ಈ ಮೀನನ್ನು ಹಿಡಿದರು. ॥ ೪ ॥ ಪ್ರದ್ಯುಮ್ನನನ್ನು ನುಂಗಿದ ಆ ದೊಡ್ಡ ಮೀನನ್ನು ಬೆಸ್ತರು ಶಂಬರಾಸುರನಿಗೆ ಕಾಣಿಕೆಯಾಗಿ ಒಪ್ಪಿಸಿದರು. ಶಂಬರಾಸುರನ ಪಾಚಕರು ಆ ಅದ್ಭುತವಾದ ಮೀನನ್ನು ಅಡಿಗೆ ಮನೆಗೆ ಕೊಂಡುಹೋಗಿ ಕತ್ತಿಯಿಂದ ಕತ್ತರಿಸ ತೊಡಗಿದರು. ॥ ೫ ॥ ಅಡಿಗೆಯವರು ಆ ಮೀನಿನ ಹೊಟ್ಟೆಯಲ್ಲಿ ಸುಂದರವಾದ ಬಾಲಕನನ್ನು ನೋಡಿ ಆಶ್ಚರ್ಯದಿಂದ ಮಾಯಾವತಿ ಎಂಬ ದಾಸಿಗೆ ಅದನ್ನು ಒಪ್ಪಿಸಿದರು. ಆಕೆಗೆ ಈ ಮಗುವು ಯಾರದ್ದಾಗಿರಬಹುದು? ಎಂಬ ಜಿಜ್ಞಾಸೆ ಉಂಟಾಯಿತು. ಆಗ ನಾರದ ಮಹರ್ಷಿಗಳು ಬಂದು ಆ ಮಾಯಾವತಿಗೆ ಈ ಬಾಲಕನು ಸಾಕ್ಷಾತ್ ಕಾಮದೇವನೇ ಆಗಿರುವನು. ಶ್ರೀಕೃಷ್ಣನ ಪತ್ನೀ ರುಕ್ಮಿಣಿಯ ಗರ್ಭದಿಂದ ಜನಿಸಿದವನು. ಬಳಿಕ ಮೀನಿನ ಹೊಟ್ಟೆಗೆ ಸೇರಿದುದನ್ನು ಹೀಗೆ ಎಲ್ಲವನ್ನು ತಿಳಿಸಿದರು. ॥ ೬ ॥ ಪರೀಕ್ಷಿತನೇ! ಆ ಮಾಯಾವತಿಯು ಕಾಮದೇವನ ಪತ್ನಿಯಾದ ಯಶಸ್ವಿನೀ ರತಿದೇವಿಯೇ ಆಗಿದ್ದಳು. ರುದ್ರನ ಕ್ರೋಧಾಗ್ನಿಯಿಂದ ಕಾಮದೇವನು ಭಸ್ಮವಾದಾಗಿನಿಂದ ಆಕೆಯು ಅನಂಗನಾದ ಆವನು ಸಶರೀರನಾಗಿ ಪುನಃ ಹುಟ್ಟುವುದನ್ನೇ ನಿರೀಕ್ಷಿಸುತ್ತಿದ್ದಳು. ॥ ೭ ॥ ಶಂಬಾಸುರನು ಆಕೆಯನ್ನು ಅನ್ನ-ತೊವ್ವೆ ಮಾಡುವ ಅಡಿಗೆಯವಳಾಗಿ ನಿಯಮಿಸಿಕೊಂಡಿದ್ದನು. ಶಿಶುರೂಪದಿಂದ ಇರುವ ಈ ಮಗುವು ತನ್ನ ಪತಿಯೇ ಎಂದು ಭಾವಿಸಿ ಅವನನ್ನು ಬಹುವಾಗಿ ಪ್ರೀತಿಸ ತೊಡಗಿದಳು. ॥ ೮ ॥ ಸ್ವಲ್ಪ ದಿವಸಗಳಲ್ಲಿಯೇ ಶ್ರೀಕೃಷ್ಣಕುಮಾರನಾದ ಪ್ರದ್ಯುಮ್ನನು ಯುವಕನಾದನು. ಅವನ ಅದ್ಭುತವಾದ ರೂಪ-ಲಾವಣ್ಯಗಳು ಅವನನ್ನು ನೋಡಿದ ಸ್ತ್ರೀಯರ ಮನಸ್ಸಿನಲ್ಲಿ ಶೃಂಗಾರರಸವು ಉಕ್ಕೇರುತ್ತಿತ್ತು. ॥ ೯ ॥

ಸಾ ತಂ ಪತಿಂ ಪದ್ಮದಲಾಯತೇಕ್ಷಣಂ
ಪ್ರಲಂಬ ಬಾಹುಂ ನರಲೋಕಸುಂದರಮ್ ।
ಸವ್ರೀಡಹಾಸೋತ್ತಭಿತಭ್ರುವೇಕ್ಷತೀ
ಪ್ರೀತ್ಯೋಪತಸ್ಥೇ ರತಿರಂಗ ಸೌರತೈಃ ॥ ೧೦ ॥

ತಾಮಾಹ ಭಗವಾನ್ ಕಾರ್ಷ್ಣಿರ್ಮಾತಸ್ತೇ ಮತಿರನ್ಯಥಾ ।
ಮಾತೃಭಾವಮತಿಕ್ರಮ್ಯ ವರ್ತಸೇ ಕಾಮಿನೀ ಯಥಾ ॥ ೧೧ ॥

ರತಿರುವಾಚ

ಭವಾನ್ ನಾರಾಯಣಸುತಃ ಶಂಬರೇಣಾಹೃತೋ ಗೃಹಾತ್ ।
ಅಹಂ ತೇಽಧಿಕೃತಾ ಪತ್ನೀ ರತಿಃ ಕಾಮೋ ಭವಾನ್ ಪ್ರಭೋ ॥ ೧೨ ॥

ಏಷ ತ್ವಾನಿರ್ದಶಂ ಸಿಂಧಾವಕ್ಷಿಪಚ್ಛಂಬರೋಽಸುರಃ ।
ಮತ್ಸ್ಯೋಽಗ್ರಸೀತ್ತದುದರಾದಿಹ ಪ್ರಾಪ್ತೋ ಭವಾನ್ ಪ್ರಭೋ ॥ ೧೩ ॥

ತಮಿಮಂ ಜಹಿ ದುರ್ಧರ್ಷಂ ದುರ್ಜಯಂ ಶತ್ರುಮಾತ್ಮನಃ ।
ಮಾಯಾಶತವಿದಂ ತ್ವಂ ಚ ಮಾಯಾಭಿರ್ಮೋಹನಾದಿಭಿಃ ॥ ೧೪ ॥

ಪರಿಶೋಚತಿ ತೇ ಮಾತಾ ಕುರರೀವ ಗತಪ್ರಜಾ ।
ಪುತ್ರಸ್ನೇಹಾಕುಲಾ ದೀನಾ ವಿವತ್ಸಾ ಗೌರಿವಾತುರಾ ॥ ೧೫ ॥

ಪ್ರಭಾಷ್ಯೈವಂ ದದೌ ವಿದ್ಯಾಂ
ಪ್ರದ್ಯುಮ್ನಾಯ ಮಹಾತ್ಮನೇ ।
ಮಾಯಾವತೀ ಮಹಾಮಾಯಾಂ
ಸರ್ವಮಾಯಾವಿನಾಶಿನೀಮ್ ॥ ೧೬ ॥

ಸ ಚ ಶಂಬರಮಭ್ಯೇತ್ಯ ಸಂಯುಗಾಯ ಸಮಾಹ್ವಯತ್ ।
ಅವಿಷಹ್ಯೈಸ್ತಮಾಕ್ಷೇಪೈಃ ಕ್ಷಿಪನ್ ಸಂಜನಯನ್ ಕಲಿಮ್ ॥ ೧೭ ॥

ಸೋಽಧಿಕ್ಷಿಪ್ತೋ ದುರ್ವಚೋಭಿಃ ಪಾದಾಹತ ಇವೋರಗಃ ।
ನಿಶ್ಚಕ್ರಾಮ ಗದಾಪಾಣಿರಮರ್ಷಾತ್ತಾಮ್ರಲೋಚನಃ ॥ ೧೮ ॥

ಗದಾಮಾವಿಧ್ಯ ತರಸಾ ಪ್ರದ್ಯುಮ್ನಾಯ ಮಹಾತ್ಮನೇ ।
ಪ್ರಕ್ಷಿಪ್ಯ ವ್ಯನದನ್ನಾದಂ ವಜ್ರನಿಷ್ಪೇಷನಿಷ್ಠುರಮ್ ॥ ೧೯ ॥

ಕಮಲದಳದಂತೆ ಕೋಮಲವಾದ ಮತ್ತು ವಿಶಾಲವಾದ ಕಣ್ಣುಗಳು ಉಳ್ಳವನಾಗಿಯೂ, ಆಜಾನುಬಾಹುವಾಗಿಯೂ, ಮನುಷ್ಯ ಲೋಕದಲ್ಲೇ ಅತ್ಯಂತ ಸುಂದರನೂ ಆಗಿದ್ದ ಪ್ರದ್ಯುಮ್ನನನ್ನು ರತಿದೇವಿಯು ತನ್ನ ಪತಿಯಾಗಿ ಭಾವಿಸಿ, ಕಟಾಕ್ಷವೀಕ್ಷಣ, ನಾಚಿಕೆಯಿಂದ ಕೂಡಿದ ಮಂದಹಾಸ, ಹುಬ್ಬು ಹಾರಿಸುವುದು ಮುಂತಾದ ಸುರತಕ್ರೀಡಾ ಲಕ್ಷಣಗಳಿಂದ ಪ್ರೇಮದಿಂದ ಅವನನ್ನು ಮೋಹಿಸಿದಳು. ॥ ೧೦ ॥ ಶ್ರೀಕೃಷ್ಣನಂದನ ಭಗವಾನ್ ಪ್ರದ್ಯುಮ್ನನು ಆಕೆಯ ಭಾವಗಳಲ್ಲಿ ಆದ ಪರಿವರ್ತನೆಗಳನ್ನು ಗಮನಿಸಿ – ದೇವಿ! ನೀನಾದರೋ ನನಗೆ ತಾಯಿಯಂತೆಯೇ ಇರುವೆ. ನಿನ್ನ ಬುದ್ಧಿಯು ಹೀಗೆ ವಿಪರೀತವೇಕೆ ಆಯಿತು ? ಮಾತೃಭಾವವನ್ನು ಬಿಟ್ಟು ಕಾಮಿನಿಯಂತಹ ಹಾವ ಭಾವಗಳನ್ನು ನೀನು ತೋರಿಸುತ್ತಿರುವೆ. ಹೀಗೇಕೆ ? ॥ ೧೧ ॥

**ರತಿಯು ಹೇಳಿದಳು** – ಸ್ವಾಮಿಯೇ! ನೀವು ಸಾಕ್ಷಾತ್ ನಾರಾಯಣನ ಪುತ್ರರಾಗಿರುವಿರಿ. ಶಂಬರಾಸುರನು ನಿಮ್ಮನ್ನು ಸೂತಿಕಾಗೃಹದಿಂದ ಕದ್ದು ತಂದಿದ್ದನು. ನೀವು ನನ್ನ ಪತಿ ಸಾಕ್ಷಾತ್ ಕಾಮದೇವರೇ ಆಗಿರುವಿರಿ. ನಾನು ನಿಮ್ಮ ಅಧಿಕೃತ ಪತ್ನಿಯಾದ ರತಿಯಾಗಿರುವೆನು. ॥ ೧೨ ॥ ನನ್ನ ಸ್ವಾಮಿಯೇ! ನಿಮಗಿನ್ನು ಹತ್ತು ದಿವಸಗಳು ತುಂಬುವುದರೊಳಗೆ ಈ ಶಂಬರಾಸುರನು ನಿಮ್ಮನ್ನು ಅಪಹರಿಸಿ ಸಮುದ್ರಕ್ಕೆ ಎಸೆದು ಬಿಟ್ಟಿದ್ದನು. ಅಲ್ಲಿ ಒಂದು ಮೀನು ನಿಮ್ಮನ್ನು ನುಂಗಿಬಿಟ್ಟಿತು. ಅದರ ಹೊಟ್ಟೆಯಿಂದ ತಾವು ಇಲ್ಲಿ ನನಗೆ ದೊರೆತಿರುವಿರಿ. ॥ ೧೩ ॥ ಈ ಶಂಬರಾಸುರನು ನೂರಾರು ಪ್ರಕಾರದ ಮಾಯಾವಿದ್ಯೆಗಳನ್ನು ಬಲ್ಲವನು. ಇವನನ್ನು ವಶಪಡಿಸಿಕೊಳ್ಳುವುದು ಅಥವಾ ಗೆಲ್ಲುವುದು ಬಹಳ ಕಠಿಣವಾಗಿದೆ. ತಾವು ಈ ನಿಮ್ಮ ಶತ್ರುವನ್ನು ಮೋಹನವೇ ಮೊದಲಾದ ಮಾಯೆಗಳ ಮೂಲಕವಾಗಿ ನಾಶಮಾಡಿಬಿಡಿರಿ. ॥ ೧೪ ॥ ಪ್ರಿಯತಮನೇ! ಮಗುವನ್ನು ಕಳಕೊಂಡ ನಿಮ್ಮ ತಾಯಿಯು–ಮರಿಯನ್ನು ಕಳಕೊಂಡ ಕುಕರಿಪಕ್ಷಿಯಂತೆ ಅಥವಾ ಕರುವನ್ನು ಕಳಕೊಂಡ ಹಸುವಿನಂತೆ ಪುತ್ರಸ್ನೇಹದಿಂದ ವ್ಯಾಕುಲಳಾಗಿ, ದುಃಖಾತುರಳಾಗಿ ಹಗಲೂ ರಾತ್ರಿ ಚಿಂತಿಸುತ್ತಿರುವಳು. ॥ ೧೫ ॥ ಹೀಗೆ ಹೇಳಿ ಮಾಯಾವತಿಯಾಗಿದ್ದ ರತಿಯು ಪರಮಶಕ್ತಿಶಾಲಿಯಾದ ಪ್ರದ್ಯುಮ್ನನಿಗೆ 'ಮಹಾಮಾಯಾ' ಎಂಬ ವಿದ್ಯೆಯನ್ನು ಕಲಿಸಿಕೊಟ್ಟಳು. ಇದು ಎಲ್ಲ ಪ್ರಕಾರದ ಮಾಯೆಗಳನ್ನು ನಾಶಮಾಡುವಂತಹ ವಿದ್ಯೆಯಾಗಿದೆ. ॥ ೧೬ ॥ ಆಗ ಪ್ರದ್ಯುಮ್ನನು ಶಂಬರಾಸುರನ ಬಳಿಗೆ ಹೋಗಿ ಅವನೊಡನೆ ಜಗಳವಾಡುವ ಉದ್ದೇಶದಿಂದ ಸಹಿಸಲಾಗದ ಕಟು ಮಾತುಗಳಿಂದ ಅವನನ್ನು ಆಕ್ಷೇಪಿಸಿದನು. ಇಷ್ಟೇ ಅಲ್ಲ ಕೊನೆಗೆ ಅವನನ್ನು ಯುದ್ಧಕ್ಕಾಗಿ ಆಹ್ವಾನಿಸಿಯೇ ಬಿಟ್ಟನು. ॥ ೧೭ ॥

ಪ್ರದ್ಯುಮ್ನನ ಕಟುವಚನಗಳಿಂದ ಶಂಬರಾಸುರನು ಕಾಲಿನಿಂದ ಮೆಟ್ಟಿದ ಸರ್ಪದಂತೆ ಕೋಪದಿಂದ ಕಿಡಿ-ಕಿಡಿಯಾದನು. ಅವನ ಕಣ್ಣುಗಳು ಕ್ರೋಧಾಗ್ನಿಯಿಂದ ಕೆಂಪಾಗಿ, ಕೈಯಲ್ಲಿ ಗದೆಯನ್ನು ಹಿಡಿದುಕೊಂಡು ಯುದ್ಧಕ್ಕಾಗಿ ಹೊರಟೇ ಬಿಟ್ಟನು. ॥ ೧೮ ॥ ಅವನು ತನ್ನ ಗದೆಯನ್ನು ಗಿರ-ಗಿರನೆ ತಿರುಗಿಸುತ್ತಾ ವಜ್ರಾಘಾತದಂತೆ ಕರ್ಕಶವಾಗಿ ಸಿಂಹನಾದವನ್ನು ಮಾಡುತ್ತಾ ಪ್ರದ್ಯುಮ್ನನ ಮೇಲೆ ಆ ಗದೆಯನ್ನು ಪ್ರಯೋಗಿಸಿದನು. ॥ ೧೯ ॥

ತಾಮಾಪತಂತೀಂ ಭಗವಾನ್ ಪ್ರದ್ಯುಮ್ನೋ ಗದಯಾ ಗದಾಮ್ ।
ಅಪಾಸ್ಯ ಶತ್ರವೇ ಕ್ರುದ್ಧಃ ಪ್ರಾಹಿಣೋತ್ ಸ್ವಗದಾಂ ನೃಪ ॥ ೨೦ ॥

ಸ ಚ ಮಾಯಾಂ ಸಮಾಶ್ರಿತ್ಯ ದೈತೇಯೀಂ ಮಯದರ್ಶಿತಾಮ್ ।
ಮುಮುಚೇಽಸ್ತ್ರಮಯಂ ವರ್ಷಂ ಕಾರ್ಷ್ಣೌ ವೈಹಾಯಸೋಽಸುರಃ ॥ ೨೧ ॥

ಬಾಧ್ಯಮಾನೋಽಸ್ತ್ರವರ್ಷೇಣ ರೌಕ್ಮಿಣೇಯೋ ಮಹಾರಥಃ ।
ಸತ್ತ್ವಾತ್ಮಿಕಾಂ ಮಹಾವಿದ್ಯಾಂ ಸರ್ವಮಾಯೋಪಮರ್ದಿನೀಮ್ ॥ ೨೨ ॥

ತತೋ ಗೌಹ್ಯಕಗಾಂಧರ್ವಪೈಶಾಚೌರಗರಾಕ್ಷಸೀಃ ।
ಪ್ರಾಯುಂಕ್ತ ಶತಶೋ ದೈತ್ಯಃ ಕಾರ್ಷ್ಣಿರ್ವ್ಯಧಮಯತ್ ಸ ತಾಃ ॥ ೨೩ ॥

ನಿಶಾತಮಸಿಮುದ್ಯಮ್ಯ ಸ ಕಿರೀಟಂ ಸಕುಂಡಲಮ್ ।
ಶಂಬರಸ್ಯ ಶಿರಃ ಕಾಯಾತ್ ತಾಮ್ರಶ್ಮಶ್ರ್ವೋಜಸಾಹರತ್ ॥ ೨೪ ॥

ಆಕೀರ್ಯಮಾಣೋ ದಿವಿಜೈಃ ಸ್ತುವದ್ಭಿಃ ಕುಸುಮೋತ್ಕರೈಃ ।
ಭಾರ್ಯಯಾಂಬರಚಾರಿಣ್ಯಾ ಪುರಂ ನೀತೋ ವಿಹಾಯಸಾ ॥ ೨೫ ॥

ಅಂತಃಪುರವರಂ ರಾಜನ್ ಲಲನಾಶತಸಂಕುಲಮ್ ।
ವಿವೇಶ ಪತ್ನ್ಯಾ ಗಗನಾದ್ವಿದ್ಯುತೇವ ಬಲಾಹಕಃ ॥ ೨೬ ॥

ತಂ ದೃಷ್ಟ್ವಾ ಜಲದಶ್ಯಾಮಂ ಪೀತಕೌಶೇಯವಾಸಸಮ್ ।
ಪ್ರಲಂಬಬಾಹುಂ ತಾಮ್ರಾಕ್ಷಂ ಸುಸ್ಮಿತಂ ರುಚಿರಾನನಮ್ ॥ ೨೭ ॥

ಸ್ವಲಂಕೃತಮುಖಾಂಭೋಜಂ ನೀಲವಕ್ರಾಲಕಾಲಿಭಿಃ ।
ಕೃಷ್ಣಂ ಮತ್ವಾ ಸ್ತ್ರಿಯೋ ಹ್ರೀತಾ ನಿಲಿಲ್ಯುಸ್ತತ್ರ ತತ್ರ ಹ ॥ ೨೮ ॥

ಅವಧಾರ್ಯ ಶನೈರೀಷದ್ವೈಲಕ್ಷಣ್ಯೇನ ಯೋಷಿತಃ ।
ಉಪಜಗ್ಮುಃ ಪ್ರಮುದಿತಾಃ ಸಸ್ತ್ರೀರತ್ನಂ ಸುವಿಸ್ಮಿತಾಃ ॥ ೨೯ ॥

ಅಥ ತತ್ರಾಸಿತಾಪಾಂಗೀ ವೈದರ್ಭೀ ವಲ್ಗುಭಾಷಿಣೀ ।
ಅಸ್ಮರತ್ ಸ್ವಸುತಂ ನಷ್ಟಂ ಸ್ನೇಹಸ್ನುತಪಯೋಧರಾ ॥ ೩೦ ॥

ಪರೀಕ್ಷಿತನೇ! ಶಂಬರಾಸುರನ ಗದೆಯು ಅತಿವೇಗವಾಗಿ ತನ್ನೆಡೆಗೆ ಬರುತ್ತಿರುವುದನ್ನು ನೋಡಿದ ಪ್ರದ್ಯುಮ್ನನು ತನ್ನ ಗದೆಯಿಂದ ಹೊಡೆದು ಅವನ ಗದೆಯನ್ನು ಬೀಳಿಸಿ, ಕ್ರೋಧಗೊಂಡು ಅವನ ಮೇಲೆ ಗದಾಪ್ರಹಾರ ಮಾಡಿದನು. ॥ ೨೦ ॥ ಆಗ ಆ ದೈತ್ಯನು ಮಯಾಸುರನು ಕಲಿಸಿಕೊಟ್ಟ ಆಸುರೀಮಾಯೆಯನ್ನು ಆಶ್ರಯಿಸಿ ಆಕಾಶಕ್ಕೆ ಹೋಗಿ ಅಲ್ಲಿಂದಲೇ ಪ್ರದ್ಯುಮ್ನನ ಮೇಲೆ ಅಸ್ತ್ರ-ಶಸ್ತ್ರಗಳನ್ನು ಪ್ರಯೋಗಿಸತೊಡಗಿದನು. ॥ ೨೧ ॥ ಮಹಾರಥನಾದ ಪ್ರದ್ಯುಮ್ನನು ಶಂಬರಾಸುರನ ಮಾಯಾಮಯವಾದ ಶಸ್ತ್ರಾಸ್ತ್ರಗಳಿಂದ ಪೀಡಿತನಾದಾಗ ಸಮಸ್ತ ಮಾಯೆಯನ್ನು ಶಾಂತಗೊಳಿಸುವಂತಹ ಸತ್ತ್ವಮಯಿಯಾದ ಮಹಾವಿದ್ಯೆಯನ್ನು ಪ್ರಯೋಗಿಸಿದನು. ॥ ೨೨ ॥ ಅನಂತರ ಶಂಬರಾಸುರನು ಯಕ್ಷ, ಗಂಧರ್ವ, ಪಿಶಾಚ, ನಾಗ ಮತ್ತು ರಾಕ್ಷಸರ ನೂರಾರು ಮಾಯೆಗಳನ್ನು ಪ್ರಯೋಗಿಸಿದನು. ಆದರೆ ಶ್ರೀಕೃಷ್ಣಕುಮಾರ ಪ್ರದ್ಯುಮ್ನನು ತನ್ನ ಮಹಾವಿದ್ಯೆಯಿಂದ ಅದೆಲ್ಲವನ್ನೂ ನಾಶಮಾಡಿಬಿಟ್ಟನು. ॥ ೨೩ ॥ ಬಳಿಕ ಅವನು ಒಂದು ಹರಿತವಾದ ಖಡ್ಗವನ್ನೆತ್ತಿಕೊಂಡು ಕಿರೀಟ ಕುಂಡಲಗಳಿಂದ ಸುಶೋಭಿತವಾದ, ಕೆಂಪಾದ ಗಡ್ಡ-ಮೀಸೆಗಳಿಂದ ಭಯಂಕರವಾಗಿದ್ದ ಶಂಬರಾಸುರನ ತಲೆಯನ್ನು ಕತ್ತರಿಸಿ ಹಾಕಿದನು. ॥ ೨೪ ॥ ದೇವತೆಗಳು ಪ್ರದ್ಯುಮ್ನನ ಮೇಲೆ ಪುಷ್ಪವೃಷ್ಟಿ ಮಾಡುತ್ತಾ ಸ್ತೋತ್ರ ಮಾಡತೊಡಗಿದರು. ಬಳಿಕ ಆಕಾಶಸಂಚಾರವನ್ನು ತಿಳಿದಿದ್ದ ರತಿದೇವಿಯು ಪ್ರದ್ಯುಮ್ನನನ್ನು ಆಕಾಶಮಾರ್ಗದಿಂದ ದ್ವಾರಕೆಗೆ ಕೊಂಡುಹೋದಳು. ॥ ೨೫ ॥

ಪರೀಕ್ಷಿತನೇ! ಮೇಘದೊಡನಿರುವ ಮಿಂಚಿನಂತೆ ಪ್ರದ್ಯುಮ್ನನು ಪತ್ನೀ ಸಮೇತನಾಗಿ ಆಕಾಶದಿಂದ ಕೆಳಗಿಳಿದು ನೂರಾರು ಲಲನೆಯರಿಂದ ಸಮಾಕುಲವಾಗಿದ್ದ ಶ್ರೇಷ್ಠವಾದ ಅಂತಃಪುರವನ್ನು ಪ್ರವೇಶಿಸಿದನು. ॥ ೨೬ ॥ ನೀಲಮೇಘ ಶ್ಯಾಮನಾಗಿಯೂ, ರೇಷ್ಮೆಯ ಪೀತಾಂಬರವನ್ನುಟ್ಟಿದ್ದ ಆಜಾನುಬಾಹುವಾದ, ಎಣ್ಣೆಗೆಂಪಾದ ಕಣ್ಣುಗಳಿಂದ ಕೂಡಿದ್ದ ಮಂದಹಾಸವನ್ನು ಬೀರುತ್ತಿದ್ದ ಸುಂದರ ಮುಖಾರವಿಂದನಾಗಿದ್ದ ಕಪ್ಪಾದ ಗುಂಗುರು ಕೂದಲುಗಳಿಂದ ಸಮಲಂಕೃತವಾದ ಮುಖಕಮಲದಿಂದ ಬೆಳಗುತ್ತಿದ್ದ ಪ್ರದ್ಯುಮ್ನನನ್ನು ಕಂಡು ಅಂತಃಪುರದ ನಾರಿಯರು ಕೃಷ್ಣನೇ ಬಂದನೆಂಬ ಭ್ರಾಂತಿಯಿಂದ ನಾಚಿಕೆಗೊಂಡು ಅಲ್ಲಲ್ಲಿಯೇ ಅಡಗಿಕೊಂಡರು. ॥ ೨೭-೨೮ ॥ ಸ್ವಲ್ಪ ಹೊತ್ತಾದ ಬಳಿಕ ಶ್ರೀಕೃಷ್ಣನಿಗಿಂತಲೂ ಇವನಲ್ಲಿ ಸ್ವಲ್ಪ ವೈಲಕ್ಷಣ್ಯವಿದ್ದುದರಿಂದ ಇವನು ಕೃಷ್ಣನಲ್ಲವೆಂದು ತಿಳಿದು ಆನಂದ-ವಿಸ್ಮಯದಿಂದ ಶ್ರೇಷ್ಠರಾದ ನೂತನ ದಂಪತಿಗಳ ಬಳಿಗೆ ಹೋದರು. ॥ ೨೯ ॥ ಅದೇ ಸಮಯಕ್ಕೆ ಸರಿಯಾಗಿ, ಕಪ್ಪಾದ ಕಣ್ಣುಗಳುಳ್ಳ, ಮಧುರಭಾಷಿಣಿಯಾದ ರುಕ್ಮಿಣೀದೇವಿಯು ಅಲ್ಲಿಗೆ ಬಂದಳು. ನೂತನ ದಂಪತಿಗಳನ್ನು ನೋಡಿದೊಡನೆಯೇ ಆಕೆಗೆ ಕಳೆದು ಹೋಗಿದ್ದ ಪುತ್ರನ ಸ್ಮರಣೆಯಾಗಿ, ವಾತ್ಸಲ್ಯಾಧಿಕ್ಯದಿಂದ ಅವಳ ಸ್ತನಗಳಲ್ಲಿ ಹಾಲು ಸ್ರವಿಸತೊಡಗಿತು. ॥ ೩೦ ॥ ರುಕ್ಮಿಣಿಯು ಹಾಗೆಯೇ ಯೋಚಿಸತೊಡಗಿದಳು. ಈ ರತ್ನ ಪ್ರಾಯನಾದ ತರುಣನು ಯಾರು? ಕಮಲನಯನನಾದ ಇವನು ಯಾರ ಪುತ್ರನಾಗಿರಬಹುದು? ಯಾವ ಮಹಾಸೌಭಾಗ್ಯವತಿಯು ಇವನನ್ನು

ಕೋ ನ್ವಯಂ ನರವೈದೂರ್ಯಃ ಕಸ್ಯ ವಾ ಕಮಲೇಕ್ಷಣಃ ।
ಧೃತಃ ಕಯಾ ವಾ ಜಠರೇ ಕೇಯಂ ಲಬ್ಧಾ ತ್ವನೇನ ವಾ ॥ ೩೧ ॥

ಮಮ ಚಾಪ್ಯಾತ್ಮಜೋ ನಷ್ಟೋ
ನೀತೋ ಯಃ ಸೂತಿಕಾಗೃಹಾತ್ ।
ಏತತ್ತುಲ್ಯವಯೋರೂಪೋ
ಯದಿ ಜೀವತಿ ಕುತ್ರಚಿತ್ ॥ ೩೨ ॥

ಕಥಂ ತ್ವನೇನ ಸಂಪ್ರಾಪ್ತಂ ಸಾರೂಪ್ಯಂ ಶಾಂರ್ಗಧನ್ವನಃ ।
ಆಕೃತ್ಯಾವಯವೈರ್ಗತ್ಯಾ ಸ್ವರಹಾಸಾವಲೋಕನೈಃ ॥ ೩೩ ॥

ಸ ಏವ ವಾ ಭವೇನ್ನೂನಂ ಯೋ ಮೇ ಗರ್ಭೇ ಧೃತೋಽರ್ಭಕಃ ।
ಅಮುಷ್ಮಿನ್ ಪ್ರೀತಿರಧಿಕಾ ವಾಮಃ ಸ್ಫುರತಿ ಮೇ ಭುಜಃ ॥ ೩೪ ॥

ಏವಂ ಮೀಮಾಂಸಮಾನಾಯಾಂ ವೈದರ್ಭ್ಯಾಂ ದೇವಕೀಸುತಃ ।
ದೇವಕ್ಯಾನಕದುಂದುಭ್ಯಾಮುತ್ತಮಶ್ಲೋಕ ಆಗಮತ್ ॥ ೩೫ ॥

ವಿಜ್ಞಾತಾರ್ಥೋಽಪಿ ಭಗವಾನ್ತೂಷ್ಣೀಮಾಸ ಜನಾರ್ದನಃ ।
ನಾರದೋಽಕಥಯತ್ ಸರ್ವಂ ಶಂಬರಾಹರಣಾದಿಕಮ್ ॥ ೩೬ ॥

ತಚ್ಛ್ರುತ್ವಾ ಮಹದಾಶ್ಚರ್ಯಂ ಕೃಷ್ಣಾಂತಃಪುರಯೋಷಿತಃ ।
ಅಭ್ಯನಂದನ್ ಬಹೂನಬ್ದಾನ್ನಷ್ಟಂ ಮೃತಮಿವಾಗತಮ್ ॥ ೩೭ ॥

ದೇವಕೀ ವಸುದೇವಶ್ಚ ಕೃಷ್ಣರಾಮೌ ತಥಾ ಸ್ತ್ರಿಯಃ ।
ದಂಪತೀ ತೌ ಪರಿಷ್ವಜ್ಯ ರುಕ್ಮಿಣೀ ಚ ಯಯುರ್ಮುದಮ್ ॥ ೩೮ ॥

ನಷ್ಟಂ ಪ್ರದ್ಯುಮ್ನಮಾಯಾತ-
ಮಾಕರ್ಣ್ಯ ದ್ವಾರಕೌಕಸಃ ।
ಅಹೋ ಮೃತ ಇವಾಯಾತೋ
ಬಾಲೋ ದಿಷ್ಟ್ಯೇತಿ ಹಾಬ್ರುವನ್ ॥ ೩೯ ॥

ಯಂ ವೈ ಮುಹುಃ ಪಿತೃಸರೂಪನಿಜೇಶಭಾವಾಃ
ತನ್ಮಾತರೋ ಯದಭಜನ್ ರಹರೂಢಭಾವಾಃ ।
ಚಿತ್ರಂ ನ ತತ್ ಖಲು ರಮಾಸ್ಪದಬಿಂಬಬಿಂಬೇ
ಕಾಮೇ ಸ್ಮರೇಽಕ್ಷವಿಷಯೇ ಕಿಮುತಾನ್ಯನಾರ್ಯಃ ॥ ೪೦ ॥

ಗರ್ಭದಲ್ಲಿ ಧರಿಸಿದ್ದಿರಬಹುದು ? ಯಾವ ಸೌಭಾಗ್ಯವತಿಯು ಇವನನ್ನು ಪತಿಯನ್ನಾಗಿವರಿಸಿರಬಹುದು ? ॥ ೩೧ ॥ ನನ್ನದೊಂದು ಎಳೆ ಗಂಡುಮಗು ಕಳೆದುಹೋಗಿತ್ತು. ಸೂತಿಕಾಗೃಹದಿಂದ ಯಾರು ಅಪಹರಿಸಿಕೊಂಡು ಹೋದರೋ ತಿಳಿಯದು. ಅವನೇನಾದರೂ ಬದುಕಿದ್ದರೆ ಇವನಂತೆಯೇ ನವ ಯುವಕನೂ, ರೂಪವಂತನೂ ಆಗಿರುತ್ತಿದ್ದನು. ॥ ೩೨ ॥ ಶಾರ್ಙ್ಗಧನ್ವನಾದ ಶ್ರೀಕೃಷ್ಣನ ಸಾರೂಪ್ಯವು ಇವನಿಗೆ ಹೇಗೆ ಪ್ರಾಪ್ತವಾಯಿತು ? ಆಕೃತಿಯಲ್ಲಿ, ಅವಯವಗಳಲ್ಲಿ, ನಡಿಗೆಯಲ್ಲಿ, ಸ್ವರದಲ್ಲಿ ಮಂದಹಾಸಯುಕ್ತವಾದ ನೋಟದಲ್ಲಿ ಇವನು ಶ್ರೀಕೃಷ್ಣನಂತೆಯೇ ಇದ್ದಾನಲ್ಲ? ಇದು ಹೇಗೆ ಸಾಧ್ಯವಾಯಿತು ? ॥ ೩೩ ॥ ಏನೇ ಇರಲಿ, ನಾನು ಗರ್ಭದಲ್ಲಿ ಧರಿಸಿದ್ದ ಶಿಶುವು ನಿಶ್ಚಯವಾಗಿಯೂ ಇವನೇ ಆಗಿರಬೇಕು ! ಇವನನ್ನು ನೋಡುತ್ತಿದ್ದಂತೆ ನನಗೆ ಇವನ ಮೇಲೆ ವಾತ್ಸಲ್ಯವು ಹೆಚ್ಚುತ್ತಿದ್ದು ಶುಭಸೂಚಕವಾಗಿ ನನ್ನ ಎಡಭುಜವೂ ಅದುರುತ್ತಿದೆ. ॥ ೩೪ ॥

ಪರೀಕ್ಷಿತನೇ ! ಹೀಗೆ ರುಕ್ಮಿಣಿಯು ತನ್ನ ಮನಸ್ಸಿನಲ್ಲಿಯೇ ತರ್ಕಿಸುತ್ತಿರಲಾಗಿ ದೇವಕಿಯ ಮಗನಾದ, ಪವಿತ್ರಕೀರ್ತಿಯಾದ ಶ್ರೀಕೃಷ್ಣನು ವಸುದೇವ-ದೇವಕಿಯರೊಡನೆ ಅಲ್ಲಿಗೆ ಆಗಮಿಸಿದನು. ॥ ೩೫ ॥ ಭಗವಾನ್ ಶ್ರೀಕೃಷ್ಣನು ಎಲ್ಲವನ್ನೂ ಬಲ್ಲವನಾಗಿದ್ದರೂ ಸುಮ್ಮನೆ ನಿಂತುಕೊಂಡಿದ್ದನು. ಅಷ್ಟರಲ್ಲಿ ದೇವರ್ಷಿಗಳಾದ ನಾರದರು ಅಲ್ಲಿಗೆ ಬಂದು - ಪ್ರದ್ಯುಮ್ನನನ್ನು ಶಂಬರಾಸುರನು ಅಪಹರಿಸಿದುದು, ಸಮುದ್ರಕ್ಕೆ ಎಸೆದುದು, ಮುಂತಾಗಿ ನಡೆದ ಎಲ್ಲ ಘಟನೆಗಳನ್ನು ವಿಸ್ತಾರವಾಗಿ ತಿಳಿಯಪಡಿಸಿದನು. ॥ ೩೬ ॥ ನಾರದರಿಂದ ಈ ಆಶ್ಚರ್ಯಕರ ಘಟನೆಯನ್ನು ಕೇಳಿದ ಶ್ರೀಕೃಷ್ಣನ ಅಂತಃಪುರದ ನಾರಿಯರು ಆಶ್ಚರ್ಯಚಕಿತರಾಗಿ ಅನೇಕ ವರ್ಷಗಳಿಂದ ಕಳೆದುಹೋಗಿ ಮರಳಿ ಬಂದಿರುವ ಪ್ರದ್ಯುಮ್ನನನ್ನು ನೋಡಿ ಸತ್ತುಹೋದವನು ಮರಳಿ ಬದುಕಿದಂತೆ ಅಭಿನಂದಿಸತೊಡಗಿದರು. ॥ ೩೭ ॥ ವಸುದೇವ-ದೇವಕಿಯರು, ಶ್ರೀಕೃಷ್ಣ- ಬಲರಾಮರು, ರುಕ್ಮಿಣೀದೇವಿಯು ಹಾಗೂ ಇತರ ಸ್ತ್ರೀಯರೆಲ್ಲರೂ ನವದಂಪತಿಗಳನ್ನು ಆಲಿಂಗಿಸಿಕೊಂಡು ಆನಂದಿತರಾದರು. ॥ ೩೮ ॥ ಕಳೆದುಹೋದ ಪ್ರದ್ಯುಮ್ನನು ಮರಳಿ ಬಂದಿರುವನೆಂದು ತಿಳಿದಾಗ ದ್ವಾರಕೆಯ ನರ-ನಾರಿಯರು ಪರಸ್ಪರವಾಗಿ ಮಾತನಾಡಿಕೊಂಡರು ; ಆಹಾ ! ಈ ಬಾಲಕನು ಸತ್ತು ಮರಳಿ ಬಂದಂತೆಯೇ ಎಂತಹ ಸೌಭಾಗ್ಯವದಾಗಿದೆ. ॥ ೩೯ ॥ ಪರೀಕ್ಷಿತನೇ ! ಪ್ರದ್ಯುಮ್ನನ ರೂಪ-ಸೌಂದರ್ಯಗಳು ಶ್ರೀಕೃಷ್ಣನ ರೂಪ-ಸೌಂದರ್ಯಗಳಿಗೆ ಎಷ್ಟು ಅನುರೂಪವಾಗಿತ್ತೆಂದರೆ, ಪ್ರದ್ಯುಮ್ನನನ್ನು ನೋಡಿದ ಶ್ರೀಕೃಷ್ಣನ ಪತ್ನಿಯರು ಕೆಲವೊಮ್ಮೆ ಶ್ರೀಕೃಷ್ಣನೇ ಬಂದಿರುವನೆಂದು ಭ್ರಮಿಸುತ್ತಿದ್ದರು. ಹೀಗಿರುವಾಗ ಲಕ್ಷ್ಮೀದೇವಿಗೆ ಆಶ್ರಯನಾದ ಶ್ರೀಕೃಷ್ಣನ ಪ್ರತಿಬಿಂಬ ಸ್ವರೂಪನಾದ ಕಾಮಾವತಾರನಾದ ಪ್ರದ್ಯುಮ್ನನನ್ನು ನೋಡಿದ ಇತರ ಸ್ತ್ರೀಯರ ಸ್ಥಿತಿಯು ವಿಚಿತ್ರವಾಗುತ್ತಿತ್ತು, ಎಂಬುದರಲ್ಲಿ ಹೇಳುವುದೇನಿದೆ ? ॥ ೪೦ ॥

ಐವತ್ತೈದನೆಯ ಅಧ್ಯಾಯವು ಮುಗಿಯಿತು. ॥ ೫೫ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಉತ್ತರಾರ್ಧೇ
ಪ್ರದ್ಯುಮ್ನೋತ್ಪತ್ತಿನಿರೂಪಣಂ ನಾಮ ಪಂಚಪಂಚಾಶತ್ತಮೋಽಧ್ಯಾಯಃ ॥ ೫೫ ॥

# ಐವತ್ತಾರನೆಯ ಅಧ್ಯಾಯ

## ಸ್ಯಮಂತಕಮಣಿಯ ಕಥೆ
## ಜಾಂಬವತಿ ಮತ್ತು ಸತ್ಯಭಾಮೆಯರೊಡನೆ ಶ್ರೀಕೃಷ್ಣನ ವಿವಾಹ

*ಶ್ರೀಶುಕ ಉವಾಚ*

ಸತ್ರಾಜಿತಃ ಸ್ವತನಯಾಂ ಕೃಷ್ಣಾಯ ಕೃತಕಿಲ್ಬಿಷಃ ।
ಸ್ಯಮಂತಕೇನ ಮಣಿನಾ ಸ್ವಯಮುದ್ಯಮ್ಯ ದತ್ತವಾನ್ ॥ ೧ ॥

*ರಾಜೋವಾಚ*

ಸತ್ರಾಜಿತಃ ಕಿಮಕರೋದ್ಬ್ರಹ್ಮನ್ ಕೃಷ್ಣಸ್ಯ ಕಿಲ್ಬಿಷಮ್ ।
ಸ್ಯಮಂತಕಃ ಕುತಸ್ತಸ್ಯ ಕಸ್ಮಾದ್ದತ್ತಾ ಸುತಾ ಹರೇಃ ॥ ೨ ॥

*ಶ್ರೀಶುಕ ಉವಾಚ*

ಆಸೀತ್ಸತ್ರಾಜಿತಃ ಸೂರ್ಯೋ ಭಕ್ತಸ್ಯ ಪರಮಃ ಸಖಾ ।
ಪ್ರೀತಸ್ತಸ್ಮೈ ಮಣಿಂ ಪ್ರಾದಾತ್ ಸೂರ್ಯಸ್ತುಷ್ಟಃ ಸ್ಯಮಂತಕಮ್ ॥ ೩ ॥

ಸ ತಂ ಬಿಭ್ರನ್ಮಣಿಂ ಕಂಠೇ ಭ್ರಾಜಮಾನೋ ಯಥಾ ರವಿಃ ।
ಪ್ರವಿಷ್ಟೋ ದ್ವಾರಕಾಂ ರಾಜಂಸ್ತೇಜಸಾ ನೋಪಲಕ್ಷಿತಃ ॥ ೪ ॥

ತಂ ವಿಲೋಕ್ಯ ಜನಾ ದೂರಾತ್ತೇಜಸಾ ಮುಷ್ಟದೃಷ್ಟಯಃ ।
ದೀವ್ಯತೇಽಕ್ಷೈರ್ಭಗವತೇ ಶಶಂಸುಃ ಸೂರ್ಯಶಂಕಿತಾಃ ॥ ೫ ॥

ನಾರಾಯಣ ನಮಸ್ತೇಽಸ್ತು ಶಂಖಚಕ್ರಗದಾಧರ ।
ದಾಮೋದರಾರವಿಂದಾಕ್ಷ ಗೋವಿಂದ ಯದುನಂದನ ॥ ೬ ॥

ಏಷ ಆಯಾತಿ ಸವಿತಾ ತ್ವಾಂ ದಿದೃಕ್ಷುರ್ಜಗತ್ಪತೇ ।
ಮುಷ್ಣನ್ಗಭಸ್ತಿಚಕ್ರೇಣ ನೃಣಾಂ ಚಕ್ಷೂಂಷಿ ತಿಗ್ಮಗುಃ ॥ ೭ ॥

ನನ್ವನ್ವಿಚ್ಛಂತಿ ತೇ ಮಾರ್ಗಂ ತ್ರಿಲೋಕ್ಯಾಂ ವಿಬುಧರ್ಷಭಾಃ ।
ಜ್ಞಾತ್ವಾದ್ಯ ಗೂಢಂ ಯದುಷು ದ್ರಷ್ಟುಂ ತ್ವಾಂ ಯಾತ್ಯಜಃ ಪ್ರಭೋ ॥ ೮ ॥

*ಶ್ರೀಶುಕ ಉವಾಚ*

ನಿಶಮ್ಯ ಬಾಲವಚನಂ ಪ್ರಹಸ್ಯಾಂಬುಜಲೋಚನಃ ।
ಪ್ರಾಹ ನಾಸೌ ರವಿರ್ದೇವಃ ಸತ್ರಾಜಿನ್ಮಣಿನಾ ಜ್ವಲನ್ ॥ ೯ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಎಲೈ ಪರೀಕ್ಷಿತನೇ ಸತ್ರಾಜಿತನು ಶ್ರೀಕೃಷ್ಣನ ಮೇಲೆ ಮಿಥ್ಯಾಪವಾದವನ್ನು ಹೊರಿಸಿದ್ದನು. ಮತ್ತೆ ಆ ಅಪರಾಧದಿಂದ ಮುಕ್ತನಾಗಲು ಅವನು ತಾನಾಗಿಯೇ ಸ್ಯಮಂತಕ ಮಣಿಯೊಡನೆ ತನ್ನ ಮಗಳಾದ ಸತ್ಯಭಾಮೆಯನ್ನು ಶ್ರೀಕೃಷ್ಣನಿಗೆ ವಿವಾಹಮಾಡಿಕೊಟ್ಟನು. ॥ ೧ ॥

**ಪರೀಕ್ಷಿದ್ರಾಜನು ಕೇಳಿದನು** – ಪೂಜ್ಯರೇ! ಸತ್ರಾಜಿತನು ಶ್ರೀಕೃಷ್ಣನಿಗೆ ಯಾವ ಅಪರಾಧವನ್ನು ಮಾಡಿದ್ದನು? ಅವನಿಗೆ ಸ್ಯಮಂತಕಮಣಿಯು ಹೇಗೆ ದೊರಕಿತ್ತು. ತನ್ನ ಕನ್ಯೆಯನ್ನು ಶ್ರೀಕೃಷ್ಣನಿಗೆ ಏಕೆ ಮದುವೆ ಮಾಡಿಕೊಟ್ಟನು? ॥ ೨ ॥

**ಶ್ರೀಶುಕಮಹಾಮುನಿಗಳು ಹೇಳಿದರು** – ಪರೀಕ್ಷಿತ ಮಹಾರಾಜ! ಸತ್ರಾಜಿತನು ಸೂರ್ಯನ ಪರಮಭಕ್ತನಾಗಿದ್ದನು. ಸೂರ್ಯದೇವನು ಅವನ ಭಕ್ತಿಗೆ ಒಲಿದು ಅವನ ಪರಮ ಮಿತ್ರನೂ ಆದನು. ಸೂರ್ಯನಾರಾಯಣನೇ ಪ್ರಸನ್ನನಾಗಿ ಪ್ರೀತಿಯಿಂದ ಅವನಿಗೆ ಸ್ಯಮಂತಕಮಣಿಯನ್ನು ಅನುಗ್ರಹಿಸಿದ್ದನು. ॥ ೩ ॥ ಸತ್ರಾಜಿತನು ಆ ಮಣಿಯನ್ನು ಕೊರಳಿನಲ್ಲಿ ಧರಿಸಿ ಸೂರ್ಯನಂತೆಯೇ ಪ್ರಕಾಶಿಸುತ್ತಿದ್ದನು. ಪರೀಕ್ಷಿತನೇ! ಸತ್ರಾಜಿತನು ದ್ವಾರಕೆಗೆ ಬಂದಾಗ ಅತ್ಯಂತ ತೇಜಸ್ಸಿನಿಂದಾಗಿ ಅವನನ್ನು ಗುರುತಿಸದೆ ಹೋದರು. ॥ ೪॥ ದೂರದಿಂದಲೇ ಅವನನ್ನು ನೋಡಿ ಜನರಿಗೆ ಕಣ್ಣು ಕತ್ತಲೆಬಂತು. ಸಾಕ್ಷಾತ್ ಸೂರ್ಯನಾರಾಯಣನೇ ಬಂದಿರಬಹುದೇ? ಎಂದು ಜನರು ತಿಳಿದರು. ಅವರೆಲ್ಲರೂ ಈ ವಿಷಯವನ್ನು ಪಗಡೆಯಾಡುತ್ತಿದ್ದ ಶ್ರೀಕೃಷ್ಣನಿಗೆ ಹೇಳಿದರು. ॥ ೫ ॥ ಶಂಖ-ಚಕ್ರ ಗದಾಧರನಾದ ನಾರಾಯಣನೇ! ಕಮಲಾಕ್ಷನೇ! ದಾಮೋದರನೇ! ಯದುವಂಶ ಶಿರೋಮಣಿಯಾದ ಗೋವಿಂದನೇ! ನಿನಗೆ ನಮಸ್ಕಾರ ಮಾಡುತ್ತೇವೆ. ॥ ೬ ॥ ಜಗದೀಶ್ವರನೇ! ಇದೋ ನೋಡು. ಕೋರೈಸುವ ತನ್ನ ಕಿರಣಗಳಿಂದ ಮನುಷ್ಯರ ದೃಷ್ಟಿಗಳನ್ನೇ ಅಪಹರಿಸುತ್ತಾ ಪ್ರಚಂಡರಶ್ಮಿಯಾದ ಭಗವಾನ್ ಸೂರ್ಯನಾರಾಯಣನು ನಿನ್ನನ್ನು ಸಂದರ್ಶಿಸಲು ಆಗಮಿಸಿದ್ದಾನೆ. ॥ ೭ ॥ ಸಮಸ್ತ ಶ್ರೇಷ್ಠದೇವತೆಗಳು ಮೂರು ಲೋಕಗಳಲ್ಲಿಯೂ ನಿನ್ನನ್ನು ಹೊಂದುವ ಮಾರ್ಗವನ್ನು ಹುಡುಕುತ್ತಲೇ ಇದ್ದಾರೆ. ಆದರೆ ನೀನು ಅವರಿಗೆ ಸಿಗುವುದಿಲ್ಲ. ನೀನು ಯಾದವರಲ್ಲಿ ನಿಗೂಢನಾಗಿರುವೆನೆಂದು ತಿಳಿದು ಸೂರ್ಯನಾರಾಯಣನೇ ನಿನ್ನ ದರ್ಶನಕ್ಕಾಗಿ ಬರುತ್ತಿದ್ದಾನೆ. ॥ ೮ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿತನೇ! ತಿಳುವಳಿಕೆಯಿಲ್ಲದ ಜನರ ಈ ಮಾತನ್ನು ಕೇಳಿ ನಸುನಗುತ್ತಾ ಕಮಲಾಕ್ಷನಾದ ಶ್ರೀಕೃಷ್ಣನು ಹೇಳಿದನು – ಬಂಧುಗಳೇ! ಇವನು ಸೂರ್ಯದೇವನಲ್ಲ. ಸೂರ್ಯಮಣಿಯನ್ನು ಧರಿಸಿದ್ದರಿಂದ ಸತ್ರಾಜಿತನು ಹೀಗೆ ಪ್ರಕಾಶಮಾನನಾಗಿದ್ದಾನೆ. ॥ ೯ ॥

ಸತ್ರಾಜಿತ್ ಸ್ವಗೃಹಂ ಶ್ರೀಮತ್ ಕೃತಕೌತುಕಮಂಗಲಮ್ ।
ಪ್ರವಿಶ್ಯ ದೇವಸದನೇ ಮಣಿಂ ವಿಪ್ರೈರ್ನ್ಯವೇಶಯತ್
॥ ೧೦ ॥

ದಿನೇ ದಿನೇ ಸ್ವರ್ಣಭಾರಾನಷ್ಟೌ ಸ ಸೃಜತಿ ಪ್ರಭೋ ।
ದುರ್ಭಿಕ್ಷಮಾರ್ಯರಿಷ್ಟಾನಿ ಸರ್ಪಾಧಿವ್ಯಾಧಯೋಽಶುಭಾಃ ।
ನ ಸಂತಿ ಮಾಯಿನಸ್ತತ್ರ ಯತ್ರಾಸ್ತೇಽಭ್ಯರ್ಚಿತೋ ಮಣಿಃ
॥ ೧೧ ॥

ಸ ಯಾಚಿತೋ ಮಣಿಂ ಕ್ವಾಪಿ ಯದುರಾಜಾಯ ಶೌರಿಣಾ ।
ನೈವಾರ್ಥಕಾಮುಕಃ ಪ್ರಾದಾದ್ಯಾಚ್ಞಾಭಂಗಮತರ್ಕಯನ್
॥ ೧೨ ॥

ತಮೇಕದಾ ಮಣಿಂ ಕಂಠೇ ಪ್ರತಿಮುಚ್ಯ ಮಹಾಪ್ರಭಮ್ ।
ಪ್ರಸೇನೋ ಹಯಮಾರುಹ್ಯ ಮೃಗಯಾಂ ವ್ಯಚರದ್ವನೇ
॥ ೧೩ ॥

ಪ್ರಸೇನಂ ಸಹಯಂ ಹತ್ವಾ ಮಣಿಮಾಚ್ಛಿದ್ಯ ಕೇಸರೀ ।
ಗಿರಿಂ ವಿಶನ್ ಜಾಂಬವತಾ ನಿಹತೋ ಮಣಿಮಿಚ್ಛತಾ
॥ ೧೪ ॥

ಸೋಽಪಿ ಚಕ್ರೇ ಕುಮಾರಸ್ಯ ಮಣಿಂ ಕ್ರೀಡನಕಂ ಬಿಲೇ ।
ಅಪಶ್ಯನ್ ಭ್ರಾತರಂ ಭ್ರಾತಾ ಸತ್ರಾಜಿತ್ ಪರ್ಯತಪ್ಯತ
॥ ೧೫ ॥

ಪ್ರಾಯಃ ಕೃಷ್ಣೇನ ನಿಹತೋ ಮಣಿಗ್ರೀವೋ ವನಂ ಗತಃ ।
ಭ್ರಾತಾ ಮಮೇತಿ ತಚ್ಛ್ರುತ್ವಾ ಕರ್ಣೇ ಕರ್ಣೇಽಜಪನ್ ಜನಾಃ
॥ ೧೬ ॥

ಭಗವಾಂಸ್ತದುಪಶ್ರುತ್ಯ ದುರ್ಯಶೋ ಲಿಪ್ತಮಾತ್ಮನಿ ।
ಮಾರ್ಷ್ಟುಂ ಪ್ರಸೇನಪದವೀಮನ್ವಪದ್ಯತ ನಾಗರೈಃ
॥ ೧೭ ॥

ಹತಂ ಪ್ರಸೇನಮಶ್ವಂ ಚ ವೀಕ್ಷ್ಯ ಕೇಸರಿಣಾ ವನೇ ।
ತಂ ಚಾದ್ರಿಪೃಷ್ಠೇ ನಿಹತಮೃಕ್ಷೇಣ ದದೃಶುರ್ಜನಾಃ
॥ ೧೮ ॥

ಋಕ್ಷರಾಜಬಿಲಂ ಭೀಮಮಂಧೇನ ತಮಸಾಽಽವೃತಮ್ ।
ಏಕೋ ವಿವೇಶ ಭಗವಾನವಸ್ಥಾಪ್ಯ ಬಹಿಃ ಪ್ರಜಾಃ
॥ ೧೯ ॥

ಬಳಿಕ ಸತ್ರಾಜಿತನು ಸಮೃದ್ಧವಾದ ತನ್ನ ಮನೆಯೊಳಗೆ ಪ್ರವೇಶಿಸಿದನು. ಅವನ ಶುಭಾಗಮನಕ್ಕಾಗಿ ಮನೆಯಲ್ಲಿ ಮಂಗಳೋತ್ಸವವನ್ನು ಆಚರಿಸಿದರು. ಅವನು ಬ್ರಾಹ್ಮಣರ ಮೂಲಕ ಸ್ಯಮಂತಕಮಣಿಯನ್ನು ದೇವರ ಮನೆಯಲ್ಲಿ ಪ್ರತಿಷ್ಠಾಪಿಸಿದನು. ॥ ೧೦ ॥ ರಾಜೇಂದ್ರನೇ! ಆ ಮಣಿಯು ಅನುದಿನವೂ ಎಂಟು ಭಾರಗಳಷ್ಟು ಚಿನ್ನವನ್ನು ಕೊಡುತ್ತಿತ್ತು. ಆ ಮಣಿಯು ಪೂಜಿಸಲ್ಪಡುತ್ತಿದ್ದ ಪ್ರದೇಶದಲ್ಲಿ ದುರ್ಭಿಕ್ಷ, ಮಹಾಮಾರಿ, ಗ್ರಹಪೀಡೆ, ಸರ್ಪಭಯ, ಮಾನಸಿಕ ಮತ್ತು ಶಾರೀರಿಕವಾದ ರೋಗಗಳು, ಮಾಟ-ಮಂತ್ರಗಳ ಉಪದ್ರವ ಇಂತಹ ಅಶುಭ ಪ್ರಸಂಗಗಳು ಯಾವುವೂ ಇರುತ್ತಿರಲಿಲ್ಲ. ॥ ೧೧ ॥ ಒಮ್ಮೆ ಭಗವಾನ್ ಶ್ರೀಕೃಷ್ಣನು ಪ್ರಸಂಗವಶಾತ್ ಸತ್ರಾಜಿತನಿಗೆ ಹೇಳಿದನು – 'ನೀನು ನಿನ್ನ ಈ ಮಣಿಯನ್ನು ರಕ್ಷಣೆಯ ದೃಷ್ಟಿಯಿಂದ ಉಗ್ರಸೇನಮಹಾರಾಜನಿಗೆ ಕೊಟ್ಟು ಬಿಡು.' ಆದರೆ ಅರ್ಥಲುಬ್ಧನಾಗಿದ್ದ ಸತ್ರಾಜಿತನು ಭಗವಂತನ ಆಜ್ಞೆಯ ಉಲ್ಲಂಘನೆಯಾದೀತೆಂದೂ ಯಾವ ವಿಚಾರವನ್ನು ಮಾಡದೆ ಮಣಿಯನ್ನು ಮಹಾರಾಜನಿಗೆ ಕೊಡಲಿಲ್ಲ. ॥ ೧೨ ॥

ಒಂದು ದಿನ ಸತ್ರಾಜಿತನ ತಮ್ಮನಾದ ಪ್ರಸೇನನು ಆ ಪರಮ ಪ್ರಕಾಶಮಯ ಮಣಿಯನ್ನು ಕೊರಳಲ್ಲಿ ಧರಿಸಿಕೊಂಡು ಕುದುರೆಯನ್ನೇರಿ ಬೇಟೆಯಾಡುತ್ತಾ ಕಾಡಿನಲ್ಲಿ ಸಂಚರಿಸುತ್ತಿದ್ದನು.॥ ೧೩ ॥ ಅಲ್ಲಿ ಒಂದು ಸಿಂಹವು ಕುದುರೆ ಸಹಿತವಾಗಿ ಪ್ರಸೇನನನ್ನು ಕೊಂದು ಆ ಮಣಿಯನ್ನು ಕಿತ್ತುಕೊಂಡಿತು. ಅದು ಇನ್ನೇನು ಮಣಿಯೊಡನೆ ಗುಹೆಯನ್ನು ಪ್ರವೇಶಿಸಬೇಕೆನ್ನುವಷ್ಟರಲ್ಲಿ ಋಕ್ಷರಾಜನಾದ ಜಾಂಬವಂತನು ಮಣಿಗಾಗಿ ಆ ಸಿಂಹವನ್ನು ಕೊಂದುಹಾಕಿದನು. ॥ ೧೪ ॥ ಜಾಂಬವಂತನು ಆ ಮಣಿಯನ್ನು ತನ್ನ ಗುಹೆಗೆ ಕೊಂಡುಹೋಗಿ ಮಗುವಿಗೆ ಆಡುವುದಕ್ಕಾಗಿ ಕೊಟ್ಟನು. ಬೇಟೆಯಾಡಲು ಹೋಗಿದ್ದ ಪ್ರಸೇನನು ಬಾರದಿರಲು ಅಣ್ಣನಾದ ಸತ್ರಾಜಿತನು ಬಹುದುಃಖಿತನಾದನು. ॥ ೧೫ ॥ ಅವನು ಹೇಳತೊಡಗಿದನು. 'ಪ್ರಾಯಶಃ ಮಣಿಯ ಆಸೆಯಿಂದ ಶ್ರೀಕೃಷ್ಣನೇ ನನ್ನ ತಮ್ಮನನ್ನು ಕೊಂದಿರಬೇಕು. ಏಕೆಂದರೆ ಅವನು ಮಣಿಯನ್ನು ಧರಿಸಿ ಕಾಡಿಗೆ ಹೋಗಿದ್ದನು.' ಸತ್ರಾಜಿತನ ಈ ಮಾತನ್ನು ಕೇಳಿದ ಜನರು ಪರಸ್ಪರ ಪಿಸುಗುಟ್ಟುತ್ತಿದ್ದರು. ॥ ೧೬ ॥ ಇದು (ಕರ್ಣಾಕರ್ಣಿಕೆಯಾಗಿ) ಶ್ರೀಕೃಷ್ಣನ ಕಿವಿಗೂ ಬಿತ್ತು. ಸುಳ್ಳು ಅಪವಾದವು ತನ್ನ ಮೇಲೆ ಬಂದಿರುವುದನ್ನು ತಿಳಿದಾಗ ಶ್ರೀಕೃಷ್ಣನು ಅಪವಾದದಿಂದ ಪಾರಾಗಲು ಹಲವಾರು ನಾಗರೀಕರೊಡನೆ ಪ್ರಸೇನನನ್ನು ಹುಡುಕಲು ವನಕ್ಕೆ ಹೊರಟನು. ॥ ೧೭ ॥ ಅಲ್ಲಿ ಜನರೆಲ್ಲರೂ ಹುಡುಕುತ್ತಾ-ಹುಡುಕುತ್ತಾ ಘೋರವಾದ ಅಣ್ಯದಲ್ಲಿ ಸಿಂಹವು ಪ್ರಸೇನನನ್ನೂ, ಅವನ ಕುದುರೆಯನ್ನೂ ಕೊಂದು ಹಾಕಿರುವುದನ್ನು ನೋಡಿದರು. ಅವರು ಸಿಂಹದ ಹೆಜ್ಜೆಯ ಗುರುತನ್ನೇ ಹಿಡಿದುಕೊಂಡು ಮುಂದುವರಿದಾಗ ಪರ್ವತದಲ್ಲಿ ಒಂದು ಕರಡಿಯು ಸಿಂಹವನ್ನೂ ಕೊಂದು ಹಾಕಿರುವುದನ್ನು ನೋಡಿದರು. ॥ ೧೮ ॥ ಆ ಕರಡಿಯ ಕಾಲುಗಳ ಗುರುತನ್ನು ಅನುಸರಿಸಿ ಒಂದು ಗುಹಾದ್ವಾರಕ್ಕೆ ಬಂದಾಗ ಶ್ರೀಕೃಷ್ಣನು ಜನರೆಲ್ಲರನ್ನು ಅಲ್ಲೇ ನಿಲ್ಲಿಸಿ ಒಬ್ಬಂಟಿಗನಾಗಿ ಆ ಘೋರ ಅಂಧಕಾರದಿಂದ ತುಂಬಿದ ಋಕ್ಷರಾಜನ ಭಯಂಕರ ಗುಹೆಯನ್ನು ಪ್ರವೇಶಿಸಿದನು. ॥ ೧೯ ॥

ತತ್ರ ದೃಷ್ಟ್ವಾ ಮಣಿಶ್ರೇಷ್ಠಂ ಬಾಲಕ್ರೀಡನಕಂ ಕೃತಮ್ ।
ಹರ್ತುಂ ಕೃತಮತಿಸ್ತಸ್ಮಿನ್ನವತಸ್ಥೇಽರ್ಭಕಾಂತಿಕೇ
॥ ೨೦ ॥

ತಮಪೂರ್ವಂ ನರಂ ದೃಷ್ಟ್ವಾ ಧಾತ್ರೀ ಚುಕ್ರೋಶ ಭೀತವತ್ ।
ತಚ್ಛ್ರುತ್ವಾಭ್ಯದ್ರವತ್ಕ್ರುದ್ಧೋ ಜಾಂಬವಾನ್ ಬಲಿನಾಂ ವರಃ
॥ ೨೧ ॥

ಸ ವೈ ಭಗವತಾ ತೇನ ಯುಯುಧೇ ಸ್ವಾಮಿನಾಽಽತ್ಮನಃ ।
ಪುರುಷಂ ಪ್ರಾಕೃತಂ ಮತ್ವಾ ಕುಪಿತೋ ನಾನುಭಾವವಿತ್
॥ ೨೨ ॥

ದ್ವಂದ್ವಯುದ್ಧಂ ಸುತುಮುಲಮುಭಯೋರ್ವಿಜಿಗೀಷತೋಃ ।
ಆಯುಧಾಶ್ಮದ್ರುಮೈರ್ದೋರ್ಭಿಃ ಕ್ರವ್ಯಾರ್ಥೇ ಶ್ಯೇನಯೋರಿವ
॥ ೨೩ ॥

ಆಸೀತ್ತದಷ್ಟಾವಿಂಶಾಹಮಿತರೇತರಮುಷ್ಟಿಭಿಃ ।
ವಜ್ರನಿಷ್ಪೇಷಪರುಷೈರವಿಶ್ರಮಮಹರ್ನಿಶಮ್
॥ ೨೪ ॥

ಕೃಷ್ಣಮುಷ್ಟಿವಿನಿಷ್ಪಾತನಿಷ್ಪಿಷ್ಟಾಂಗೋರುಬಂಧನಃ ।
ಕ್ಷೀಣಸತ್ತ್ವಃ ಸ್ವಿನ್ನಗಾತ್ರಸ್ತಮಾಹಾತೀವ ವಿಸ್ಮಿತಃ
॥ ೨೫ ॥

ಜಾನೇ ತ್ವಾಂ ಸರ್ವಭೂತಾನಾಂ ಪ್ರಾಣ ಓಜಃ ಸಹೋ ಬಲಮ್ ।
ವಿಷ್ಣುಂ ಪುರಾಣಪುರುಷಂ ಪ್ರಭವಿಷ್ಣುಮಧೀಶ್ವರಮ್
॥ ೨೬ ॥

ತ್ವಂ ಹಿ ವಿಶ್ವಸೃಜಾಂ ಸ್ರಷ್ಟಾ ಸೃಜ್ಯಾನಾಮಪಿ ಯಚ್ಚ ಸತ್ ।
ಕಾಲಃ ಕಲಯತಾಮೀಶಃ ಪರ ಆತ್ಮಾ ತಥಾಽಽತ್ಮನಾಮ್
॥ ೨೭ ॥

ಯಸ್ಯೇಷದುತ್ಕಲಿತರೋಷಕಟಾಕ್ಷಮೋಕ್ಷೈ-
ರ್ವರ್ತ್ಮಾದಿಶತ್ ಕ್ಷುಭಿತನಕ್ರತಿಮಿಂಗಿಲೋಽಬ್ಧಿಃ ।
ಸೇತುಃ ಕೃತಃ ಸ್ವಯಶ ಉಜ್ಜ್ವಲಿತಾ ಚ ಲಂಕಾ
ರಕ್ಷಃಶಿರಾಂಸಿ ಭುವಿ ಪೇತುರಿಷುಕ್ಷತಾನಿ ॥ ೨೮ ॥

ಅಲ್ಲಿ ಆ ಶ್ರೇಷ್ಠವಾದ ಮಣಿಯು ಮಗುವಿನ ಆಟಿಕೆಯಾಗಿರುವುದನ್ನು ನೋಡಿದ ಭಗವಂತನು ಅದನ್ನು ತೆಗೆದುಕೊಂಡು ಹೋಗುವ ಇಚ್ಛೆಯಿಂದ ಆ ಮಗುವಿನ ಹತ್ತಿರ ಹೋಗಿ ನಿಂತನು. ॥ ೨೦ ॥ ಆ ಗುಹೆಯಲ್ಲಿ ಅಪರಿಚಿತನಾದ ಮನುಷ್ಯನೊಬ್ಬನನ್ನು ಕಂಡು ಆ ಮಗುವಿನ ಸಾಕುತಾಯಿಯು ಭಯಗೊಂಡು ಗಟ್ಟಿಯಾಗಿ ಕಿರುಚಿಕೊಂಡಳು. ಆಕೆಯ ಕೂಗನ್ನು ಕೇಳಿ ಮಹಾಬಲಿಷ್ಠನಾದ ಋಕ್ಷರಾಜ ಜಾಂಬವಂತನು ಕೋಪಗೊಂಡು ಅಲ್ಲಿಗೆ ಧಾವಿಸಿ ಬಂದನು. ॥ ೨೧ ॥ ಪರೀಕ್ಷಿತನೇ ! ಅತ್ಯಂತ ಕ್ರುದ್ಧನಾಗಿದ್ದ ಜಾಂಬವಂತನು ಆಗ ಭಗವಂತನ ಮಹಿಮೆ, ಪ್ರಭಾವ ಇವುಗಳನ್ನು ತಿಳಿಯದೇ ಹೋದನು. ಅವನನ್ನು ಒಬ್ಬ ಸಾಧಾರಣನೆಂದು ತಿಳಿದು ಜಾಂಬವಂತನು ತನ್ನ ಸ್ವಾಮಿಯಾದ ಶ್ರೀಕೃಷ್ಣನೊಡನೆ ಯುದ್ಧಮಾಡತೊಡಗಿದನು. ॥ ೨೨ ॥ ಮಾಂಸದ ಆಸೆಯಿಂದ ಎರಡು ಗಿಡುಗ ಪಕ್ಷಿಗಳು ಕಾದಾಡುವಂತೆಯೇ ವಿಜಯಾಭಿಲಾಷಿಗಳಾಗಿ ಶ್ರೀಕೃಷ್ಣನು ಮತ್ತು ಜಾಂಬವಂತನು ಪರಸ್ಪರ ಘೋರವಾದ ಯುದ್ಧದಲ್ಲಿ ತೊಡಗಿದರು. ಮೊದಲಿಗೆ ಅವರು ಅಸ್ತ್ರ-ಶಸ್ತ್ರಗಳಿಂದ ಪ್ರಹರಿಸಿದರೆ, ಮತ್ತೆ ಶಿಲೆಗಳಿಂದ, ಬಳಿಕ ವೃಕ್ಷಗಳಿಂದ ಕಾದಾಡುತ್ತಿದ್ದರು. ಕೊನೆಗೆ ಅವರಲ್ಲಿ ಬಾಹುಯುದ್ಧ ಪ್ರಾರಂಭವಾಯಿತು. ॥ ೨೩ ॥ ಪರೀಕ್ಷಿತನೇ ! ವಜ್ರಾಘಾತದಂತೆ ಕಠೋರ ಮುಷ್ಟಿಗಳಿಂದ ಪರಸ್ಪರವಾಗಿ ಹೊಡೆಯುತ್ತಾ ಇಪ್ಪತ್ತೆಂಟು ದಿನಗಳವರೆಗೆ ಅವಿಶ್ರಾಂತವಾಗಿ ಹಗಲು-ರಾತ್ರಿ ಯುದ್ಧಮಾಡಿದರು. ॥ ೨೪॥ ಕೊನೆಗೆ ಭಗವಾನ್ ಶ್ರೀಕೃಷ್ಣನ ವಜ್ರಮುಷ್ಟಿಯ ಏಟುಗಳಿಂದ ಜಾಂಬವಂತನ ಶರೀರದ ಮೂಳೆಗಳು ಸಡಿಲಗೊಂಡವು. ಅಂಗಾಂಗವೆಲ್ಲವೂ ಶಿಥಿಲವಾಯಿತು. ಉತ್ಸಾಹವು ಉಡುಗಿತು. ಮೈ ಬೆವತುಕೊಂಡಿತು. ಆಗ ಅವನು ಅತ್ಯಂತ ವಿಸ್ಮಿತನಾಗಿ ಶ್ರೀಕೃಷ್ಣನಲ್ಲಿ ಹೇಳಿದನು. ॥ ೨೫ ॥ ಪ್ರಭೋ ! ನೀನೇ ಸಮಸ್ತ ಪ್ರಾಣಿಗಳ ಸ್ವಾಮಿಯೂ, ರಕ್ಷಕನೂ, ಪುರಾಣ ಪುರುಷ ಭಗವಾನ್ ಶ್ರೀವಿಷ್ಣುವೇ ಆಗಿರುವೆ ಎಂಬುದನ್ನು ನಾನು ತಿಳಿದುಕೊಂಡೆ. ನೀನೇ ಎಲ್ಲರ ಪ್ರಾಣ, ಇಂದ್ರಿಯಬಲ, ಮನೋಬಲ ಮತ್ತು ಶರೀರ ಬಲವೂ ಆಗಿರುವೆ. ॥ ೨೬ ॥ ವಿಶ್ವವನ್ನು ರಚಿಸಿದ ಬ್ರಹ್ಮಾದಿಗಳಿಗೂ ನೀನು ಸೃಷ್ಟಿಕರ್ತನಾಗಿರುವೆ. ಸೃಷ್ಟಿಸಲ್ಪಟ್ಟ ಪದಾರ್ಥಗಳಲ್ಲಿಯೂ ಸತ್ತಾರೂಪದಿಂದ ನೀನೇ ವಿರಾಜಿಸುತ್ತಿರುವೆ. ಕಾಲದ ಅವಯವಗಳೆಲ್ಲದರ ನಿಯಾಮಕನಾದ ಪರಮಕಾಲನೂ ನೀನೇ ಆಗಿರುವೆ. ಶರೀರ ಭೇದದಿಂದ ಭಿನ್ನ-ಭಿನ್ನವಾಗಿ ಕಂಡುಬರುವ ಅಂತರಾತ್ಮಗಳ ಪರಮ ಆತ್ಮನೂ ನೀನೇ ಆಗಿರುವೆ. ॥ ೨೭ ॥ ಪ್ರಭೋ ! ನೀನು ನಿನ್ನ ಕಣ್ಣುಗಳ ಸ್ವಲ್ಪವೇ ಕ್ರೋಧಭಾವದಿಂದ ಸಮುದ್ರದ ಕಡೆಗೆ ನೋಡಿದಾಗ ಸಮುದ್ರದೊಳಗೆ ವಾಸಿಸುವ ತಿಮಿಂಗಿಲಗಳೂ, ಮೊಸಳೆಗಳೂ, ದೊಡ್ಡ-ದೊಡ್ಡ ಮೀನುಗಳೂ ತಲ್ಲಣಿಸಿ ಹೋದುವು ಮತ್ತು ಸಮುದ್ರರಾಜನು ನಿನಗೆ ದಾರಿಕೊಟ್ಟನು. ಆಗ ನೀನು ಅದರ ಮೇಲೆ ಸೇತುವನ್ನು ನಿರ್ಮಿಸಿ ಸುಂದರ ಯಶಸ್ಸನ್ನು ಸ್ಥಾಪಿಸಿ ಲಂಕೆಯನ್ನು ಧ್ವಂಸಗೊಳಿಸುತ್ತಾ ನಿನ್ನ ಬಾಣಗಳು ರಾಕ್ಷಸರ ತಲೆಗಳನ್ನು ಕಡಿ-ಕಡಿದು ಭೂಮಿಗೆ ಉರುಳಿಸುತ್ತಿದ್ದುದು ನನ್ನ ಸ್ಮರಣೆಗೆ ಬರುತ್ತಾ ಇದೆ. (ಖಂಡಿತವಾಗಿಯೂ ನೀನು ನನ್ನ ಸ್ವಾಮಿಯಾದ ಶ್ರೀರಾಮನೇ ಈಗ ಶ್ರೀಕೃಷ್ಣನಾಗಿ ಅವತರಿಸಿರುವೆ.) ॥ ೨೮ ॥

ಇತಿ ವಿಜ್ಞಾತವಿಜ್ಞಾನಮೃಕ್ಷರಾಜಾನಮಚ್ಯುತಃ ।
ವ್ಯಾಜಹಾರ ಮಹಾರಾಜ ಭಗವಾನ್ ದೇವಕೀಸುತಃ
॥ ೨೯ ॥

ಅಭಿಮೃಶ್ಯಾರವಿಂದಾಕ್ಷಃ ಪಾಣಿನಾ ಶಂಕರೇಣ ತಮ್ ।
ಕೃಪಯಾ ಪರಯಾ ಭಕ್ತಂ ಪ್ರೇಮಗಂಭೀರಯಾ ಗಿರಾ
॥ ೩೦ ॥

ಮಣಿಹೇತೋರಿಹ ಪ್ರಾಪ್ತಾ ವಯಮೃಕ್ಷಪತೇ ಬಿಲಮ್ ।
ಮಿಥ್ಯಾಭಿಶಾಪಂ ಪ್ರಮೃಜನ್ನಾತ್ಮನೋ ಮಣಿನಾಮುನಾ
॥ ೩೧ ॥

ಇತ್ಯುಕ್ತಃ ಸ್ವಾಂ ದುಹಿತರಂ ಕನ್ಯಾಂ ಜಾಂಬವತೀಂ ಮುದಾ ।
ಅರ್ಹಣಾರ್ಥಂ ಸ ಮಣಿನಾ ಕೃಷ್ಣಾಯೋಪಜಹಾರ ಹ
॥ ೩೨ ॥

ಅದೃಷ್ಟ್ವಾ ನಿರ್ಗಮಂ ಶೌರೇಃ ಪ್ರವಿಷ್ಟಸ್ಯ ಬಿಲಂ ಜನಾಃ ।
ಪ್ರತೀಕ್ಷ್ಯ ದ್ವಾದಶಾಹಾನಿ ದುಃಖಿತಾಃ ಸ್ವಪುರಂ ಯಯುಃ
॥ ೩೩ ॥

ನಿಶಮ್ಯ ದೇವಕೀ ದೇವೀ ರುಕ್ಮಿಣ್ಯಾನಕದುಂದುಭಿಃ ।
ಸುಹೃದೋ ಜ್ಞಾತಯೋಽಶೋಚನ್ ಬಿಲಾತ್ ಕೃಷ್ಣಮನಿರ್ಗತಮ್ ॥ ೩೪ ॥

ಸತ್ರಾಜಿತಂ ಶಪನ್ ತಸ್ತೇ ದುಃಖಿತಾ ದ್ವಾರಕೌಕಸಃ ।
ಉಪತಸ್ಥುರ್ಮಹಾಮಾಯಾಂ ದುರ್ಗಾಂ ಕೃಷ್ಣೋಪಲಬ್ಧಯೇ
॥ ೩೫ ॥

ತೇಷಾಂ ತು ದೇವ್ಯುಪಸ್ಥಾನಾತ್ ಪ್ರತ್ಯಾದಿಷ್ಟಾಶಿಷಾ ಸ ಚ ।
ಪ್ರಾದುರ್ಬಭೂವ ಸಿದ್ಧಾರ್ಥಃ ಸದಾರೋ ಹರ್ಷಯನ್ ಹರಿಃ
॥ ೩೬ ॥

ಉಪಲಭ್ಯ ಹೃಷೀಕೇಶಂ ಮೃತಂ ಪುನರಿವಾಗತಮ್ ।
ಸಹ ಪತ್ನ್ಯಾ ಮಣಿಗ್ರೀವಂ ಸರ್ವೇ ಜಾತಮಹೋತ್ಸವಾಃ
॥ ೩೭ ॥

ಸತ್ರಾಜಿತಂ ಸಮಾಹೂಯ ಸಭಾಯಾಂ ರಾಜಸನ್ನಿಧೌ ।
ಪ್ರಾಪ್ತಿಂ ಚಾಖ್ಯಾಯ ಭಗವಾನ್ ಮಣಿಂ ತಸ್ಮೈ ನ್ಯವೇದಯತ್
॥ ೩೮ ॥

ಸ ಚಾತಿವ್ರೀಡಿತೋ ರತ್ನಂ ಗೃಹೀತ್ವಾವಾಙ್ಮುಖಸ್ತತಃ ।
ಅನುತಪ್ಯಮಾನೋ ಭವನಮಗಮತ್ ಸ್ವೇನ ಪಾಪ್ಮನಾ
॥ ೩೯ ॥

ಪರೀಕ್ಷಿತನೇ! ಋಕ್ಷರಾಜನಾದ ಜಾಂಬವಂತನು ಭಗವಂತನನ್ನು ಗುರುತಿಸಿಕೊಂಡಾಗ ಕಮಲನಯನ ಶ್ರೀಕೃಷ್ಣನು ತನ್ನ ಪರಮ ಕಲ್ಯಾಣಕಾರವಾದ, ಶೀತಲವಾದ ಕರಕಮಲಗಳಿಂದ ಅವನ ಶರೀರವನ್ನು ನೇವರಿಸಿದನು. ಬಳಿಕ ಶ್ರೀಕೃಷ್ಣನು ಭಕ್ತನ ವಿಷಯದಲ್ಲಿ ಪರಮಕೃಪೆಯನ್ನು ತೋರುತ್ತಾ, ಪ್ರೇಮಪೂರ್ಣವಾದ ಗಂಭೀರ ವಾಣಿಯಿಂದ ಭಕ್ತನಾದ ಜಾಂಬವಂತನಲ್ಲಿ ಹೇಳಿದನು. ॥ ೨೯-೩೦॥ ಋಕ್ಷರಾಜನಾದ ಜಾಂಬವಂತನೇ! ನಾನು ಮಣಿಗಾಗಿಯೇ ನಿನ್ನ ಈ ಗುಹೆಗೆ ಬಂದಿರುವೆನು. ಈ ಮಣಿಯಿಂದಾಗಿ ನನ್ನ ಮೇಲೆ ಬಂದಿರುವ ಸುಳ್ಳು ಅಪವಾದವನ್ನು ಹೋಗಲಾಡಿಸಲು ಬಯಸುತ್ತೇನೆ. ॥ ೩೧ ॥ ಭಗವಂತನು ಹೀಗೆ ಹೇಳಿದಾಗ ಜಾಂಬವಂತನು ಅತ್ಯಂತ ಆನಂದದಿಂದ ಅವನನ್ನು ಪೂಜಿಸಿ, ತನ್ನ ಕನ್ಯೆಯಾದ ಜಾಂಬವತಿಯನ್ನು ಮಣಿಯೊಂದಿಗೆ ಶ್ರೀಕೃಷ್ಣನ ಚರಣಗಳಲ್ಲಿ ಸಮರ್ಪಿಸಿದನು. ॥ ೩೨ ॥

ಗುಹೆಯ ಬಾಗಿಲಲ್ಲಿ ಶ್ರೀಕೃಷ್ಣನು ಬರುವುದನ್ನೇ ನಿರೀಕ್ಷಿಸುತ್ತಾ ನಿಂತಿದ್ದ ಪುರಜನರು ಹನ್ನೆರಡು ದಿವಸಗಳವರೆಗೆ ಕಾದಿದ್ದರು. ಒಳಹೋದ ಶೌರಿಯು ಗುಹೆಯಿಂದ ಹೊರಗೆ ಬಾರದಿರಲು ಅತಿದುಃಖಿತರಾಗಿ ದ್ವಾರಕೆಗೆ ಹಿಂದಿರುಗಿದರು. ॥ ೩೩ ॥ ಹನ್ನೆರಡು ದಿವಸಗಳು ಕಳೆದರೂ ಶ್ರೀಕೃಷ್ಣನು ಗುಹೆಯಿಂದ ಹೊರಕ್ಕೆ ಬಾರದಿರುವುದನ್ನು ತಿಳಿದ ತಾಯಿಯಾದ ದೇವಕೀದೇವಿ, ತಂದೆಯಾದ ವಸುದೇವ, ರುಕ್ಮಿಣೀ, ಸುಹೃದರು, ಜ್ಞಾತಿ ಬಾಂಧವರು - ಎಲ್ಲರೂ ಬಹಳವಾಗಿ ದುಃಖಿಸಿದರು. ॥ ೩೪ ॥ ದ್ವಾರಕಾವಾಸಿಗಳೆಲ್ಲರೂ ಅತ್ಯಂತ ದುಃಖಿತರಾಗಿ ಸತ್ರಾಜಿತನನ್ನು ಶಪಿಸತೊಡಗಿದರು. ಭಗವಾನ್ ಶ್ರೀಕೃಷ್ಣನು ಕ್ಷೇಮದಿಂದ ಬೇಗಬರಲೆಂದು ಮಹಾಮಾಯೆಯಾದ ದುರ್ಗಾದೇವಿಯನ್ನು ಪ್ರಾರ್ಥಿಸುತ್ತಾ, ಉಪಾಸನೆ ಮಾಡಿದರು. ॥ ೩೫ ॥ ಅವರ ಉಪಾಸನೆಯಿಂದ ದುರ್ಗಾದೇವಿಯು ಪ್ರಸನ್ನಳಾಗಿ ಅವರಿಗೆ ಆಶೀರ್ವಾದವನ್ನು ಕೊಟ್ಟಳು. ಅದೇ ಸಮಯದಲ್ಲಿ ಅವರ ನಡುವೆಯೇ ಸ್ಯಮಂತಕಮಣಿ ಮತ್ತು ನವವಧೂ ಜಾಂಬವತಿಯೊಂದಿಗೆ ಸಫಲ ಮನೋರಥನಾದ ಶ್ರೀಕೃಷ್ಣನು ಪ್ರಕಟನಾಗಿ ಎಲ್ಲರನ್ನು ಸಂತೋಷಗೊಳಿಸಿದನು. ॥ ೩೬ ॥ ಸ್ಯಮಂತಕ ಮಣಿಯನ್ನು ಕೊರಳಿನಲ್ಲಿ ಧರಿಸಿಕೊಂಡ ಭಗವಾನ್ ಶ್ರೀಕೃಷ್ಣನು ಪತ್ನಿಯೊಂದಿಗೆ ಬಂದಿರುವುದನ್ನು ಕಂಡು ಸತ್ತವನು ಮರಳಿ ಬದುಕಿ ಬಂದಂತೆ ದ್ವಾರಕಾವಾಸಿಗಳೆಲ್ಲರೂ ಪರಮಾನಂದದಲ್ಲಿ ಮುಳುಗಿ ಹೋದರು. ॥ ೩೭ ॥

ಭಗವಾನ್ ಶ್ರೀಕೃಷ್ಣನು ಸತ್ರಾಜಿತನನ್ನು ಉಗ್ರಸೇನ ಮಹಾರಾಜರ ರಾಜಸಭೆಗೆ ಕರೆಸಿದನು ಹಾಗೂ ಮಣಿಯು ಹೇಗೆ ಪ್ರಾಪ್ತವಾಯಿತೆಂಬ ಎಲ್ಲ ಕಥೆಯನ್ನೂ ಎಲ್ಲರೆದುರಿಗೆ ಹೇಳಿ ಆ ಮಣಿಯನ್ನು ಸತ್ರಾಜಿತನಿಗೆ ಒಪ್ಪಿಸಿದನು. ॥ ೩೮ ॥ ಇದರಿಂದ ಸತ್ರಾಜಿತನು ಅತ್ಯಂತ ಲಜ್ಜಿತನಾಗಿ ಮಣಿಯನ್ನೇನೋ ತೆಗೆದುಕೊಂಡನು; ಆದರೆ ಅವನ ಕತ್ತು ಎಲ್ಲರೆದುರಿಗೆ ಬಾಗಿ ಹೋಯಿತು. ತನ್ನ ಅಪರಾಧದಿಂದ ಅವನಿಗೆ ಪಶ್ಚಾತ್ತಾಪ ಉಂಟಾಗಿ ಹೇಗೋ ಮನೆಯನ್ನು ಸೇರಿಕೊಂಡನು. ॥ ೩೯ ॥

ಸೋಽನುಧ್ಯಾಯಂಸ್ತದೇವಾಘಂ ಬಲವದ್ವಿಗ್ರಹಾಕುಲಃ ।
ಕಥಂ ಮೃಜಾಮ್ಯಾತ್ಮರಜಃ ಪ್ರಸೀದೇದ್ವಾಚ್ಯುತಃ ಕಥಮ್ ॥ ೪೦ ॥

ಕಿಂ ಕೃತ್ವಾ ಸಾಧು ಮಹ್ಯಂ ಸ್ಯಾನ್ನ ಶಪೇದ್ವಾ ಜನೋ ಯಥಾ ।
ಅದೀರ್ಘದರ್ಶನಂ ಕ್ಷುದ್ರಂ ಮೂಢಂ ದ್ರವಿಣಲೋಲುಪಮ್ ॥ ೪೧ ॥

ದಾಸ್ಯೇ ದುಹಿತರಂ ತಸ್ಮೈ ಸ್ತ್ರೀರತ್ನಂ ರತ್ನಮೇವ ಚ ।
ಉಪಾಯೋಽಯಂ ಸಮೀಚೀನಸ್ತಸ್ಯ ಶಾಂತಿರ್ನ ಚಾನ್ಯಥಾ ॥ ೪೨ ॥

ಏವಂ ವ್ಯವಸಿತೋ ಬುದ್ಧ್ಯಾ ಸತ್ರಾಜಿತ್ ಸ್ವಸುತಾಂ ಶುಭಾಮ್ ।
ಮಣಿಂ ಚ ಸ್ವಯಮುದ್ಯಮ್ಯ ಕೃಷ್ಣಾಯೋಪಜಹಾರ ಹ ॥ ೪೩ ॥

ತಾಂ ಸತ್ಯಭಾಮಾಂ ಭಗವಾನ್ ಉಪಯೇಮೇ ಯಥಾವಿ ।
ಬಹುಭಿರ್ಯಾಚಿತಾಂ ಶೀಲರೂಪೌದಾರ್ಯಗುಣಾನ್ವಿತಾಮ್ ॥ ೪೪ ॥

ಭಗವಾನಾಹ ನ ಮಣಿಂ ಪ್ರತೀಚ್ಛಾಮೋ ವಯಂ ನೃಪ ।
ತವಾಸ್ತಾಂ ದೇವಭಕ್ತಸ್ಯ ವಯಂ ಚ ಫಲಭಾಗಿನಃ ॥ ೪೫ ॥

ಅವನ ಮನಸ್ಸಿನಲ್ಲಿ ನಿರಂತರವಾಗಿ ತನ್ನ ಅಪರಾಧವು ಕುಣಿಯುತ್ತಿತ್ತು. ಜೊತೆಗೆ ಬಲಿಷ್ಠರೊಂದಿಗೆ ಉಂಟಾದ ವಿರೋಧದಿಂದಾಗಿ ಭಯ-ಭೀತನೂ ಆದನು. 'ನಾನು ನನ್ನ ಅಪರಾಧವನ್ನು ಹೇಗೆ ಕಳೆದುಕೊಳ್ಳಲಿ ? ಭಗವಾನ್ ಶ್ರೀಕೃಷ್ಣನು ನನ್ನ ಮೇಲೆ ಹೇಗೆ ಪ್ರಸನ್ನನಾದಾನು ?' ಎಂಬುದಾಗಿ ಸದಾ ಯೋಚಿಸುತ್ತಾ ಇದ್ದನು. ॥ ೪೦ ॥ ನನ್ನ ಶ್ರೇಯಸ್ಸು ಉಂಟಾಗಿ, ಜನರು ನನ್ನನ್ನು ನಿಂದಿಸದೇ ಇರುವಂತಹ ಯಾವ ಕಾರ್ಯವನ್ನು ಮಾಡಲಿ ? ನಿಜವಾಗಿ ನಾನು ಮುಂದಾಲೋಚನೆಯಿಲ್ಲದ ಕ್ಷುದ್ರನಾಗಿದ್ದೇನೆ. ಧನಲೋಭದಿಂದ ನಾನು ಬಹುದೊಡ್ಡ ಮೂಢತನದ ಕಾರ್ಯವನ್ನು ಮಾಡಿಬಿಟ್ಟೆನಲ್ಲ! ॥ ೪೧ ॥ ಈಗ ನಾನು ರಮಣಿಯರ ರತ್ನದಂತಿರುವ ನನ್ನ ಕನ್ಯೆಯಾದ ಸತ್ಯಭಾಮೆಯನ್ನು ಸ್ಯಮಂತಕ ಮಣಿಯೊಂದಿಗೆ ಶ್ರೀಕೃಷ್ಣನಿಗೆ ಕೊಟ್ಟುಬಿಡುತ್ತೇನೆ. ಸಮೀಚೀನವಾದ ಈ ಉಪಾಯದಿಂದ ನನ್ನ ಅಪರಾಧವು ಪರಿಹಾರವಾಗುತ್ತದೆ. ಇದಲ್ಲದೆ ಬೇರೆ ಉಪಾಯವೇ ಇಲ್ಲ. ॥ ೪೨ ॥ ಸತ್ರಾಜಿತನು ತನ್ನ ವಿವೇಕ ಬುದ್ಧಿಯಿಂದ ಹೀಗೆ ನಿಶ್ಚಯಿಸಿ ಕಾರ್ಯಪ್ರವೃತ್ತನಾದನು. ತನ್ನ ಕನ್ಯಾಮಣಿಯನ್ನು ಮತ್ತು ಸ್ಯಮಂತಕ ಮಣಿಯನ್ನು ಕೊಂಡುಹೋಗಿ ಶ್ರೀಕೃಷ್ಣನಿಗೆ ಅರ್ಪಿಸಿಬಿಟ್ಟನು. ॥ ೪೩ ॥ ಶೀಲ-ಸ್ವಭಾವ, ಸೌಂದರ್ಯ, ಔದಾರ್ಯ ಮೊದಲಾದ ಸದ್ಗುಣಗಳಿಂದ ಸಂಪನ್ನಳಾಗಿದ್ದ ಸತ್ಯಭಾಮೆಯು ನಮಗೆ ಸಿಗಲಿ ಎಂದು ಬಹಳಷ್ಟು ಜನರು ಆಶಿಸುತ್ತಿದ್ದರು ಹಾಗೂ ಬೇಡಿಕೆಯನ್ನೂ ಮುಂದಿಟ್ಟಿದ್ದರು. ಆದರೆ ಈಗ ಭಗವಾನ್ ಶ್ರೀಕೃಷ್ಣನು ವಿಧಿಪೂರ್ವಕವಾಗಿ ಆಕೆಯ ಪಾಣಿಗ್ರಹಣ ಮಾಡಿದನು.॥ ೪೪ ॥ ಪರೀಕ್ಷಿತನೇ ! ಭಗವಾನ್ ಶ್ರೀಕೃಷ್ಣನು ಸತ್ರಾಜಿತನಿಗೆ ಹೇಳಿದನು- 'ನಾನು ಈ ಸ್ಯಮಂತಕಮಣಿಯನ್ನು ತೆಗೆದುಕೊಳ್ಳುವುದಿಲ್ಲ. ನೀನು ಸೂರ್ಯಭಗವಂತನ ಭಕ್ತನಾಗಿರುವೆ. ಆದ್ದರಿಂದ ಅದು ನಿನ್ನ ಬಳಿಯಲ್ಲೇ ಇರಲಿ. ನಾವಾದರೋ ಅದರ ಫಲಕ್ಕೆ ಅರ್ಥಾತ್ ಅದರಿಂದ ದೊರಕುವ ಚಿನ್ನಕ್ಕೆ ಅಧಿಕಾರಿಗಳಾಗಿದ್ದೇವೆ. ಅದನ್ನಷ್ಟು ನಮಗೆ ಕೊಡುತ್ತಾ ಬಾ. ॥ ೪೫ ॥

ಐವತ್ತಾರನೆಯ ಅಧ್ಯಾಯವು ಮುಗಿಯಿತು. ॥ ೫೬ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಉತ್ತರಾರ್ಧೇ
ಸ್ಯಮಂತಕೋಪಾಖ್ಯಾನೇ ಷಟ್‌ಪಂಚಾಶತ್ತಮೋಽಧ್ಯಾಯಃ ॥ ೫೬ ॥

# ಐವತ್ತೇಳನೆಯ ಅಧ್ಯಾಯ

## ಶ್ಯಮಂತಕಮಣಿಯ ಹರಣ - ಶತಧನ್ವನ ವಧೆ - ಅಕ್ರೂರನನ್ನು ದ್ವಾರಕೆಗೆ ಕರೆಸಿಕೊಂಡುದು

ಶ್ರೀಶುಕ ಉವಾಚ

ವಿಜ್ಞಾತಾರ್ಥೋಽಪಿ ಗೋವಿಂದೋ
ದಗ್ಧಾನಾಕರ್ಣ್ಯ ಪಾಂಡವಾನ್ ।
ಕುಂತೀಂ ಚ ಕುಲ್ಯಕರಣೇ
ಸಹರಾಮೋ ಯಯೌ ಕುರೂನ್ ॥ ೧ ॥

ಭೀಷ್ಮಂ ಕೃಪಂ ಸವಿದುರಂ ಗಾಂಧಾರೀಂ ದ್ರೋಣಮೇವ ಚ ।
ತುಲ್ಯದುಃಖೌ ಚ ಸಂಗಮ್ಯ ಹಾ ಕಷ್ಟಮಿತಿ ಹೋಚತುಃ ॥ ೨ ॥

ಲಬ್ಧ್ವೈತದಂತರಂ ರಾಜನ್ ಶತಧನ್ವಾನಮೂಚತುಃ ।
ಅಕ್ರೂರಕೃತವರ್ಮಾಣೌ ಮಣಿಃ ಕಸ್ಮಾನ್ನ ಗೃಹ್ಯತೇ ॥ ೩ ॥

ಯೋಽಸ್ಮಭ್ಯಂ ಸಂಪ್ರತಿಶ್ರುತ್ಯ ಕನ್ಯಾರತ್ನಂ ವಿಗರ್ಹ್ಯ ನಃ ।
ಕೃಷ್ಣಾಯಾದಾನ್ನ ಸತ್ರಾಜಿತ್ ಕಸ್ಮಾದ್ಭ್ರಾತರಮನ್ವಿಯಾತ್ ॥ ೪ ॥

ಏವಂ ಭಿನ್ನಮತಿಸ್ತಾಭ್ಯಾಂ ಸತ್ರಾಜಿತಮಸತ್ತಮಃ ।
ಶಯಾನಮವಧೀಲ್ಲೋಭಾತ್ ಸ ಪಾಪಃ ಕ್ಷೀಣಜೀವಿತಃ ॥ ೫ ॥

ಸ್ತ್ರೀಣಾಂ ವಿಕ್ರೋಶಮಾನಾನಾಂ ಕ್ರಂದಂತೀನಾಮನಾಥವತ್ ।
ಹತ್ವಾ ಪಶೂನ್ ಸೌನಿಕವನ್ಮಣಿಮಾದಾಯ ಜಗ್ಮಿವಾನ್ ॥ ೬ ॥

ಸತ್ಯಭಾಮಾ ಚ ಪಿತರಂ ಹತಂ ವೀಕ್ಷ್ಯ ಶುಚಾರ್ಪಿತಾ ।
ವ್ಯಲಪತ್ತಾತ ತಾತೇತಿ ಹಾ ಹತಾಸ್ಮೀತಿ ಮುಹ್ಯತೀ ॥ ೭ ॥

ತೈಲದ್ರೋಣ್ಯಾಂ ಮೃತಂ ಪ್ರಾಸ್ಯ ಜಗಾಮ ಗಜಸಾಹ್ವಯಮ್ ।
ಕೃಷ್ಣಾಯ ವಿದಿತಾರ್ಥಾಯ ತಪ್ತಾಽಽಚಖ್ಯೌ ಪಿತುರ್ವಧಮ್ ॥ ೮ ॥

ಶ್ರೀಶುಕಮಹಾಮುನಿಗಳು ಹೇಳುತ್ತಾರೆ - ಎಲೈ ಪರೀಕ್ಷಿತನೇ! ಲಾಕ್ಷಾಗೃಹದಲ್ಲಿ ಪಾಂಡವರು ಸುಟ್ಟುಹೋಗಿಲ್ಲವೆಂಬುದಾಗಿ ಭಗವಾನ್ ಶ್ರೀಕೃಷ್ಣನು ತಿಳಿದಿದ್ದರೂ ಕುಂತೀಸಹಿತ ಪಾಂಡವರು ಅರಗಿನಾಲಯದಲ್ಲಿ ಭಸ್ಮವಾಗಿ ಸತ್ತುಹೋದರೆಂಬ ವಾರ್ತೆ ಕೇಳಿದಾಗ ಕುಲಪರಂಪರೆಯಿಂದ ನಡೆದು ಬಂದಿರುವ ಕಾರ್ಯವನ್ನು ನಡೆಸಲು ಶ್ರೀಕೃಷ್ಣನು ಬಲರಾಮನೊಂದಿಗೆ ಹಸ್ತಿನಾಪುರಕ್ಕೆ ಹೋದನು. ॥ ೧ ॥ ಅಲ್ಲಿಗೆ ಹೋಗಿ ಭೀಷ್ಮ, ಕೃಪರು, ವಿದುರ, ಗಾಂಧಾರೀ, ದ್ರೋಣಾಚಾರ್ಯ ಮುಂತಾದವರನ್ನು ಭೇಟಿಯಾಗಿ, ಅವರೊಂದಿಗೆ ಸಮಾನ ದುಃಖ ಸಹಾನುಭೂತಿ ಪ್ರಕಟಿಸುತ್ತಾ 'ಅಯ್ಯೋ! ಇದು ಅತ್ಯಂತ ದುಃಖದ ಪ್ರಸಂಗವಾಗಿದೆ' ಎಂದು ಮರುಗಿದನು. ॥ ೨ ॥

ಭಗವಾನ್ ಶ್ರೀಕೃಷ್ಣನು ಹಸ್ತಿನಾಪುರಕ್ಕೆ ಹೊರಟು ಹೋಗಿದ್ದರಿಂದ ದ್ವಾರಕೆಯಲ್ಲಿ ಅಕ್ರೂರ ಮತ್ತು ಕೃತವರ್ಮರಿಗೆ ಅವಕಾಶ ದೊರೆಯಿತು. ಅವರು ಶತಧನ್ವನ ಬಳಿಗೆ ಬಂದು - 'ನೀನು ಸತ್ರಾಜಿತನಲ್ಲಿರುವ ಮಣಿಯನ್ನು ಏಕೆ ಅಪಹರಿಸಬಾರದು?' ಎಂದು ಹೇಳಿದರು. ॥ ೩ ॥ ಸತ್ರಾಜಿತನು ತನ್ನ ಹಿರಿಯ ಮಗಳನ್ನು ನನಗೆ ಕೊಡುವ ಮಾತು ಕೊಟ್ಟಿದ್ದನು. ಈಗ ಅವನು ನನ್ನನ್ನು ತಿರಸ್ಕರಿಸಿ ಶ್ರೀಕೃಷ್ಣನಿಗೆ ವಿವಾಹಮಾಡಿಕೊಟ್ಟಿರುವನು. ಈಗ ಸತ್ರಾಜಿತನು ತಮ್ಮನಾದ ಪ್ರಸೇನನಂತೆ ಯಮಪುರಿಗೆ ಏಕೆ ಹೋಗಬಾರದು? ॥ ೪ ॥ ಮಹಾಪಾಪಿಷ್ಠನಾದ ಶತಧನ್ವನ ಆಯುಸ್ಸು ತೀರಿಹೋಗಿತ್ತು. ಅಕ್ರೂರ-ಕೃತವರ್ಮರ ಪ್ರಚೋದನೆಯಿಂದಾಗಿ ಆ ಮಹಾ ದುಷ್ಟನು ಮಣಿಯ ಲೋಭದಿಂದ ಮಲಗಿದ್ದ ಸತ್ರಾಜಿತನನ್ನು ಕೊಂದು ಹಾಕಿದನು. ॥ ೫ ॥ ಈ ಸಮಯದಲ್ಲಿ ಸತ್ರಾಜಿತನ ಮನೆಯಲ್ಲಿದ್ದ ಸ್ತ್ರೀಯರು ಅನಾಥರಂತೆ ಗಟ್ಟಿಯಾಗಿ ಕೂಗಿಕೊಳ್ಳುತ್ತಿದ್ದರೂ ಶತಧನ್ವನು ಅವರ ಕಡೆಗೆ ಗಮನವೇ ಕೊಡಲಿಲ್ಲ, ಕಟುಕನು ಪಶುಗಳನ್ನು ನಿರ್ದಯವಾಗಿ ಕತ್ತರಿಸುವಂತೆಯೇ ಅವನು ಸತ್ರಾಜಿತನನ್ನು ಕೊಚ್ಚಿಹಾಕಿ, ಮಣಿಯೊಂದಿಗೆ ಅಲ್ಲಿಂದ ಪರಾರಿಯಾದನು. ॥ ೬ ॥

ತಂದೆಯು ಹತನಾಗಿ ಬಿದ್ದಿರುವುದನ್ನು ನೋಡಿದ ಸತ್ಯಭಾಮೆಯು ಅತ್ಯಂತ ದುಃಖಿತಳಾಗಿ - 'ಅಯ್ಯೋ! ತಂದೆಯೇ! ನಿನಗೆಂತಹ ಸ್ಥಿತಿಯು ಒದಗಿತು? ನೀನು ಸತ್ತನಂತರ ನಾನು ಸತ್ತಂತೆಯೇ ಸರಿ. ಹೀಗೆ ಹೇಳಿಕೊಂಡು ಗೋಳಾಡುತ್ತಾ ಮೂರ್ಛೆ ಹೋದಳು. ಎಚ್ಚರಗೊಂಡು ಪುನಃ ದುಃಖಿಸುವಳು. ॥ ೭ ॥ ಅನಂತರ ಸತ್ಯಭಾಮೆಯು ತನ್ನ ತಂದೆಯ ಶವವನ್ನು ಎಣ್ಣೆಯ ಕೊಪ್ಪರಿಗೆಯಲ್ಲಿರಿಸಿ, ತಾನು ಹಸ್ತಿನಾಪುರಕ್ಕೆ ಹೋದಳು. ಅವಳು ಅತ್ಯಂತ ದುಃಖದಿಂದ ಭಗವಾನ್ ಶ್ರೀಕೃಷ್ಣನಲ್ಲಿ ತಂದೆಯ ಹತ್ಯೆಯ ವೃತ್ತಾಂತವನ್ನು ತಿಳಿಸಿದಳು. ಸರ್ವಾಂತರ್ಯಾಮಿಯಾದ ಶ್ರೀಕೃಷ್ಣನಾದರೋ ಇದನ್ನು ಮೊದಲೇ ತಿಳಿದಿದ್ದನು. ॥ ೮ ॥

ತದಾಕರ್ಣ್ಯೇಶ್ವರೌ ರಾಜನ್ನನುಸೃತ್ಯ ನೃಲೋಕತಾಮ್ ।
ಅಹೋ ನಃ ಪರಮಂ ಕಷ್ಟಮಿತ್ಯಸ್ರಾಕ್ಷೌ ವಿಲೇಪತುಃ
॥ ೯ ॥

ಆಗತ್ಯ ಭಗವಾಂಸ್ತಸ್ಮಾತ್ ಸಭಾರ್ಯಃ ಸಾಗ್ರಜಃ ಪುರಮ್ ।
ಶತಧನ್ವಾನಮಾರೇಭೇ ಹಂತುಂ ಹರ್ತುಂ ಮಣಿಂ ತತಃ
॥ ೧೦ ॥

ಸೋಽಪಿ ಕೃಷ್ಣೋದ್ಯಮಂ ಜ್ಞಾತ್ವಾ ಭೀತಃ ಪ್ರಾಣಪರೀಪ್ಸಯಾ ।
ಸಾಹಾಯ್ಯೇ ಕೃತವರ್ಮಾಣಮಯಾಚತ ಸ ಚಾಬ್ರವೀತ್
॥ ೧೧ ॥

ನಾಹಮೀಶ್ವರಯೋಃ ಕುರ್ಯಾಂ ಹೇಲನಂ ರಾಮಕೃಷ್ಣಯೋಃ ।
ಕೋ ನು ಕ್ಷೇಮಾಯ ಕಲ್ಪೇತ ತಯೋರ್ವೃಜಿನಮಾಚರನ್
॥ ೧೨ ॥

ಕಂಸಃ ಸಹಾನುಗೋಽಪೀತೋ ಯದ್ದ್ವೇಷಾತ್ತ್ಯಾಜಿತಃ ಶ್ರಿಯಾ ।
ಜರಾಸಂಧಃ ಸಪ್ತದಶ ಸಂಯುಗಾನ್ ವಿರಥೋ ಗತಃ
॥ ೧೩ ॥

ಪ್ರತ್ಯಾಖ್ಯಾತಃ ಸ ಚಾಕ್ರೂರಂ ಪಾರ್ಷ್ಣಿಗ್ರಾಹಮಯಾಚತ ।
ಸೋಽಪ್ಯಾಹ ಕೋ ವಿರುಧ್ಯೇತ ವಿದ್ವಾನೀಶ್ವರಯೋರ್ಬಲಮ್
॥ ೧೪ ॥

ಯ ಇದಂ ಲೀಲಯಾ ವಿಶ್ವಂ ಸೃಜತ್ಯವತಿ ಹಂತಿ ಚ ।
ಚೇಷ್ಟಾಂ ವಿಶ್ವಸೃಜೋ ಯಸ್ಯ ನ ವಿದುರ್ಮೋಹಿತಾಜಯಾ
॥ ೧೫ ॥

ಯಃ ಸಪ್ತಹಾಯನಃ ಶೈಲಮುತ್ಪಾಟ್ಯೈಕೇನ ಪಾಣಿನಾ ।
ದಧಾರ ಲೀಲಯಾ ಬಾಲ ಉಚ್ಛಿಲೀಂಧ್ರಮಿವಾರ್ಭಕಃ
॥ ೧೬ ॥

ನಮಸ್ತಸ್ಮೈ ಭಗವತೇ ಕೃಷ್ಣಾಯಾದ್ಭುತಕರ್ಮಣೇ ।
ಅನಂತಾಯಾದಿಭೂತಾಯ ಕೂಟಸ್ಥಾಯಾತ್ಮನೇ ನಮಃ
॥ ೧೭ ॥

ಪ್ರತ್ಯಾಖ್ಯಾತಃ ಸ ತೇನಾಪಿ ಶತಧನ್ವಾ ಮಹಾಮಣಿಮ್ ।
ತಸ್ಮಿನ್ನ್ಯಸ್ಯಾಶ್ವಮಾರುಹ್ಯ ಶತಯೋಜನಗಂ ಯಯೌ
॥ ೧೮ ॥

ಗರುಡಧ್ವಜಮಾರುಹ್ಯ ರಥಂ ರಾಮಜನಾರ್ದನೌ ।
ಅನ್ವಯಾತಾಂ ಮಹಾವೇಗೈರಶ್ವೈ ರಾಜನ್ ಗುರುದ್ರುಹಮ್
॥ ೧೯ ॥

ಪರೀಕ್ಷಿತನೇ ! ಸರ್ವಶಕ್ತನಾದ ಶ್ರೀಕೃಷ್ಣನು ಮತ್ತು ಬಲರಾಮರು ಎಲ್ಲವನ್ನು ಕೇಳಿ ಮನುಷ್ಯರಂತೆ ಲೀಲೆಯಾಡುತ್ತಾ ಕಣ್ಣುಗಳಲ್ಲಿ ನೀರನ್ನು ತುಂಬಿಕೊಂಡು ಅಯ್ಯೋ ! ನಮ್ಮಗಳ ಮೇಲೆ ಇದೆಂತಹ ವಿಪತ್ತು ಒದಗಿಬಂತಲ್ಲ! ಎಂದು ವಿಲಾಪಿಸತೊಡಗಿದರು. ॥ ೯ ॥ ಅನಂತರ ಶ್ರೀಕೃಷ್ಣನು ಸತ್ಯಭಾಮೆ ಮತ್ತು ಬಲರಾಮರೊಂದಿಗೆ ಹಸ್ತಿನಾಪುರದಿಂದ ಹೊರಟು ದ್ವಾರಕೆಗೆ ಮರಳಿದರು. ಸತ್ರಾಜಿತನನ್ನು ಕೊಂದಿರುವ ಶತಧನ್ವನನ್ನು ಸಂಹರಿಸಿ ಅವನಿಂದ ಮಣಿಯನ್ನು ಪಡೆಯಲು ಪ್ರಯತ್ನಿಸತೊಡಗಿದರು. ॥ ೧೦ ॥ ಭಗವಾನ್ ಶ್ರೀಕೃಷ್ಣನು ತನ್ನನ್ನು ಕೊಲ್ಲಲು ಹೊಂಚುಹಾಕುತ್ತಿರುವನೆಂದು ತಿಳಿದ ಶತಧನ್ವನು ಬಹಳವಾಗಿ ಹೆದರಿ ಹೋದನು. ತನ್ನ ಪ್ರಾಣವನ್ನು ಉಳಿಸಿಕೊಳ್ಳಲು ಅವನು ಕೃತವರ್ಮನ ಸಹಾಯನ್ನು ಬೇಡಿದನು. ಆಗ ಕೃತವರ್ಮನು ಹೇಳಿದನು. ॥ ೧೧ ॥ ಭಗವಾನ್ ಶ್ರೀಕೃಷ್ಣ ಮತ್ತು ಬಲರಾಮರು ಸರ್ವಶಕ್ತರಾದ ಈಶ್ವರರಾಗಿದ್ದಾರೆ. ನಾನು ಅವರನ್ನು ಎದುರಿಸಲಾರೆ. ಅವರೊಂದಿಗೆ ವೈರವನ್ನು ಕಟ್ಟಿಕೊಂಡು ಕ್ಷೇಮದಿಂದಿರಲು ಯಾರಿಗೆ ತಾನೇ ಸಾಧ್ಯವಾದೀತು ? ॥ ೧೨ ॥ ಕಂಸನು ಅವರಲ್ಲಿನ ದ್ವೇಷದಿಂದಲೇ ರಾಜ್ಯಲಕ್ಷ್ಮಿಯನ್ನು ಕಳೆದುಕೊಂಡು, ಅನುಯಾಯಿಗಳೊಂದಿಗೆ ಅವಸಾನ ಹೊಂದಿದನು. ಜರಾಸಂಧನಂತಹ ಪರಾಕ್ರಮಿಯೂ ಹದಿನೇಳು ಬಾರಿ ಸೋತು ರಥವಿಹೀನನಾಗಿ ರಣರಂಗದಿಂದ ಓಡಬೇಕಾಯಿತು. ಇವೆಲ್ಲವನ್ನು ನೀನು ತಿಳಿದೇ ಇರುವೆ. ॥ ೧೩ ॥ ಕೊಲೆಗೆ ಪ್ರಚೋದಿಸಿದ ಕೃತವರ್ಮನು ಹೀಗೆ ಹೇಳಿ ಜಾರಿಕೊಳ್ಳಲು, ಶತಧನ್ವನು ಸಹಾಯಕ್ಕಾಗಿ ಅಕ್ರೂರನನ್ನು ಪ್ರಾರ್ಥಿಸಿದನು. ಅವನೆಂದನು – ಅಯ್ಯಾ ! ಸರ್ವಶಕ್ತನಾದ ಭಗವಂತನ ಬಲ-ಪರಾಕ್ರಮಗಳನ್ನು ತಿಳಿದು ತಿಳಿದು ಅವನೊಂದಿಗೆ ಯಾರು ತಾನೇ ವೈರವನ್ನು ಕಟ್ಟಿಕೊಳ್ಳುವನು ? ಭಗವಂತನೇ ಲೀಲಾವಿನೋದಕ್ಕಾಗಿಯೇ ಈ ವಿಶ್ವವನ್ನು ರಚಿಸಿ, ರಕ್ಷಿಸಿ, ಸಂಹರಿಸುತ್ತಾನೆ. ಅವನು ಎಂದು ಏನನ್ನು ಮಾಡಬಯಸುವನೋ ಇದನ್ನು ಮಾಯೆಯಿಂದ ಮೋಹಿತರಾದ ಬ್ರಹ್ಮಾದಿಗಳೂ ತಿಳಿಯಲಾರರು. ಇವನು ಬಾಲಕನಾಗಿದ್ದಾಗ ಏಳನೇ ವಯಸ್ಸಿನಲ್ಲೇ ಒಂದೇ ಕೈಯಿಂದ ಗೋವರ್ಧನವನ್ನು ಕಿತ್ತು ಮಗುವೊಂದು ನಾಯಿಕೊಡೆಯನ್ನು ಮೇಲೆತ್ತಿಹಿಡಿಯುವಂತೆ, ಲೀಲಾಜಾಲವಾಗಿ ಏಳು ದಿವಸಗಳ ತನಕ ಎತ್ತಿಹಿಡಿದಿದ್ದನು. ಅದ್ಭುತಕರ್ಮಿಯಾದ ಭಗವಾನ್ ಶ್ರೀಕೃಷ್ಣನಿಗೆ ನಾನಾದರೋ ನಮಸ್ಕಾರ ಮಾಡುತ್ತೇನೆ. ಅವನು ಅನಂತನೂ, ಅನಾದಿಯೂ, ಕೂಟಸ್ಥನೂ, ಆತ್ಮಸ್ವರೂಪನೂ ಆಗಿರುವನು. ಅಂತಹವನಿಗೆ ನಾನು ನಮಸ್ಕರಿಸುತ್ತೇನೆ. ॥ ೧೪-೧೭ ॥ ಹೀಗೆ ಶತಧನ್ವನು ಅಕ್ರೂರನಿಂದಲೂ ತಿರಸ್ಕರಿಸಲ್ಪಟ್ಟವನಾಗಿ ತನ್ನಲ್ಲಿದ್ದ ಮಣಿಯನ್ನು ಅಕ್ರೂರನಲ್ಲಿಯೇ ನ್ಯಾಸವಾಗಿಟ್ಟು ದಿನಕ್ಕೆ ನೂರು ಯೋಜನೆಗಳಷ್ಟು ಪ್ರಯಾಣಮಾಡುವಂತಹ ಕುದುರೆಯನ್ನೇರಿ ಅಲ್ಲಿಂದ ಹೊರಟುಬಿಟ್ಟನು. ॥ ೧೮ ॥ ಪರೀಕ್ಷಿತನೇ! ಭಗವಾನ್ ಶ್ರೀಕೃಷ್ಣ-ಬಲರಾಮರು ಶತಧನ್ವನು ದ್ವಾರಕೆಯಿಂದ ಹೊರಟುಹೋದ ವಾರ್ತೆಯನ್ನು ಕೇಳಿ ಗರುಡ ಧ್ವಜವಿರುವ ಹಾಗೂ ಮಹಾವೇಗವಾಗಿ ಚಲಿಸುವ ಕುದುರೆಗಳನ್ನು ಹೂಡಿದ ರಥದಲ್ಲಿ ಕುಳಿತುಕೊಂಡು ಅವರು ತಮ್ಮ ಮಾವನನ್ನು ಕೊಂದಿರುವ ಶತಧನ್ವನನ್ನು ಬೆನ್ನಟ್ಟಿದರು. ॥ ೧೯ ॥

ಮಿಥಿಲಾಯಾಮುಪವನೇ ವಿಸೃಜ್ಯ ಪತಿತಂ ಹಯಮ್ ।
ಪದ್ಭ್ಯಾಮಧಾವತ್ ಸಂತ್ರಸ್ತಃ ಕೃಷ್ಣೋಽಪ್ಯನ್ವದ್ರವದ್ರುಷಾ ॥ ೨೦ ॥

ಪದಾತೇರ್ಭಗವಾಂಸ್ತಸ್ಯ ಪದಾತಿಸ್ತಿಗ್ಮನೇಮಿನಾ ।
ಚಕ್ರೇಣ ಶಿರ ಉತ್ಕೃತ್ಯ ವಾಸಸೋರ್ವ್ಯಚಿನೋನ್ಮಣಿಮ್ ॥ ೨೧ ॥

ಅಲಬ್ಧಮಣಿರಾಗತ್ಯ ಕೃಷ್ಣ ಆಹಾಗ್ರಜಾಂತಿಕಮ್ ।
ವೃಥಾ ಹತಃ ಶತಧನುರ್ಮಣಿಸ್ತತ್ರ ನ ವಿದ್ಯತೇ ॥ ೨೨ ॥

ತತ ಆಹ ಬಲೋ ನೂನಂ ಸ ಮಣಿಃ ಶತಧನ್ವನಾ ।
ಕಸ್ಮಿಂಶ್ಚಿತ್ ಪುರುಷೇ ನ್ಯಸ್ತಸ್ತಮನ್ವೇಷ ಪುರಂ ವ್ರಜ ॥ ೨೩ ॥

ಅಹಂ ವಿದೇಹಮಿಚ್ಛಾಮಿ ದ್ರಷ್ಟುಂ ಪ್ರಿಯತಮಂ ಮಮ ।
ಇತ್ಯುಕ್ತ್ವಾ ಮಿಥಿಲಾಂ ರಾಜನ್ ವಿವೇಶ ಯದುನಂದನಃ ॥ ೨೪ ॥

ತಂ ದೃಷ್ಟ್ವಾ ಸಹಸೋತ್ಥಾಯ ಮೈಥಿಲಃ ಪ್ರೀತಮಾನಸಃ ।
ಅರ್ಹಯಾಮಾಸ ವಿಧಿವದರ್ಹಣೀಯಂ ಸಮರ್ಹಣೈಃ ॥ ೨೫ ॥

ಉವಾಸ ತಸ್ಯಾಂ ಕತಿಚಿನ್ಮಿಥಿಲಾಯಾಂ ಸಮಾ ವಿಭುಃ ।
ಮಾನಿತಃ ಪ್ರೀತಿಯುಕ್ತೇನ ಜನಕೇನ ಮಹಾತ್ಮನಾ ।
ತತೋಽಶಿಕ್ಷದ್ಗದಾಂ ಕಾಲೇ ಧಾರ್ತರಾಷ್ಟ್ರಃ ಸುಯೋಧನಃ ॥ ೨೬ ॥

ಕೇಶವೋ ದ್ವಾರಕಾಮೇತ್ಯ ನಿಧನಂ ಶತಧನ್ವನಃ ।
ಅಪ್ರಾಪ್ತಿಂ ಚ ಮಣೇಃ ಪ್ರಾಹ ಪ್ರಿಯಾಯಾಃ ಪ್ರಿಯಕೃದ್ವಿಭುಃ ॥ ೨೭ ॥

ತತಃ ಸ ಕಾರಯಾಮಾಸ ಕ್ರಿಯಾ ಬಂಧೋರ್ಹತಸ್ಯ ವೈ ।
ಸಾಕಂ ಸುಹೃದ್ಭಿರ್ಭಗವಾನ್ ಯಾ ಯಾಃ ಸ್ಯುಃ ಸಾಂಪರಾಯಿಕಾಃ ॥ ೨೮ ॥

ಅಕ್ರೂರಃ ಕೃತವರ್ಮಾ ಚ ಶ್ರುತ್ವಾ ಶತಧನೋರ್ವಧಮ್ ।
ವ್ಯೂಷತುರ್ಭಯವಿತ್ರಸ್ತೌ ದ್ವಾರಕಾಯಾಃ ಪ್ರಯೋಜಕೌ ॥ ೨೯ ॥

ಅಕ್ರೂರೇ ಪ್ರೋಷಿತೇಽರಿಷ್ಟಾನ್ಯಾಸನ್ ವೈ ದ್ವಾರಕೌಕಸಾಮ್ ।
ಶಾರೀರಾ ಮಾನಸಾಸ್ತಾಪಾ ಮುಹುರ್ದೈವಿಕಭೌತಿಕಾಃ ॥ ೩೦ ॥

ಮಿಥಿಲಾಪಟ್ಟಣದ ಉಪವನವೊಂದರಲ್ಲಿ ಶತಧನ್ವನ ಕುದುರೆಯು ಬಿದ್ದು ಹೋಯಿತು. ಆಗ ಅವನು ಅದನ್ನು ಬಿಟ್ಟು ಅಲ್ಲೇ ಬಹಳವಾಗಿ ಭಯಗೊಂಡು ಓಡಲಾರಂಭಿಸಿದನು. ಭಗವಾನ್ ಶ್ರೀಕೃಷ್ಣನೂ ಕ್ರುದ್ಧವಾಗಿ ಅವನನ್ನು ಹಿಂಬಾಲಿಸಿದನು. ॥ ೨೦ ॥ ಶತಧನ್ವನು ಪದಾತಿಯಾಗಿಯೇ ಓಡುತ್ತಿದ್ದುದರಿಂದ ಭಗವಂತನು ಹಾಗೆಯೇ ರಥವನ್ನು ಬಿಟ್ಟು ಪದಾತಿಯಾಗಿಯೇ ಓಡಿ ಹೋಗಿ ಹರಿತವಾದ ತನ್ನ ಸುದರ್ಶನದಿಂದ ಅವನ ತಲೆಯನ್ನು ತರಿದು ಅವನು ಉಟ್ಟಿದ್ದ ಬಟ್ಟೆಯಲ್ಲಿ ಸ್ಯಮಂತಕ ಮಣಿಯನ್ನು ಹುಡುಕಿದನು. ॥ ೨೧ ॥ ಆದರೆ ಮಣಿಯು ಸಿಗದಿದ್ದಾಗ ಶ್ರೀಕೃಷ್ಣನು ಅಣ್ಣನಾದ ಬಲರಾಮನ ಬಳಿಗೆ ಬಂದು - ಶತಧನ್ವನನ್ನು ವ್ಯರ್ಥವಾಗಿ ಕೊಂದಂತಾಯಿತು. ಏಕೆಂದರೆ, ಅವನ ಬಳಿಯಲ್ಲಿ ಸ್ಯಮಂತಕ ಮಣಿಯು ಇರಲೇ ಇಲ್ಲ ಎಂದು ಹೇಳಿದನು. ॥ ೨೨ ॥ ಬಲರಾಮನು ಹೇಳಿದನು - ಕೃಷ್ಣ! ಶತಧನ್ವನು ಸ್ಯಮಂತಕ ಮಣಿಯನ್ನು ಬೇರೆ ಯಾರಲ್ಲಾದರೂ ಇಟ್ಟಿರಬೇಕು. ನೀನು ದ್ವಾರಕೆಗೆ ಹೋಗಿ ಅದು ಯಾರಲ್ಲಿದೆ ಎಂಬುದನ್ನು ತಿಳಿದುಕೋ. ॥ ೨೩ ॥ ನನ್ನ ಪ್ರಿಯಮಿತ್ರನಾದ ವಿದೇಹರಾಜನನ್ನು ಕಾಣಲು ನಾನು ಬಯಸುತ್ತೇನೆ. ಪರೀಕ್ಷಿತನೇ! ಹೀಗೆ ಹೇಳಿ ಯದುವಂಶ ಶಿರೋಮಣಿಯಾದ ಬಲರಾಮನು ಮಿಥಿಲಾ ನಗರಕ್ಕೆ ಹೋದನು. ॥ ೨೪ ॥ ಪರಮಪೂಜನೀಯನಾದ ಬಲರಾಮನು ಆಗಮಿಸಿರುವನೆಂದು ತಿಳಿದ ಮಿಥಿಲಾ ನರೇಶನ ಹೃದಯವು ಆನಂದದಿಂದ ತುಂಬಿಹೋಯಿತು. ಅವನು ಲಗುಬಗೆಯಿಂದ ಆಸನದಿಂದ ಎದ್ದು ಅನೇಕ ಪೂಜಾಸಾಮಗ್ರಿಗಳಿಂದ ಬಲರಾಮನನ್ನು ಪೂಜಿಸಿದನು. ॥ ೨೫ ॥ ಇದಾದ ಬಳಿಕ ಭಗವಾನ್ ಬಲರಾಮನು ಕೆಲವು ವರ್ಷಗಳವರೆಗೆ ಮಿಥಿಲೆಯಲ್ಲೇ ಇದ್ದುಬಿಟ್ಟನು. ಮಹಾತ್ಮಾ ಜನಕನು ಅತ್ಯಂತ ಪ್ರೇಮಾದರಗಳಿಂದ ಅವನನ್ನು ಇರಿಸಿಕೊಂಡನು. ಅದೇ ಸಮಯದಲ್ಲಿ ಧೃತರಾಷ್ಟ್ರನ ಮಗನಾದ ದುರ್ಯೋಧನನು ಮಿಥಿಲೆಗೆ ಬಂದು ಬಲರಾಮನಿಂದ ಗದಾಯುದ್ಧವನ್ನು ಕಲಿತುಕೊಂಡನು. ॥ ೨೬ ॥ ಇತ್ತ ಪ್ರಿಯೆಯಾದ ಸತ್ಯಭಾಮೆಯ ಪ್ರಿಯಕಾರ್ಯವನ್ನು ಮಾಡಿ ಭಗವಾನ್ ಶ್ರೀಕೃಷ್ಣನು ದ್ವಾರಕೆಗೆ ಮರಳಿ ಬಂದು ಆಕೆಯ ಬಳಿ ಶತಧನ್ವನನ್ನು ಕೊಂದುಹಾಕಿದರೂ ಸ್ಯಮಂತಕಮಣಿಯು ಅವನ ಬಳಿ ದೊರಕಲಿಲ್ಲವೆಂದು ತಿಳಿಸಿದನು. ॥ ೨೭ ॥ ಅನಂತರ ಶ್ರೀಕೃಷ್ಣನು ಮಾವನಾದ ಸತ್ರಾಜಿತನಿಗೆ ಪರಲೋಕಸಾಧನವಾದ ಔರ್ಧ್ವದೇಹಿಕಕ್ರಿಯೆಗಳನ್ನು ಸುಹೃದರೊಡನೆ ಸೇರಿ ಮಾಡಿದನು.॥ ೨೮ ॥

ಸತ್ರಾಜಿತನನ್ನು ಕೊಲ್ಲಲು ಶತಧನ್ವನನ್ನು ಅಕ್ರೂರ ಮತ್ತು ಕೃತವರ್ಮರೇ ಪ್ರೇರೇಪಿಸಿದ್ದರು. ಭಗವಾನ್ ಶ್ರೀಕೃಷ್ಣನು ಶತಧನ್ವನನ್ನು ಕೊಂದಿರುವ ವಾರ್ತೆಯನ್ನು ಕೇಳಿದಾಗ ಅವರು ಬಹಳವಾಗಿ ಭಯಗೊಂಡು ದ್ವಾರಕೆಯಿಂದ ಓಡಿಹೋದರು. ॥ ೨೯ ॥ ಪರೀಕ್ಷಿತನೇ! ಅಕ್ರೂರನು ದ್ವಾರಕೆಯಿಂದ ಹೊರಟು ಹೋದ ಬಳಿಕ ದ್ವಾರಕಾನಿವಾಸಿಗಳಿಗೆ ಅನೇಕ ವಿಧವಾದ ಅನಿಷ್ಟಗಳನ್ನು, ಅರಿಷ್ಟಗಳನ್ನು ಇದಿರಿಸಬೇಕಾಯಿತು ಎಂದು ಕೆಲವರು ಭಾವಿಸಿದರು. ಇವರೆಲ್ಲರೂ ಹಿಂದೆ ನಡೆದ ಶ್ರೀಕೃಷ್ಣನ ಮಹಾತ್ಮ್ಯ-ಮಹಿಮೆಯನ್ನು ಮರೆತೇ ಬಿಟ್ಟಿದ್ದರು. ಮಹರ್ಷಿಗಳ ಮನೋವೃತ್ತಿಗೆ

ಇತ್ಯಂಗೋಪದಿಶಂತ್ಯೇಕೇ ವಿಸ್ಮೃತ್ಯ ಪ್ರಾಗುದಾಹೃತಮ್ ।
ಮುನಿವಾಸನಿವಾಸೇ ಕಿಂ ಘಟೇತಾರಿಷ್ಟದರ್ಶನಮ್
॥ ೩೧ ॥

ದೇವೇಽವರ್ಷತಿ ಕಾಶೀಶಃ ಶ್ವಫಲ್ಕಾಯಾಗತಾಯ ವೈ ।
ಸ್ವಸುತಾಂ ಗಾಂದಿನೀಂ ಪ್ರಾದಾತ್ತತೋಽವರ್ಷತ್ಸ್ಮ ಕಾಶಿಷು
॥ ೩೨ ॥

ತತ್ಸುತಸ್ತತ್ಪ್ರಭಾವೋಽಸಾವಕ್ರೂರೋ ಯತ್ರ ಯತ್ರ ಹ ।
ದೇವೋಽಭಿವರ್ಷತೇ ತತ್ರ ನೋಪತಾಪಾ ನ ಮಾರಿಕಾಃ
॥ ೩೩ ॥

ಇತಿ ವೃದ್ಧವಚಃ ಶ್ರುತ್ವಾ ನೈತಾವದಿಹ ಕಾರಣಮ್ ।
ಇತಿ ಮತ್ವಾ ಸಮಾನಾಯ್ಯ ಪ್ರಾಹಾಕ್ರೂರಂ ಜನಾರ್ದನಃ
॥ ೩೪ ॥

ಪೂಜಯಿತ್ವಾಭಿಭಾಷ್ಯೈನಂ ಕಥಯಿತ್ವಾ ಪ್ರಿಯಾಃ ಕಥಾಃ ।
ವಿಜ್ಞಾತಾಖಿಲಚಿತ್ತಜ್ಞಃ ಸ್ಮಯಮಾನ ಉವಾಚ ಹ
॥ ೩೫ ॥

ನನು ದಾನಪತೇ ನ್ಯಸ್ತಸ್ತ್ವಯ್ಯಾಸ್ತೇ ಶತಧನ್ವನಾ ।
ಸ್ಯಮಂತಕೋ ಮಣಿಃ ಶ್ರೀಮಾನ್ ವಿದಿತಃ ಪೂರ್ವಮೇವ ನಃ
॥ ೩೬ ॥

ಸತ್ರಾಜಿತೋಽನಪತ್ಯತ್ವಾದ್ಗೃಹ್ಣೀಯುರ್ದುಹಿತುಃ ಸುತಾಃ ।
ದಾಯಂ ನಿನೀಯಾಪಃ ಪಿಂಡಾನ್ವಿಮುಚ್ಯರ್ಣಂ ಚ ಶೇಷಿತಮ್
॥ ೩೭ ॥

ತಥಾಪಿ ದುರ್ಧರಸ್ತ್ವನ್ಯೈಸ್ತ್ವಯ್ಯಾಸ್ತಾಂ ಸುವ್ರತೇ ಮಣಿಃ ।
ಕಿಂತು ಮಾಮಗ್ರಜಃ ಸಮ್ಯಙ್ನಪ್ರತ್ಯೇತಿ ಮಣಿಂ ಪ್ರತಿ
॥ ೩೮ ॥

ದರ್ಶಯಸ್ವ ಮಹಾಭಾಗ ಬಂಧೂನಾಂ ಶಾಂತಿಮಾವಹ ।
ಅವ್ಯುಚ್ಛಿನ್ನಾ ಮಖಾಸ್ತೇಽದ್ಯ ವರ್ತಂತೇ ರುಕ್ಮವೇದಯಃ
॥ ೩೯ ॥

ನೆಲೆಯೆನಿಸಿರುವ ಭಗವಂತನಿಗೆ ನಿವಾಸಸ್ಥಾನವಾದ ದ್ವಾರಕೆಯಲ್ಲಿ ಅನಿಷ್ಟಗಳು ಹೇಗೆ ತಾನೆ ಉಂಟಾಗಬಲ್ಲವು? ಎಂದು ಮತ್ತೆ ಕೆಲವರು ಹೇಳತೊಡಗಿದರು. ॥ ೩೦-೩೧ ॥ "ಒಮ್ಮೆ ಕಾಶೀರಾಜ್ಯದಲ್ಲಿ ಮಳೆಯೇ ಇಲ್ಲದೆ ಕ್ಷಾಮ ತಲೆದೋರಿತ್ತಂತೆ. ಆ ಸಮಯದಲ್ಲಿ ಕಾಶೀರಾಜರು ತನ್ನ ರಾಜ್ಯಕ್ಕೆ ಬಂದಿರುವ ಅಕ್ರೂರನ ತಂದೆಯಾದ ಶ್ವಫಲ್ಕನಿಗೆ ತನ್ನ ಮಗಳಾದ ಗಾಂದಿನಿಯನ್ನು ಕೊಟ್ಟು ಮದುವೆಮಾಡಿದೊಡನೆಯೇ ಮಳೆಯಾಯಿತಂತೆ. ಶ್ವಫಲ್ಕನ ಮಗನಾದ ಅಕ್ರೂರನಲ್ಲಿಯೂ ಇಂತಹುದೇ ಮಹಿಮೆಯಿರುವುದಂತೆ. ಅವನೆಲ್ಲಿಗೆ ಹೋದರೂ ಅಲ್ಲಿ ಮಳೆ-ಬೆಳೆಗಳು ಸಮೃದ್ಧವಾಗಿ, ಯಾವುದೇ ವಿಧವಾದ ಕಷ್ಟವಾಗಲೀ, ಮಹಾಮಾರಿಯೇ ಮುಂತಾದ ಉಪದ್ರವಗಳಾಗಲೀ ಇರುವುದಿಲ್ಲವಂತೆ.' ಹೀಗೆ ಕೆಲವು ಹಿರಿಯರು ಮಾತನಾಡಿಕೊಳ್ಳುತ್ತಿದ್ದರು. ಪರೀಕ್ಷಿತನೇ! ಅವರ ಮಾತನ್ನು ಕೇಳಿದ ಭಗವಂತನು – ಈಗ ತಲೆದೋರಿದ ಉಪದ್ರವಗಳಿಗೆ ಈ ಕಾರಣವಿರಲಾರದು ಎಂದು ಯೋಚಿಸಿ ಶ್ರೀಕೃಷ್ಣನು ದೂತನನ್ನು ಕಳುಹಿಸಿ ಅಕ್ರೂರನನ್ನು ಹುಡುಕಿಸಿ, ಕರೆತಂದು ಅವನೊಡನೆ ಮಾತಾನಾಡಿದನು. ॥ ೩೨-೩೪ ॥ ಭಗವಂತನು ಅವನನ್ನು ಬಹಳವಾಗಿ ಸ್ವಾಗತ-ಸತ್ಕಾರಮಾಡಿ, ಸವಿಮಾತುಗಳನ್ನಾಡಿದನು. ಪರೀಕ್ಷಿತನೇ! ಎಲ್ಲರ ಮನಸ್ಸಿನ ಪ್ರತಿಯೊಂದು ಸಂಕಲ್ಪವನ್ನು ಬಲ್ಲವನಾದ ಶ್ರೀಕೃಷ್ಣನು ಮುಗುಳುನಗುತ್ತಾ ಅಕ್ರೂರನಿಗೆ ಹೇಳಿದನು. ॥ ೩೫ ॥ ದಾನಪತಿಯಾದ ಚಿಕ್ಕಪ್ಪನೇ! ಶತಧನ್ವನು ಪ್ರಕಾಶಮಾನವಾದ ಮತ್ತು ಸಂಪತ್ತನ್ನು ಕೊಡುವ ಸ್ಯಮಂತಕಮಣಿಯನ್ನು ನಿನ್ನಲ್ಲಿ ನ್ಯಾಸವಾಗಿ ಇಟ್ಟಿರುವನೆಂಬುದು ನನಗೆ ಮೊದಲೇ ತಿಳಿದಿತ್ತು. ॥ ೩೬ ॥ ಸತ್ರಾಜಿತನಿಗೆ ಗಂಡು ಮಕ್ಕಳಿಲ್ಲದುದು ನೀನು ತಿಳಿದೇ ಇರುವೆ. ಅದಕ್ಕಾಗಿ ಅವನ ಮಗಳ ಮಕ್ಕಳು ಅವನಿಗೆ ಮಾಡಬೇಕಾದ ಪಿಂಡಪ್ರದಾನ, ತಿಲಾಂಜಲಿಯೇ ಮೊದಲಾದ ಕರ್ಮಾಂತರಗಳನ್ನು ಮಾಡಿರುವರು. ಅವನ ಋಣವನ್ನು ತೀರಿಸಿರುವರು. ಆದ್ದರಿಂದ ಅವನಲ್ಲಿರ ಬಹುದಾದ ಆಸ್ತಿಗೆ ಅವರೇ ಹಕ್ಕುದಾರರಾಗುತ್ತಾರೆ. ॥ ೩೭ ॥ ಹೀಗೆ ಶಾಸ್ತ್ರ ಸಂಪ್ರದಾಯದಂತೆ ಆ ಸ್ಯಮಂತಕ ಮಣಿಯು ನನ್ನ ಪುತ್ರರಿಗೆ ಲಭಿಸಬೇಕಾಗಿದೆ. ಆದರೆ ಆ ದಿವ್ಯಮಣಿಯು ನಿನ್ನಲ್ಲಿಯೇ ಇರಲಿ. ಏಕೆಂದರೆ, ನೀನು ವ್ರತನಿಷ್ಠನೂ, ಪವಿತ್ರಾತ್ಮನೂ ಆಗಿರುವೆ. ಇತರರಿಗೆ ಆ ಮಣಿಯನ್ನು ಇರಿಸಿಕೊಳ್ಳುವುದು ಕಷ್ಟವೇ ಸರಿ. ಆದರೆ ನಮ್ಮಣ್ಣ ಬಲರಾಮನು ಮಣಿಯ ವಿಷಯದಲ್ಲಿ ನನ್ನ ಮಾತಿನಲ್ಲಿ ವಿಶ್ವಾಸವಿಡುವುದಿಲ್ಲ. ಇದೇ ನಮ್ಮ ಮುಂದೆ ಬಂದಿರುವ ದೊಡ್ಡ ಸಮಸ್ಯೆಯಾಗಿದೆ. ॥ ೩೮ ॥ ಆದ್ದರಿಂದ ಭಾಗ್ಯಶಾಲಿಯಾದ ಅಕ್ರೂರನೇ! ನೀನು ಆ ಮಣಿಯನ್ನು ತೋರಿಸಿ ನಮ್ಮ ಇಷ್ಟ-ಮಿತ್ರರ, ಬಲರಾಮನ, ಸತ್ಯಭಾಮೆಯ ಮತ್ತು ಜಾಂಬವತಿಯ ಸಂದೇಹವನ್ನು ದೂರಗೊಳಿಸು ಹಾಗೂ ಅವರ ಹೃದಯಕ್ಕೆ, ಶಾಂತಿಯನ್ನು ನೀಡು. ಆ ಮಣಿಯ ಪ್ರಭಾವದಿಂದಲೇ ಇತ್ತೀಚೆಗೆ ನೀನು ಸ್ವರ್ಣವೇದಿಗಳಿಂದೊಡಗೂಡಿದ ಮಹಾಯಜ್ಞಗಳನ್ನು ನಿರಂತರವಾಗಿ ಮಾಡುತ್ತಿರುವೆ ಎಂಬುದೂ ನನಗೆ ತಿಳಿದಿದೆ. ॥ ೩೯ ॥

ಏವಂ ಸಾಮಭಿರಾಲಬ್ಧಃ ಶ್ವಫಲ್ಕತನಯೋ ಮಣಿಮ್ ।
ಆದಾಯ ವಾಸಸಾಚ್ಛನ್ನಂ ದದೌ ಸೂರ್ಯಸಮಪ್ರಭಮ್
॥ ೪೦ ॥

ಪರೀಕ್ಷಿತನೇ! ಭಗವಾನ್ ಶ್ರೀಕೃಷ್ಣನು ಹೇಳಿದ ಈ ಪ್ರಕಾರದ ಸಾಂತ್ವನದ ಮಾತುಗಳಿಂದ ಪ್ರೇರಿತನಾದ ಅಕ್ರೂರನು ವಸ್ತ್ರದಲ್ಲಿ ಸುತ್ತಿಟ್ಟ ಸ್ಯಮಂತಕಮಣಿಯನ್ನು ಹೊರ ತೆಗೆದು ಭಗವಂತನಿಗೆ ಅರ್ಪಿಸಿಬಿಟ್ಟನು. ॥ ೪೦ ॥

ಸ್ಯಮಂತಕಂ ದರ್ಶಯಿತ್ವಾ ಜ್ಞಾತಿಭ್ಯೋ ರಜ ಆತ್ಮನಃ ।
ವಿಮೃಜ್ಯ ಮಣಿನಾ ಭೂಯಸ್ತಸ್ಮೈ ಪ್ರತ್ಯರ್ಪಯತ್ ಪ್ರಭುಃ
॥ ೪೧ ॥

ಭಗವಾನ್ ಶ್ರೀಕೃಷ್ಣನು ಆ ಸ್ಯಮಂತಕ ಮಣಿಯನ್ನು ತನ್ನ ಜ್ಞಾತಿಬಾಂಧವರೆಲ್ಲರಿಗೂ ತೋರಿಸಿ ತನಗೆ ಬಂದ ಅಪವಾದವನ್ನು ಕಳೆದುಕೊಂಡನು. ಅದನ್ನು ಇಟ್ಟುಕೊಳ್ಳಲು ತಾನು ಸಮರ್ಥನಾಗಿದ್ದರೂ ಪುನಃ ಅಕ್ರೂರನಿಗೆ ಆ ಮಣಿಯನ್ನು ಕೊಟ್ಟನು. ॥ ೪೧ ॥

ಯಸ್ತ್ವೇತದ್ಭಗವತ ಈಶ್ವರಸ್ಯ ವಿಷ್ಣೋ-
ರ್ವೀರ್ಯಾಢ್ಯಂ ವೃಜಿನಹರಂ ಸುಮಂಗಲಂ ಚ ।
ಆಖ್ಯಾನಂ ಪಠತಿ ಶೃಣೋತ್ಯನುಸ್ಮರೇದ್ವಾ
ದುಷ್ಕೀರ್ತಿಂ ದುರಿತಮಪೋಹ್ಯ ಯಾತಿ ಶಾಂತಿಮ್ ॥ ೪೨ ॥

ಸರ್ವಶಕ್ತನಾದ, ಸರ್ವವ್ಯಾಪಕನಾದ ಭಗವಾನ್ ಶ್ರೀಕೃಷ್ಣನ ಪರಾಕ್ರಮಗಳಿಂದ ಕೂಡಿದ ಮಂಗಲಮಯವಾದ ಈ ಆಖ್ಯಾನವು ಸಮಸ್ತ ಪಾಪಗಳನ್ನೂ, ಅಪವಾದಗಳನ್ನೂ, ಕಳಂಕಗಳನ್ನೂ ತೊಡೆದು ಹಾಕುತ್ತದೆ. ಇದನ್ನು ಪಠಿಸುವವನು, ಶ್ರವಣಿಸುವವನು, ಅಥವಾ ಸ್ಮರಿಸುವವನೂ ಎಲ್ಲ ವಿಧವಾದ ದುಷ್ಕೀರ್ತಿಗಳಿಂದ, ಪಾಪಗಳಿಂದ ಬಿಡುಗಡೆಹೊಂದಿ ಪರಮ ಶಾಂತಿಯನ್ನು ಹೊಂದುತ್ತಾನೆ. ॥ ೪೨ ॥

*ಐವತ್ತೇಳನೆಯ ಅಧ್ಯಾಯವು ಮುಗಿಯಿತು. ॥ ೫೭ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಉತ್ತರಾರ್ಧೇ
ಸ್ಯಮಂತಕೋಪಾಖ್ಯಾನೇ ಸಪ್ತಪಂಚಾಶತ್ತಮೋಽಧ್ಯಾಯಃ ॥ ೫೭ ॥

# ಐವತ್ತೆಂಟನೆಯ ಅಧ್ಯಾಯ

## ಶ್ರೀಕೃಷ್ಣನ ಇತರ ವಿವಾಹ ಮಹೋತ್ಸವಗಳು

*ಶ್ರೀಶುಕ ಉವಾಚ*

ಏಕದಾ ಪಾಂಡವಾನ್ ದ್ರಷ್ಟುಂ ಪ್ರತೀತಾನ್ ಪುರುಷೋತ್ತಮಃ ।
ಇಂದ್ರಪ್ರಸ್ಥಂ ಗತಃ ಶ್ರೀಮಾನ್ ಯುಯುಧಾನಾದಿಭಿರ್ವೃತಃ
॥ ೧ ॥

ಶ್ರೀಶುಕಮಹಾಮುನಿಗಳು ಹೇಳುತ್ತಾರೆ - ಪರೀಕ್ಷಿತನೇ! ಪಾಂಡವರು ಲಾಕ್ಷಾಗೃಹದಲ್ಲಿ ಸುಟ್ಟುಹೋಗದೆ ಜೀವಂತವಾಗಿ ರುವರೆಂಬುದು ಈಗ ತಿಳಿದಿತ್ತು. ಒಂದು ದಿನ ಭಗವಾನ್ ಶ್ರೀಕೃಷ್ಣನು ಅವರನ್ನು ಭೆಟ್ಟಿಯಾಗಲು ಸಾತ್ಯಕಿಯೇ ಮೊದಲಾದ ಸುಹೃದರೊಡನೆ ಇಂದ್ರಪ್ರಸ್ಥಕ್ಕೆ ಪ್ರಯಾಣಮಾಡಿದನು. ॥ ೧ ॥

ದೃಷ್ಟ್ವಾ ತಮಾಗತಂ ಪಾರ್ಥಾ ಮುಕುಂದಮಖಿಲೇಶ್ವರಮ್ ।
ಉತ್ತಸ್ಥುರ್ಯುಗಪದ್ವೀರಾಃ ಪ್ರಾಣಾ ಮುಖ್ಯಮಿವಾಗತಮ್
॥ ೨ ॥

ಸರ್ವೇಶ್ವರನಾದ ಭಗವಾನ್ ಶ್ರೀಕೃಷ್ಣನು ದಯಮಾಡಿಸಿರುವನೆಂದು ನೋಡಿ ಪ್ರಾಣಸಂಚಾರವಾದೊಡನೆ ಇಂದ್ರಿಯಗಳೆಲ್ಲವೂ ಸಚೇತನವಾಗುವಂತೆಯೇ ವೀರವರರಾದ ಪಾಂಡವರೆಲ್ಲರೂ ಒಂದೇ ಬಾರಿಗೆ ಎದ್ದು ನಿಂತರು. ॥ ೨ ॥

ಪರಿಷ್ವಜ್ಯಾಚ್ಯುತಂ ವೀರಾ ಅಂಗಸಂಗಹತೈನಸಃ ।
ಸಾನುರಾಗಸ್ಮಿತಂ ವಕ್ತ್ರಂ ವೀಕ್ಷ್ಯ ತಸ್ಯ ಮುದಂ ಯಯುಃ
॥ ೩ ॥

ವೀರರಾದ ಪಾಂಡವರು ಭಗವಂತನಾದ ಶ್ರೀಕೃಷ್ಣನನ್ನು ಗಾಢವಾಗಿ ಆಲಿಂಗಿಸಿಕೊಂಡರು. ಪರಮಾತ್ಮನ ಅಂಗಸ್ಪರ್ಶದಿಂದ ಅವರ ಪಾಪಗಳೆಲ್ಲವೂ ಪರಿಹಾರವಾದುವು. ಭಗವಂತನ ಪ್ರೀತಿಯ ಮಂದಹಾಸದಿಂದ ಕೂಡಿದ ಮುಖಾರವಿಂದವನ್ನು ನೋಡಿ ಅವರೆಲ್ಲರೂ ಆನಂದ ತುಂದಿಲರಾದರು. ॥ ೩ ॥

ಯುಧಿಷ್ಠಿರಸ್ಯ ಭೀಮಸ್ಯ ಕೃತ್ವಾ ಪಾದಾಭಿವಂದನಮ್ ।
ಫಾಲ್ಗುನಂ ಪರಿರಭ್ಯಾಥ ಯಮಾಭ್ಯಾಂ ಚಾಭಿವಂದಿತಃ
॥ ೪ ॥

ಭಗವಾನ್ ಶ್ರೀಕೃಷ್ಣನು ಯುಧಿಷ್ಠಿರನಿಗೆ ಮತ್ತು ಭೀಮಸೇನನಿಗೆ ಪಾದಾಭಿವಂದನೆಯನ್ನು ಮಾಡಿದನು. ಅರ್ಜುನನನ್ನು ಆಲಿಂಗಿಸಿಕೊಂಡನು. ನಕುಲ-ಸಹದೇವರು ಭಗವಂತನ ಪಾದಗಳಿಗೆರಗಿದರು. ॥ ೪ ॥

ಪರಮಾಸನ ಆಸೀನಂ ಕೃಷ್ಣಾ ಕೃಷ್ಣಮನಿಂದಿತಾ ।
ನವೋಢಾ ವ್ರೀಡಿತಾ ಕಿಂಚಿಚ್ಛನೈರೇತ್ಯಾಭ್ಯವಂದತ
॥ ೫ ॥

ತಥೈವ ಸಾತ್ಯಕಿಃ ಪಾರ್ಥೈಃ ಪೂಜಿತಶ್ಚಾಭಿವಂದಿತಃ ।
ನಿಷಸಾದಾಸನೇಽನ್ಯೇ ಚ ಪೂಜಿತಾಃ ಪರ್ಯುಪಾಸತ
॥ ೬ ॥

ಪೃಥಾಂ ಸಮಾಗತ್ಯ ಕೃತಾಭಿವಾದನ-
ಸ್ತಯಾತಿಹಾರ್ದಾರ್ದ್ರದೃಶಾಭಿರಂಭಿತಃ ।
ಆಪೃಷ್ಟವಾಂಸ್ತಾಂ ಕುಶಲಂ ಸಹಸ್ನುಷಾಂ
ಪಿತೃಷ್ವಸಾರಂ ಪರಿಪೃಷ್ಟಬಾಂಧವಃ ॥ ೭ ॥

ತಮಾಹ ಪ್ರೇಮವೈಕ್ಲವ್ಯರುದ್ಧಕಂಠಾಶ್ರುಲೋಚನಾ ।
ಸ್ಮರಂತೀ ತಾನ್ಬಹೂನ್ ಕ್ಲೇಶಾನ್ ಕ್ಲೇಶಾಪಾಯಾತ್ಮದರ್ಶನಮ್
॥ ೮ ॥

ತದೈವ ಕುಶಲಂ ನೋಽಭೂತ್ ಸನಾಥಾಸ್ತೇ ಕೃತಾ ವಯಮ್ ।
ಜ್ಞಾತೀನ್ನಃ ಸ್ಮರತಾ ಕೃಷ್ಣ ಭ್ರಾತಾ ಮೇ ಪ್ರೇಷಿತಸ್ತ್ವಯಾ
॥ ೯ ॥

ನ ತೇಽಸ್ತಿಸ್ವಪರಭ್ರಾಂತಿರ್ವಿಶ್ವಸ್ಯ ಸುಹೃದಾತ್ಮನಃ ।
ತಥಾಪಿ ಸ್ಮರತಾಂ ಶಶ್ವತ್ ಕ್ಲೇಶಾನ್ ಹಂಸಿ ಹೃದಿ ಸ್ಥಿತಃ
॥ ೧೦ ॥

ಯುಧಿಷ್ಠಿರ ಉವಾಚ

ಕಿಂ ನ ಆಚರಿತಂ ಶ್ರೇಯೋ
ನ ವೇದಾಹಮಧೀಶ್ವರ ।
ಯೋಗೇಶ್ವರಾಣಾಂ ದುರ್ದರ್ಶೋ
ಯನ್ನೋ ದೃಷ್ಟಃ ಕುಮೇಧಸಾಮ್ ॥ ೧೧ ॥

ಇತಿ ವೈ ವಾರ್ಷಿಕಾನ್ಮಾಸಾನ್ರಾಜ್ಞಾ ಸೋಽಭ್ಯರ್ಥಿತಃ ಸುಖಮ್ ।
ಜನಯನ್ ನಯನಾನಂದಮಿಂದ್ರಪ್ರಸ್ಥೌಕಸಾಂ ವಿಭುಃ
॥ ೧೨ ॥

ಭಗವಾನ್ ಶ್ರೀಕೃಷ್ಣನು ಶ್ರೇಷ್ಠಸಿಂಹಾಸನದಲ್ಲಿ ವಿರಾಜಮಾನನಾದಾಗ ಆಗ ತಾನೇ ಪಾಂಡವರನ್ನು ವಿವಾಹವಾಗಿದ್ದ ಪರಮ ಸುಂದರಿಯಾದ ಕೃಷ್ಣೆಯು ನಾಚಿಕೆಯಿಂದಾಗಿ ನಿಧಾನವಾಗಿ ನಡೆದುಕೊಂಡಬಂದು ಶ್ರೀಕೃಷ್ಣನಿಗೆ ನಮಸ್ಕರಿಸಿದಳು. ॥ ೫ ॥ ಪಾಂಡವರು ಶ್ರೀಕೃಷ್ಣನಂತೆಯೇ ವೀರ ಸಾತ್ಯಕಿಗೂ ಸ್ವಾಗತ-ಸತ್ಕಾರಗಳನ್ನು ಮಾಡಿ ಅಭಿನಂದಿಸಿ ಒಂದು ಆಸನದಲ್ಲಿ ಕುಳ್ಳಿರಿಸಿದರು. ಶ್ರೀಕೃಷ್ಣನೊಂದಿಗೆ ಬಂದಿರುವ ಇತರ ಯದುವಂಶೀಯರನ್ನೂ ಯಥಾಯೋಗ್ಯವಾಗಿ ಸತ್ಕರಿಸಿದರು. ಅವರೆಲ್ಲರೂ ಕೃಷ್ಣನ ಸುತ್ತಲೂ ಕುಳಿತುಕೊಂಡರು. ॥ ೬ ॥ ಬಳಿಕ ಶ್ರೀಕೃಷ್ಣನು ತನ್ನ ಸೋದರತ್ತೆಯಾದ ಕುಂತೀದೇವಿಯ ಬಳಿಗೆ ಹೋಗಿ ಅವಳ ಚರಣಗಳಲ್ಲಿ ನಮಸ್ಕರಿಸಿದನು. ಕುಂತಿಯೂ ಅತ್ಯಂತ ಸ್ನೇಹದಿಂದ ಕೃಷ್ಣನನ್ನು ಅಪ್ಪಿಕೊಂಡಳು. ಆಕೆಯ ಕಣ್ಣುಗಳಲ್ಲಿ ಆನಂದಾಶ್ರುಗಳು ಸುರಿಯುತ್ತಿರುವಂತೆ ಶ್ರೀಕೃಷ್ಣನಲ್ಲಿ ತನ್ನ ತವರಿನ ಬಂಧುಗಳ ಕ್ಷೇಮಸಮಾಚಾರವನ್ನು ಕೇಳಿದಳು. ಭಗವಂತನು ಯಥೋಚಿತವಾಗಿ ಉತ್ತರಿಸಿ ಕುಂತಿಯಲ್ಲಿ ಆಕೆಯ ಮತ್ತು ಸೊಸೆಯಾದ ದ್ರೌಪದಿಯ ಕುಶಲವನ್ನು ವಿಚಾರಿಸಿದನು. ॥ ೭ ॥ ಆ ಸಮಯದಲ್ಲಿ ಪ್ರೇಮವಿಹ್ವಲಳಾದ ಕುಂತಿಯ ಕಂಠವು ಉಮ್ಮಳಿಸಿ, ಕಣ್ಣುಗಳಿಂದ ಅಶ್ರುಗಳು ಹರಿಯುತ್ತಿದ್ದವು. ಭಗವಂತನು ಆಕೆಯಲ್ಲಿ ವಿಚಾರಿಸಿದಾಗ ಅವಳಿಗೆ ತನ್ನ ಹಿಂದಿನ ಅನಂತಕ್ಲೇಶಗಳು ನೆನಪಾದುವು. ಅವಳು ಸಾವರಿಸಿಕೊಂಡು-ದರ್ಶನಮಾತ್ರದಿಂದಲೇ ಸಮಸ್ತ ಕಷ್ಟಗಳನ್ನು ನಿವಾರಿಸುವ ಶ್ರೀಕೃಷ್ಣ ಪರಮಾತ್ಮನಲ್ಲಿ ಹೇಳತೊಡಗಿದಳು. ॥ ೮ ॥ ಶ್ರೀಕೃಷ್ಣಾ! ನೀನು ನಮ್ಮನ್ನು ತನ್ನವರೆಂದು, ತನ್ನ ಕುಟುಂಬದವರೆಂದು ಭಾವಿಸಿ ನಮ್ಮ ಯೋಗಕ್ಷೇಮವನ್ನು ವಿಚಾರಿಸಲು ನನ್ನ ಸೋದರನಾದ ಅಕ್ರೂರನನ್ನು ಕಳಿಸಿದಾಗಲೇ ನಮ್ಮ ಕಲ್ಯಾಣವಾಗಿ ಹೋಯಿತು. ನಮ್ಮಂತಹ ಅನಾಥರನ್ನು ನೀನು ಸನಾಥರನ್ನಾಗಿಸಿದೆ. ॥ ೯ ॥ ಸಮಸ್ತ ಜಗತ್ತಿನ ಪರಮಸುಹೃದನೂ, ಹಿತೈಷಿಯೂ, ಆತ್ಮಸ್ವರೂಪನೂ ಆಗಿರುವೆ ಎಂಬುದನ್ನು ನಾನು ಬಲ್ಲೆನು. ಇವನು ನನ್ನವನು, ಇವನು ಪರನು ಎಂಬ ಭ್ರಾಂತಿಯೂ ನಿನ್ನಲ್ಲಿಲ್ಲ. ಹೀಗಿದ್ದರೂ ಕೃಷ್ಣಾ! ಸದಾಕಾಲ ನಿನ್ನನ್ನು ಸ್ಮರಿಸುವವನ ಹೃದಯದಲ್ಲಿ ಬಂದು ನೀನು ನೆಲೆಸಿರುವೆ ಮತ್ತು ಅವನ ಕ್ಲೇಶ ಪರಂಪರೆಯನ್ನು ಎಂದೆಂದಿಗೂ ಇಲ್ಲವಾಗಿಸುವೆ. ॥ ೧೦ ॥

**ಯುಧಿಷ್ಠಿರನು ಹೇಳಿದನು** - ಸರ್ವೇಶ್ವರನಾದ ಶ್ರೀಕೃಷ್ಣ! ನಾವು ಪೂರ್ವಜನ್ಮದಲ್ಲಾಗಲೀ, ಈ ಜನ್ಮದಲ್ಲಾಗಲೀ ಯಾವ ಶ್ರೇಯಸ್ಕರ ಸಾಧನೆಯನ್ನು ಮಾಡಿರುವೆವೋ ನಮಗೆ ತಿಳಿಯದು. ನಿನ್ನ ದರ್ಶನವು ಮಹಾ-ಮಹಾ ಯೋಗೇಶ್ವರರಿಗೂ ದುರ್ಲಭವೆನಿಸಿರುವಾಗ ದುರ್ಬುದ್ಧಿಯವರಾದ ನಮಗೆ ಮನೆಯಲ್ಲಿ ಕುಳಿತಿರುವಾಗಲೇ ನಿನ್ನ ದರ್ಶನವಾಗುತ್ತಿದೆ. ॥ ೧೧ ॥ ಯುಧಿಷ್ಠಿರನು ಭಗವಂತನನ್ನು ಹೀಗೆ ಸ್ತುತಿಸುತ್ತಾ ಹಲವಾರು ದಿವಸಗಳಾದರೂ ಇಂದ್ರಪ್ರಸ್ಥದಲ್ಲೇ ಇರುವಂತೆ ಪ್ರಾರ್ಥಿಸಿಕೊಂಡನು. ಶ್ರೀಕೃಷ್ಣನು ಇದಕ್ಕೆ ಸಮ್ಮತಿಸಿ ಇಂದ್ರಪ್ರಸ್ಥದಲ್ಲಿನ ನರ-ನಾರಿಯರ ಕಣ್ಣುಗಳಿಗೆ ಆನಂದೋತ್ಸವವನ್ನು ಕಲ್ಪಿಸುತ್ತಾ ಮಳೆಗಾಲದ ನಾಲ್ಕು ತಿಂಗಳುಗಳನ್ನು ಅಲ್ಲಿಯೇ ಕಳೆದನು. ॥ ೧೨ ॥

ಏಕದಾ ರಥಮಾರುಹ್ಯ ವಿಜಯೋ ವಾನರಧ್ವಜಮ್ ।
ಗಾಂಡೀವಂ ಧನುರಾದಾಯ ತೂಣೌ ಚಾಕ್ಷಯಸಾಯಕೌ
॥ ೧೩ ॥

ಸಾಕಂ ಕೃಷ್ಣೇನ ಸನ್ನದ್ಧೋ ವಿಹರ್ತುಂ ವಿಪಿನಂ ಮಹತ್ ।
ಬಹುವ್ಯಾಲಮೃಗಾಕೀರ್ಣಂ ಪ್ರಾವಿಶತ್ ಪರವೀರಹಾ
॥ ೧೪ ॥

ತತ್ರಾವಿಧ್ಯಚ್ಛರೈರ್ವ್ಯಾಘ್ರಾನ್ಸೂಕರಾನ್ ಮಹಿಷಾನ್ರುರೂನ್ ।
ಶರಭಾನ್ಗವಯಾನ್ಖಡ್ಗಾನ್ ಹರಿಣಾಂಛಶಶಲ್ಲಕಾನ್
॥ ೧೫ ॥

ತಾನ್ನಿನ್ಯುಃ ಕಿಂಕರಾ ರಾಜ್ಞೇ ಮೇಧ್ಯಾನ್ಪರ್ವಣ್ಯುಪಾಗತೇ ।
ತೃಟ್ಪರೀತಃ ಪರಿಶ್ರಾಂತೋ ಬೀಭತ್ಸುರ್ಯಮುನಾಮಗಾತ್
॥ ೧೬ ॥

ತತ್ರೋಪಸ್ಪೃಶ್ಯ ವಿಶದಂ ಪೀತ್ವಾ ವಾರಿ ಮಹಾರಥೌ ।
ಕೃಷ್ಣೌ ದದೃಶತುಃ ಕನ್ಯಾಂ ಚರಂತೀಂ ಚಾರುದರ್ಶನಾಮ್
॥ ೧೭ ॥

ತಾಮಾಸಾದ್ಯ ವರಾರೋಹಾಂ ಸುದ್ವಿಜಾಂ ರುಚಿರಾನನಾಮ್ ।
ಪಪ್ರಚ್ಛ ಪ್ರೇಷಿತಃ ಸಖ್ಯಾ ಫಾಲ್ಗುನಃ ಪ್ರಮದೋತ್ತಮಾಮ್
॥ ೧೮ ॥

ಕಾ ತ್ವಂ ಕಸ್ಯಾಸಿ ಸುಶ್ರೋಣಿ ಕುತೋಽಸಿ ಕಿಂ ಚಿಕೀರ್ಷಸಿ ।
ಮನ್ಯೇ ತ್ವಾಂ ಪತಿಮಿಚ್ಛಂತೀಂ ಸರ್ವಂ ಕಥಯ ಶೋಭನೇ
॥ ೧೯ ॥

ಕಾಲಿಂದ್ಯುವಾಚ

ಅಹಂ ದೇವಸ್ಯ ಸವಿತುರ್ದುಹಿತಾ ಪತಿಮಿಚ್ಛತೀ ।
ವಿಷ್ಣುಂ ವರೇಣ್ಯಂ ವರದಂ ತಪಃ ಪರಮಮಾಸ್ಥಿತಾ
॥ ೨೦ ॥

ನಾನ್ಯಂ ಪತಿಂ ವೃಣೇ ವೀರ ತಮೃತೇ ಶ್ರೀನಿಕೇತನಮ್ ।
ತುಷ್ಯತಾಂ ಮೇ ಸ ಭಗವಾನ್ ಮುಕುಂದೋಽನಾಥಸಂಶ್ರಯಃ
॥ ೨೧ ॥

ಕಾಲಿಂದೀತಿ ಸಮಾಖ್ಯಾತಾ ವಸಾಮಿ ಯಮುನಾಜಲೇ ।
ನಿರ್ಮಿತೇ ಭವನೇ ಪಿತ್ರಾ ಯಾವದಚ್ಯುತದರ್ಶನಮ್
॥ ೨೨ ॥

ತಥಾವದದ್ಗುಡಾಕೇಶೋ ವಾಸುದೇವಾಯ ಸೋಽಪಿ ತಾಮ್ ।
ರಥಮಾರೋಪ್ಯ ತದ್ವಿದ್ವಾನ್ ಧರ್ಮರಾಜಮುಪಾಗಮತ್
॥ ೨೩ ॥

ಯದೈವ ಕೃಷ್ಣ ಸಂದಿಷ್ಟಃ ಪಾರ್ಥಾನಾಂ ಪರಮಾದ್ಭುತಮ್ ।
ಕಾರಯಾಮಾಸ ನಗರಂ ವಿಚಿತ್ರಂ ವಿಶ್ವಕರ್ಮಣಾ
॥ ೨೪ ॥

ಒಮ್ಮೆ ವೀರನಾದ ಅರ್ಜುನನು ಗಾಂಡೀವಧನುಸ್ಸನ್ನೂ, ಅಕ್ಷಯ ಬತ್ತಳಿಕೆಗಳನ್ನು ತೆಗೆದುಕೊಂಡು ಕವಚವನ್ನು ತೊಟ್ಟು ಶ್ರೀಕೃಷ್ಣನೊಡನೆ ವಾನರಧ್ವಜವುಳ್ಳ ರಥದಲ್ಲಿ ಕುಳಿತು ಬೇಟೆಯಾಡುವ ಸಲುವಾಗಿ ಸರ್ಪಗಳಿಂದಲೂ, ಸಿಂಹಗಳಿಂದಲೂ, ವ್ಯಾಘ್ರಗಳಿಂದಲೂ, ಕೂಡಿದ ಅತ್ಯಂತ ಭಯಂಕರವಾದ ಅರಣ್ಯವನ್ನು ಪ್ರವೇಶಿಸಿದನು.॥೧೩-೧೪॥ ಆ ಮಹಾರಣ್ಯದಲ್ಲವನು ತನ್ನ ತೀಕ್ಷ್ಣವಾದ ಬಾಣಗಳಿಂದ ಋಷಿಗಳಿಗೆ ತೊಂದರೆ ಕೊಡುತ್ತಿದ್ದ ದುಷ್ಟ ಕಾಡುಮೃಗಗಳನ್ನು ಸಂಹರಿಸಿದನು. ॥ ೧೫ ॥ ಪರ್ವಕಾಲವು ಸನ್ನಿಹಿತವಾಗಿರಲಾಗಿ ಯಜ್ಞಕ್ಕೆ ಯೋಗ್ಯವಾದ ಹಲವಾರು ಸಾಮಗ್ರಿಗಳನ್ನು ಸೇವಕರು ಮಹಾರಾಜ ಯುಧಿಷ್ಠಿರನಿಗಾಗಿ ಒಯ್ದರು. ಅರ್ಜುನ-ಶ್ರೀಕೃಷ್ಣನಿಗೆ ಬಾಯಾರಿಕೆ ಉಂಟಾದ್ದರಿಂದ ಅವರಿಬ್ಬರೂ ಯಮುನಾತೀರಕ್ಕೆ ಹೋದರು. ॥ ೧೬ ॥ ಮಹಾರಥರಾದ ಕೃಷ್ಣಾರ್ಜುನರು ಯಮುನಾನದಿಗೆ ಹೋಗಿ ಕೈ-ಕಾಲುಗಳನ್ನು ತೊಳೆದುಕೊಂಡು ನಿರ್ಮಲವಾದ ನೀರನ್ನು ಕುಡಿದು, ಅಲ್ಲಿಯೇ ತಪಸ್ಸು ಮಾಡುತ್ತಿದ್ದ ಪರಮಸುಂದರಳಾದ ಕನ್ಯೆಯೋರ್ವಳನ್ನು ನೋಡಿದರು. ॥ ೧೭ ॥ ಆ ಸುಂದರಿಯ ತೊಡೆ, ಹಲ್ಲು ಮತ್ತು ಮುಖಗಳು ಅತ್ಯಂತ ಸುಂದರವಾಗಿತ್ತು. ಪ್ರಿಯಮಿತ್ರನಾದ ಶ್ರೀಕೃಷ್ಣನಿಂದ ಕಳುಹಲ್ಪಟ್ಟ ಅರ್ಜುನನು ಆಕೆಯ ಬಳಿಗೆ ಹೋಗಿ ವಿಚಾರಿಸಿದನು. ॥ ೧೮ ॥ ಎಲೈ ಸುಂದರಿಯೇ! ನೀನು ಯಾರಾಗಿರುವೆ? ಯಾರ ಪುತ್ರಿಯಾಗಿರುವೆ? ಎಲ್ಲಿಂದ ಬಂದಿರುವೆ? ಏನು ಮಾಡಬೇಕೆಂದಿರುವೆ? ನೀನು ನಿನಗೆ ಯೋಗ್ಯನಾದ ಪತಿಯನ್ನು ಬಯಸುತ್ತಿರುವೆ ಎಂದು ನಾನು ತಿಳಿಯುತ್ತೇನೆ. ಓ ಕಲ್ಯಾಣಿಯೇ! ನೀನು ನಿನ್ನ ಎಲ್ಲ ವೃತ್ತಾಂತವನ್ನು ತಿಳಿಸು. ॥ ೧೯ ॥

**ಕಾಲಿಂದಿಯು ಹೇಳಿದಳು** – ನಾನು ಭಗವಾನ್ ಸೂರ್ಯನಾರಾಯಣನ ಪುತ್ರಿಯಾಗಿದ್ದೇನೆ. ಸರ್ವಶ್ರೇಷ್ಠ ವರದಾಯಕನಾದ ಭಗವಾನ್ ವಿಷ್ಣುವನ್ನು ಪತಿಯನ್ನಾಗಿ ಪಡೆಯಲು ಬಯಸುತ್ತಿರುವೆನು. ಅದಕ್ಕಾಗಿ ಇಂತಹ ಕಠೋರ ತಪಸ್ಸು ಮಾಡುತ್ತಿದ್ದೇನೆ. ॥ ೨೦ ॥ ವೀರವರನಾದ ಅರ್ಜುನ! ಲಕ್ಷ್ಮೀದೇವಿಗೆ ಪರಮಾಶ್ರಯನಾದ ಭಗವಂತನನ್ನು ಬಿಟ್ಟು ಬೇರೆ ಯಾರನ್ನೂ ಪತಿಯಾಗಿ ನಾನು ಸ್ವೀಕರಿಸುವುದಿಲ್ಲ. ಅನಾಥರಿಗೆ ಏಕಮಾತ್ರ ಆಸರೆಯಾದ ಭಗವಾನ್ ಶ್ರೀಕೃಷ್ಣನು ನನ್ನ ಮೇಲೆ ಪ್ರಸನ್ನನಾಗಲಿ. ॥ ೨೧ ॥ ನನ್ನ ಹೆಸರು ಕಾಳಿಂದೀ ಎಂದಾಗಿದೆ. ಯಮುನಾಜಲದಲ್ಲಿ ನನ್ನ ತಂದೆಯಾದ ಸೂರ್ಯನು ನನಗಾಗಿ ಒಂದು ಭವನವನ್ನು ನಿರ್ಮಿಸಿ ಕೊಟ್ಟಿರುವನು. ಅದರಲ್ಲೇ ನಾನಿರುವುದು. ಭಗವಂತನ ದರ್ಶನವಾಗುವವರೆಗೆ ನಾನು ಇಲ್ಲೇ ಇರುವೆನು. ॥ ೨೨ ॥ ಅರ್ಜುನನು ಶ್ರೀಕೃಷ್ಣನ ಬಳಿಗೆ ಹೋಗಿ ಎಲ್ಲ ವಿಷಯಗಳನ್ನು ಹೇಳಿದನು. ಶ್ರೀಕೃಷ್ಣನಾದರೋ ಈ ವಿಷಯಗಳೆಲ್ಲವನ್ನೂ ಮೊದಲೇ ತಿಳಿದಿದ್ದನು. ಕೃಷ್ಣಾರ್ಜುನರಿಬ್ಬರೂ ಕಾಳಿಂದಿಯನ್ನು ರಥದಲ್ಲಿ ಕುಳ್ಳಿರಿಸಿಕೊಂಡು ಧರ್ಮರಾಜನ ಬಳಿಗೆ ಹೋದರು. ॥೨೩॥ ಪಾಂಡವರ ಪ್ರಾರ್ಥನೆಯಂತೆ ಶ್ರೀಕೃಷ್ಣನು ಪಾಂಡವರ ವಾಸಕ್ಕಾಗಿ ಪರಮಾದ್ಭುತವಾದ ಮತ್ತು ವಿಚಿತ್ರವಾದ ನಗರವೊಂದನ್ನು ವಿಶ್ವಕರ್ಮನಿಂದ ನಿರ್ಮಾಣ ಮಾಡಿಸಿಕೊಟ್ಟನು. ॥ ೨೪ ॥

ಭಗವಾಂಸ್ತತ್ರ ನಿವಸನ್ ಸ್ವಾನಾಂ ಪ್ರಿಯಚಿಕೀರ್ಷಯಾ ।
ಅಗ್ನಯೇ ಖಾಂಡವಂ ದಾತುಮರ್ಜುನಸ್ಯಾಸ ಸಾರಥಿಃ ॥ ೨೫ ॥

ಸೋಽಗ್ನಿಸ್ತುಷ್ಟೋ ಧನುರದಾದ್ಧಯಾನ್ ಶ್ವೇತಾನ್ರಥಂ ನೃಪ ।
ಅರ್ಜುನಾಯಾಕ್ಷಯೌ ತೂಣೌ ವರ್ಮ ಚಾಭೇದ್ಯಮಸ್ತ್ರಿಭಿಃ ॥ ೨೬ ॥

ಮಯಶ್ಚ ಮೋಚಿತೋ ವಹ್ನೇಃ ಸಭಾಂ ಸಖ್ಯ ಉಪಾಹರತ್ ।
ಯಸ್ಮಿನ್ ದುರ್ಯೋಧನಸ್ಯಾಸೀಜ್ಜಲಸ್ಥಲದೃಶಿಭ್ರಮಃ ॥ ೨೭ ॥

ಸ ತೇನ ಸಮನುಜ್ಞಾತಃ ಸುಹೃದ್ಭಿಶ್ಚಾನುಮೋದಿತಃ ।
ಆಯಯೌ ದ್ವಾರಕಾಂ ಭೂಯಃ ಸಾತ್ಯಕಿಪ್ರಮುಖೈರ್ವೃತಃ ॥ ೨೮ ॥

ಅಥೋಪಯೇಮೇ ಕಾಲಿಂದೀಂ ಸುಪುಣ್ಯರ್ತ್ವೃಕ್ಷ ಊರ್ಜಿತೇ ।
ವಿತನ್ವನ್ ಪರಮಾನಂದಂ ಸ್ವಾನಾಂ ಪರಮಮಂಗಲಮ್ ॥ ೨೯ ॥

ವಿಂದಾನುವಿಂದಾವಾವಂತ್ಯೌ ದುರ್ಯೋಧನವಶಾನುಗೌ ।
ಸ್ವಯಂವರೇ ಸ್ವಭಗಿನೀಂ ಕೃಷ್ಣೇ ಸಕ್ತಾಂ ನ್ಯಷೇಧತಾಮ್ ॥ ೩೦ ॥

ರಾಜಾಧಿದೇವ್ಯಾಸ್ತನಯಾಂ ಮಿತ್ರವಿಂದಾಂ ಪಿತೃಷ್ವಸುಃ ।
ಪ್ರಸಹ್ಯ ಹೃತವಾನ್ ಕೃಷ್ಣೋ ರಾಜನ್ ರಾಜ್ಞಾಂ ಪ್ರಪಶ್ಯತಾಮ್ ॥ ೩೧ ॥

ನಗ್ನಜಿನ್ನಾಮ ಕೌಸಲ್ಯ ಆಸೀದ್ರಾಜಾತಿಧಾರ್ಮಿಕಃ ।
ತಸ್ಯ ಸತ್ಯಾಭವತ್ ಕನ್ಯಾ ದೇವೀ ನಾಗ್ನಜಿತೀ ನೃಪ ॥ ೩೨ ॥

ನ ತಾಂ ಶೇಕುರ್ನೃಪಾ ವೋಢು-
ಮಜಿತ್ವಾ ಸಪ್ತ ಗೋವೃಷಾನ್ ।
ತೀಕ್ಷ್ಣಶೃಂಗಾನ್ ಸುದುರ್ಧರ್ಷಾನ್
ವೀರಗಂಧಾಸಹಾನ್ಖಲಾನ್ ॥ ೩೩ ॥

ಪಾಂಡವರಿಗೆ ಅನುಕೂಲಗಳನ್ನು ಕಲ್ಪಿಸಿಕೊಡಬೇಕೆಂಬ ಆಶಯದಿಂದಲೇ ಶ್ರೀಕೃಷ್ಣನು ಕೆಲವುಕಾಲ ಅಲ್ಲೇ ವಾಸವಾಗಿದ್ದನು. ಈ ಮಧ್ಯದಲ್ಲೇ ಖಾಂಡವವನವನ್ನು ಅಗ್ನಿಗೆ ಅರ್ಪಿಸುವ ಸಲುವಾಗಿ ಶ್ರೀಕೃಷ್ಣನು ಅರ್ಜುನನಿಗೆ ಸಾರಥಿಯೂ ಆದನು. ॥ ೨೫ ॥ ಖಾಂಡವವನದ ಭೋಜನದಿಂದ ಸಂತೃಪ್ತನಾದ ಅಗ್ನಿದೇವನು ಅರ್ಜುನನಿಗೆ ಗಾಂಡೀವವೆಂಬ ಧನಸ್ಸನ್ನೂ, ನಾಲ್ಕು ಬಿಳಿಯ ಕುದುರೆಗಳನ್ನು, ಒಂದು ರಥವನ್ನು, ಎರಡು ಅಕ್ಷಯವಾದ ಬತ್ತಳಿಕೆಗಳನ್ನು, ಶಸ್ತ್ರಗಳಿಂದ ಅಭೇದ್ಯವಾದ ಕವಚವನ್ನು ಅನುಗ್ರಹಿಸಿಕೊಟ್ಟನು. ॥ ೨೬ ॥ ಖಾಂಡವ ದಾಹದ ಸಮಯದಲ್ಲಿ ಅರ್ಜುನನು ಮಯನೆಂಬ ದಾನವನನ್ನು ಅಗ್ನಿಯಿಂದ ಪಾರಾಗಿಸಿದ್ದನು. ಆದ್ದರಿಂದ ಅವನು ಅರ್ಜುನನೊಂದಿಗೆ ಮೈತ್ರಿಯನ್ನು ಬೆಳೆಸಿ ಪಾಂಡವರ ಸಲುವಾಗಿ ಒಂದು ಅದ್ಭುತವಾದ ಸಭಾಭವನವನ್ನು ನಿರ್ಮಿಸಿಕೊಟ್ಟನು. ಅದೇ ಸಭಾಭವನದಲ್ಲಿ ದುರ್ಯೋಧನನು ನೆಲ-ಜಲದ ಭ್ರಮೆಯಿಂದಾಗಿ ಅವಮಾನಿತ ನಾಗಿದ್ದನು. ॥ ೨೭ ॥

ಕೆಲವು ದಿವಸಗಳ ಬಳಿಕ ಭಗವಾನ್ ಶ್ರೀಕೃಷ್ಣನು ಅರ್ಜುನನಿಂದ ಹಾಗೂ ಇತರ ಸಂಬಂಧಿಕರಿಂದ ಅನುಮತಿಯನ್ನು ಪಡೆದುಕೊಂಡು, ಸಾತ್ಯಕಿಯೇ ಮೊದಲಾದವರೊಂದಿಗೆ ದ್ವಾರಕೆಗೆ ಹಿಂದಿರಿಗಿದನು. ॥ ೨೮ ॥ ಅಲ್ಲಿಗೆ ಬಂದು ಶ್ರೀಕೃಷ್ಣನು ಪ್ರಶಸ್ತವಾದ ಋತು-ನಕ್ಷತ್ರ-ಮುಹೂರ್ತದಲ್ಲಿ ಸ್ವಜನರಿಗೆ ಆನಂದವನ್ನೂ, ಶುಭವನ್ನೂ, ಮಂಗಳವನ್ನೂ ಉಂಟುಮಾಡುತ್ತಾ ಕಾಳಿಂದಿಯನ್ನು ವಿಧಿಪೂರ್ವಕವಾಗಿ ವಿವಾಹವಾದನು. ॥ ೨೯ ॥ ಅವಂತಿ ದೇಶಕ್ಕೆ (ಉಜ್ಜೈನಿ) ರಾಜನಾಗಿದ್ದ ವಿಂದಾನುವಿಂದರು ದುರ್ಯೋಧನನಿಗೆ ಸಾಮಂತರಾಗಿದ್ದರು. ಅವರಿಗೆ ಮಿತ್ರವಿಂದಾ ಎಂಬ ತಂಗಿಯಿದ್ದಳು. ಆಕೆಯು ಸ್ವಯಂವರದಲ್ಲಿ ಶ್ರೀಕೃಷ್ಣನನ್ನೇ ತನ್ನ ಪತಿಯಾಗಿಸಿಕೊಳ್ಳಲು ಬಯಸಿದ್ದಳು. ಆದರೆ ವಿಂದ-ಅನುವಿಂದರು ತಂಗಿಯನ್ನು ತಡೆದರು. ॥ ೩೦ ॥ ಪರೀಕ್ಷಿತನೇ! ಮಿತ್ರವಿಂದೆಯು ಶ್ರೀಕೃಷ್ಣನ ಸೋದರತ್ತೆಯಾದ ರಾಜಾಧಿದೇವಿಯ ಮಗಳಾಗಿದ್ದಳು. ಶ್ರೀಕೃಷ್ಣನು ರಾಜರಿಂದ ತುಂಬಿದ ಸಭೆಯಲ್ಲಿ ಸಮಸ್ತರಾಜರು ನೋಡುತ್ತಿರುವಂತೆ ಆಕೆಯನ್ನು ಬಲವಂತವಾಗಿ ಅಪಹರಿಸಿಕೊಂಡು ಹೋದನು. ॥ ೩೧ ॥

ಪರೀಕ್ಷಿತನೇ! ಕೋಸಲದೇಶದಲ್ಲಿ ನಗ್ನಜಿತನೆಂಬ ಧಾರ್ಮಿಕನಾದ ರಾಜನಿದ್ದನು. ಅವನಿಗೆ ಕಡುಚೆಲುವೆಯಾದ ಸತ್ಯಾ ಎಂಬ ಹೆಸರಿನ ಕನ್ಯೆಯಿದ್ದಳು. ನಗ್ನಜಿತನ ಮಗಳಾದ್ದರಿಂದ ಅವಳಿಗೆ ನಾಗ್ನಜಿತಿ ಎಂಬ ಇನ್ನೊಂದು ಹೆಸರಿತ್ತು. ಪರೀಕ್ಷಿತನೇ! ರಾಜನ ವೀರ್ಯಶುಲ್ಕ ಪ್ರತಿಜ್ಞೆಗೆ ಅನುಸಾರವಾಗಿ ಅವನಲ್ಲಿದ್ದ ಬಲಿಷ್ಠವಾದ ಏಳುಗೂಳಿಗಳನ್ನು ಯಾವ ರಾಜಕುಮಾರನೂ ಜಯಿಸಲಿಲ್ಲವಾದ ಕಾರಣ ರಾಜಕುಮಾರರು ಆಕೆಯೊಂದಿಗೆ ಮದುವೆಯಾಗದೇ ಹೋದರು. ಏಕೆಂದರೆ, ಆ ಗೂಳಿಗಳ ಕೊಂಬುಗಳು ಅತ್ಯಂತ ಚೂಪಾಗಿದ್ದುವು. ಯಾರಿಂದಲೂ ಎದುರಿಸಲು ಅವು ಅಸಾಧ್ಯವಾಗಿದ್ದವು. ವೀರಪುರುಷರ ವಾಸನೆಯನ್ನು ಅವು ಸಹಿಸುತ್ತಿರಲಿಲ್ಲ. ॥ ೩೨-೩೩ ॥

ತಾಂ ಶ್ರುತ್ವಾ ವೃಷಜಿಲ್ಲಭ್ಯಾಂ ಭಗವಾನ್ ಸಾತ್ವತಾಂ ಪತಿಃ ।
ಜಗಾಮ ಕೌಸಲ್ಯಪುರಂ ಸೈನ್ಯೇನ ಮಹತಾ ವೃತಃ ॥ ೩೪ ॥

ಸ ಕೋಸಲಪತಿಃ ಪ್ರೀತಃ ಪ್ರತ್ಯುತ್ಥಾನಾಸನಾದಿಭಿಃ ।
ಅರ್ಹಣೇನಾಪಿ ಗುರುಣಾ ಪೂಜಯನ್ ಪ್ರತಿನಂದಿತಃ ॥ ೩೫ ॥

ವರಂ ವಿಲೋಕ್ಯಾಭಿಮತಂ ಸಮಾಗತಂ
ನರೇಂದ್ರಕನ್ಯಾ ಚಕಮೇ ರಮಾಪತಿಮ್ ।
ಭೂಯಾದಯಂ ಮೇ ಪತಿರಾಶಿಷೋಽಮಲಾಃ
ಕರೋತು ಸತ್ಯಾ ಯದಿ ಮೇ ಧೃತೋ ವ್ರತೈಃ ॥ ೩೬ ॥

ಯತ್ಪಾದಪಂಕಜರಜಃ ಶಿರಸಾ ಬಿಭರ್ತಿ
ಶ್ರೀರಬ್ಜಜಃ ಸಗಿರಿಶಃ ಸಹಲೋಕಪಾಲೈಃ ।
ಲೀಲಾತನೂಃ ಸ್ವಕೃತಸೇತುಪರೀಪ್ಸಯೇಶಃ
ಕಾಲೇ ದಧತ್ ಸ ಭಗವಾನ್ ಮಮ ಕೇನ ತುಷ್ಯೇತ್ ॥ ೩೭ ॥

ಅರ್ಚಿತಂ ಪುನರಿತ್ಯಾಹ ನಾರಾಯಣ ಜಗತ್ಪತೇ ।
ಆತ್ಮಾನಂದೇನ ಪೂರ್ಣಸ್ಯ ಕರವಾಣಿ ಕಿಮಲ್ಪಕಃ ॥ ೩೮ ॥

ಶ್ರೀಶುಕ ಉವಾಚ

ತಮಾಹ ಭಗವಾನ್ ಹೃಷ್ಟಃ ಕೃತಾಸನಪರಿಗ್ರಹಃ ।
ಮೇಘಗಂಭೀರಯಾ ವಾಚಾ ಸಸ್ಮಿತಂ ಕುರುನಂದನ ॥ ೩೯ ॥

ಶ್ರೀಭಗವಾನುವಾಚ

ನರೇಂದ್ರಯಾಂಚಾ ಕವಿಭಿರ್ವಿಗರ್ಹಿತಾ
ರಾಜನ್ಯಬಂಧೋರ್ನಿಜಧರ್ಮವರ್ತಿನಃ ।
ತಥಾಪಿ ಯಾಚೇ ತವ ಸೌಹೃದೇಚ್ಛಯಾ
ಕನ್ಯಾಂ ತ್ವದೀಯಾಂ ನ ಹಿ ಶುಲ್ಕದಾ ವಯಮ್ ॥ ೪೦ ॥

ರಾಜೋವಾಚ

ಕೋಽನ್ಯಸ್ತೇಽಭ್ಯಧಿಕೋ ನಾಥ ಕನ್ಯಾವರ ಇಹೇಪ್ಸಿತಃ ।
ಗುಣೈಕಧಾಮ್ನೋ ಯಸ್ಯಾಂಗೇ ಶ್ರೀರ್ವಸತ್ಯನಪಾಯಿನೀ ॥ ೪೧ ॥

'ಅಂತಹ ಕೊಬ್ಬಿದ ಗೂಳಿಗಳನ್ನು ಗೆದ್ದವನಿಗೇ ರಾಜಕನ್ಯೆ ದೊರೆಯುವಳು' ಎಂಬುದನ್ನು ಕೇಳಿ ಯದುವಂಶಶಿರೋಮಣಿಯಾದ ಶ್ರೀಕೃಷ್ಣನು ಅಪಾರವಾದ ಸೈನ್ಯದೊಡನೆ ಕೋಸಲಪುರಕ್ಕೆ ಪ್ರಯಾಣಮಾಡಿದನು. ॥ ೩೪ ॥ ಕೋಸಲರಾಜನಾದ ನಗ್ನಜಿತನು ಶ್ರೀಕೃಷ್ಣನನ್ನು ನೋಡಿ ಸುಪ್ರೀತನಾಗಿ ಅವನನ್ನು ಆದರದಿಂದ ಸ್ವಾಗತಿಸಿ ಸತ್ಕರಿಸಿದನು. ಭಗವಾನ್ ಶ್ರೀಕೃಷ್ಣನೂ ಕೂಡ ರಾಜನನ್ನು ಯಥಾಯೋಗ್ಯವಾಗಿ ಅಭಿನಂದಿಸಿದನು. ॥ ೩೫ ॥ ಬಹಳ ದಿವಸಗಳಿಂದಲೂ ತಾನು ಬಯಸುತ್ತಿದ್ದ ರಮಾರಮಣನಾದ ಶ್ರೀಕೃಷ್ಣನೇ ಆಗಮಿಸಿರುವುದನ್ನು ನೋಡಿ ಆನಂದತುಂದಿಲಳಾದ ಸತ್ಯೆಯು ಅವನನ್ನೇ ತನ್ನ ಪತಿಯಾಗಬೇಕೆಂದು ಅಪೇಕ್ಷಿಸಿದಳು. 'ನಾನು ವ್ರತನಿಯಮಾದಿಗಳನ್ನು ಆಚರಿಸುತ್ತಾ ಇವನನ್ನೇ ಸದಾಕಾಲ ಚಿಂತಿಸುತ್ತಿದ್ದುದು ಸತ್ಯವಾದರೆ ಇವನೇ ನನಗೆ ಪತಿಯಾಗಲಿ ಮತ್ತು ನನ್ನ ಶುದ್ಧವಾದ ಲಾಲಸೆಗಳು ಪೂರ್ಣಗೊಳ್ಳಲಿ' ಎಂದು ಹರಿಸಿಕೊಂಡಳು. ॥ ೩೬ ॥ ನಾಗ್ನಜಿತೀ ಸತ್ಯೆಯು ಮನಸ್ಸಿನಲ್ಲೇ ಯೋಚಿಸತೊಡಗಿದಳು - ಯಾರ ಪಾದಧೂಳಿಯನ್ನು ಲಕ್ಷ್ಮೀದೇವಿ, ಬ್ರಹ್ಮ-ರುದ್ರರು, ಸಮಸ್ತ ಲೋಕಪಾಲರು ಮತ್ತು ದೇವಾಧಿದೇವತೆಗಳು ತಮ್ಮ ತಲೆಯಲ್ಲಿ ಭಕ್ತಿಯಿಂದ ಧರಿಸುವರೋ, ಯಾವನು ತಾನೇ ಕಲ್ಪಿಸಿದ ಲೋಕಮರ್ಯಾದೆಯನ್ನು ಸಂಪನ್ನಗೊಳಿಸುವ ಸಲುವಾಗಿ ಆಗಾಗ ಅನೇಕ ಲೀಲಾವತಾರಗಳನ್ನು ತಾಳುವನೋ, ಅಂತಹ ಪ್ರಭುವು ನನ್ನ ಯಾವ ವ್ರತ ನಿಯಮಗಳಿಂದ ತಾನೇ ಪ್ರಸನ್ನನಾದಾನು ? ಕೇವಲ ಅವನ ಕೃಪೆಯಿಂದಲೇ ನನ್ನನ್ನು ವರಿಸಬೇಕಾಗಿದೆ. ॥ ೩೭ ॥ ಪರೀಕ್ಷಿತನೇ ! ನಗ್ನಜಿತರಾಜನು ಭಗವಾನ್ ಶ್ರೀಕೃಷ್ಣನನ್ನು ವಿಧಿಪೂರ್ವಕವಾಗಿ ಪೂಜಿಸಿ ಹೀಗೆ ಪ್ರಾರ್ಥಿಸಿದನು - 'ನಾರಾಯಣ ! ಜಗತ್ಪತಿಯೇ ! ನೀನು ಆತ್ಮಾನಂದದಿಂದ ಪರಿಪೂರ್ಣನಾಗಿರುವೆ. ನಾನಾದರೋ ಅಲ್ಪ ಮನುಷ್ಯನು. ನಾನು ನಿನ್ನ ಯಾವ ಸೇವೆ ಮಾಡಲಿ ?' ॥ ೩೮ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** - ಪರೀಕ್ಷಿತನೇ ! ನಗ್ನಜಿತ ಮಹಾರಾಜನು ಇತ್ತ ಆಸನ, ಪೂಜಾದಿಗಳನ್ನು ಸ್ವೀಕರಿಸಿ ಭಗವಾನ್ ಶ್ರೀಕೃಷ್ಣನು ಅತ್ಯಂತ ಸಂತುಷ್ಟನಾದನು. ಅವನು ಮುಗುಳ್ನಗುತ್ತಾ ಮೇಘಗಂಭೀರವಾಣಿಯಿಂದ ಇಂತೆಂದನು.॥೩೯॥

**ಭಗವಾನ್ ಶ್ರೀಕೃಷ್ಣನು ಹೇಳಿದನು** - ರಾಜನೇ ! ತನ್ನ ಧರ್ಮದಲ್ಲಿ ನೆಲೆಯಾಗಿ ನಿಂತ ಕ್ಷತ್ರಿಯನು ಏನನ್ನೂ ಬೇಡುವುದು ಉಚಿತವಲ್ಲ. ಧರ್ಮಜ್ಞರಾದ ವಿದ್ವಾಂಸರು ಅವನ ಈ ಕರ್ಮವನ್ನು ನಿಂದಿಸಿರುವರು. ಹೀಗಿದ್ದರೂ ನಾನು ನಿನ್ನಲ್ಲಿ ಪ್ರೇಮ ಸೌಹಾರ್ದದ ಸಂಬಂಧವನ್ನು ಬೆಳೆಸುವ ಇಚ್ಛೆಯಿಂದ ನಿನ್ನ ಕನ್ಯೆಯನ್ನು ಬಯಸುತ್ತಿದ್ದೇನೆ. ಆದರೆ ನಾವು ಕನ್ಯಾಶುಲ್ಕವನ್ನು ಕೊಡತಕ್ಕವರಲ್ಲ. ॥ ೪೦ ॥

**ನಗ್ನಜಿತರಾಜನು ಹೇಳಿದನು** - "ಪ್ರಭುವೇ! ನೀನು ಸಮಸ್ತ ಗುಣಗಳಿಗೆ ಪರಮಾಶ್ರಯನಾಗಿರುವೆ. ಸಾಕ್ಷಾತ್ ಮಹಾಲಕ್ಷ್ಮಿಯೇ ನಿನ್ನ ವಕ್ಷಃಸ್ಥಳದಲ್ಲಿ ವಾಸಮಾಡುತ್ತಾಳೆ. ನನ್ನ ಮಗಳಿಗೆ ನಿನಗಿಂತಲೂ ಶ್ರೇಷ್ಠನಾದ ವರನು ಬೇರೆ ಯಾರು ತಾನೇ ಇರಬಲ್ಲನು ? ॥ ೪೧ ॥

ಕಿಂ ತ್ವಸ್ಮಾಭಿಃ ಕೃತಃ ಪೂರ್ವಂ ಸಮಯಃ ಸಾತ್ವತರ್ಷಭ ।
ಪುಂಸಾಂ ವೀರ್ಯಪರೀಕ್ಷಾರ್ಥಂ ಕನ್ಯಾವರಪರೀಪ್ಸಯಾ ॥ ೪೨ ॥

ಸಪ್ತೈತೇ ಗೋವೃಷಾ ವೀರ ದುರ್ದಾಂತಾ ದುರವಗ್ರಹಾಃ ।
ಏತೈರ್ಭಗ್ನಾಃ ಸುಬಹವೋ ಭಿನ್ನಗಾತ್ರಾ ನೃಪಾತ್ಮಜಾಃ ॥ ೪೩ ॥

ಯದಿಮೇ ನಿಗೃಹೀತಾಃ ಸ್ಯುಸ್ತ್ವಯೈವ ಯದುನಂದನ ।
ವರೋ ಭವಾನಭಿಮತೋ ದುಹಿತುರ್ಮೇ ಶ್ರಿಯಃ ಪತೇ ॥ ೪೪ ॥

ಏವಂ ಸಮಯಮಾಕರ್ಣ್ಯ ಬದ್ಧ್ವಾ ಪರಿಕರಂ ಪ್ರಭುಃ ।
ಆತ್ಮಾನಂ ಸಪ್ತಧಾ ಕೃತ್ವಾ ನ್ಯಗೃಹ್ಣಾಲ್ಲೀಲಯೈವ ತಾನ್ ॥ ೪೫ ॥

ಬದ್ಧ್ವಾ ತಾನ್ ದಾಮಭಿಃ ಶೌರಿ-
ರ್ಭಗ್ನದರ್ಪಾನ್ ಹತೌಜಸಃ ।
ವ್ಯಕರ್ಷಲ್ಲೀಲಯಾ ಬದ್ಧಾನ್-
ಬಲೋ ಧಾರುಮಯಾನ್ ಯಥಾ ॥ ೪೬ ॥

ತತಃ ಪ್ರೀತಃ ಸುತಾಂ ರಾಜಾ ದದೌ ಕೃಷ್ಣಾಯ ವಿಸ್ಮಿತಃ ।
ತಾಂ ಪ್ರತ್ಯಗೃಹ್ಣಾದ್ಭಗವಾನ್ ವಿಧಿವತ್ಸದೃಶೀಂ ಪ್ರಭುಃ ॥ ೪೭ ॥

ರಾಜಪತ್ನ್ಯಶ್ಚ ದುಹಿತುಃ ಕೃಷ್ಣಂ ಲಬ್ಧ್ವಾ ಪ್ರಿಯಂ ಪತಿಮ್ ।
ಲೇಭಿರೇ ಪರಮಾನಂದಂ ಜಾತಶ್ಚ ಪರಮೋತ್ಸವಃ ॥ ೪೮ ॥

ಶಂಖಭೇರ್ಯಾನಕಾ ನೇದುರ್ಗೀತವಾದ್ಯದ್ವಿಜಾಶಿಷಃ ।
ನರಾ ನಾರ್ಯಃ ಪ್ರಮುದಿತಾಃ ಸುವಾಸಃ ಸ್ರಗಲಂಕೃತಾಃ ॥ ೪೯ ॥

ದಶಧೇನುಸಹಸ್ರಾಣಿ ಪಾರಿಬರ್ಹಮದಾದ್ವಿಭುಃ ।
ಯುವತೀನಾಂ ತ್ರಿಸಾಹಸ್ರಂ ನಿಷ್ಕಗ್ರೀವಸುವಾಸಸಾಮ್ ॥ ೫೦ ॥

ನವನಾಗಸಹಸ್ರಾಣಿ ನಾಗಾಚ್ಛತಗುಣಾನ್ರಥಾನ್ ।
ರಥಾಚ್ಛತಗುಣಾನಶ್ವಾನಶ್ವಾಚ್ಛತಗುಣಾನ್ ನರಾನ್ ॥ ೫೧ ॥

ದಂಪತೀ ರಥಮಾರೋಪ್ಯ ಮಹತ್ಯಾ ಸೇನಯಾ ವೃತೌ ।
ಸ್ನೇಹಪ್ರಕ್ಲಿನ್ನಹೃದಯೋ ಯಾಪಯಾಮಾಸ ಕೋಸಲಃ ॥ ೫೨ ॥

ಆದರೆ ಯದುವಂಶ ಶಿರೋಮಣಿಯೇ! ಕನ್ಯೆಗೆ ಅನುರೂಪನಾದ ವರನು ಯಾರೆಂಬುದನ್ನು ತಿಳಿಯಲು ಮತ್ತು ವರನ ಶೌರ್ಯ-ಸಾಮರ್ಥ್ಯಗಳನ್ನು ಪರೀಕ್ಷಿಸಲಿಕ್ಕಾಗಿ ಹಿಂದಿನಿಂದಲೂ ಒಂದು ನಿಯಮವನ್ನು ಪಾಲಿಸುತ್ತಾ ಬಂದಿದ್ದೇವೆ. ॥ ೪೨ ॥ ವೀರಶ್ರೇಷ್ಠನಾದ ಶ್ರೀಕೃಷ್ಣ! ನಮ್ಮಲ್ಲಿ ಎದಿರಿಸಲು ಅಸಾಧ್ಯವಾದ ಮತ್ತು ಹಿಡಿಯಲು ದುಸ್ಸಾಧ್ಯವಾದ ಏಳು ಕೊಬ್ಬಿದ ಗೂಳಿಗಳಿವೆ. ಇವುಗಳನ್ನು ಬಗ್ಗಿಸಲು ಹೋಗಿ ಹಲವಾರು ರಾಜಕುಮಾರರು ಕೈ-ಕಾಲುಗಳನ್ನು ಮುರಿದುಕೊಂಡಿದ್ದಾರೆ. ॥ ೪೩ ॥ ಯದುನಂದನನೇ! ಶ್ರೀಯಃಪತಿಯೇ! ನಿನ್ನಿಂದೇನಾದರೂ ಈ ಏಳು ಗೂಳಿಗಳೂ ನಿಗ್ರಹಿಸಲ್ಪಟ್ಟರೆ ಆಗ ನೀನು ನನ್ನ ಮಗಳಿಗೆ ಅನುರೂಪನಾದ, ಅಭೀಷ್ಟನಾದ ವರನಾಗುವೆ'' ॥ ೪೪ ॥ ಸರ್ವಶಕ್ತನಾದ ಶ್ರೀಕೃಷ್ಣನು ನಗ್ನಜಿತನ ಈ ಪಣವನ್ನು ಕೇಳಿ ತನ್ನನ್ನು ಏಳು ರೂಪವಾಗಿ ಕಲ್ಪಿಸಿಕೊಂಡು ನಡುಕಟ್ಟನ್ನು ಬಿಗಿದು ಲೀಲಾಜಾಲವಾಗಿ ಆ ಏಳು ಗೂಳಿಗಳನ್ನು ನಿಗ್ರಹಿಸಿದನು. ॥ ೪೫ ॥ ಅವುಗಳಿಗೆ ಮೂಗುದಾರವನ್ನು ಹಾಕಿ, ಹಗ್ಗದಿಂದ ಬಿಗಿದು, ದರ್ಪವನ್ನು ಕಳೆದುಕೊಂಡಿದ್ದ ಮತ್ತು ಶಕ್ತಿಗುಂದಿದ್ದ ಆ ಗೂಳಿಗಳನ್ನು ಬಾಲಕರು ಮರದ ಬಸವನನ್ನು ಅತ್ತಲಿತ್ತ ಎಳೆದಾಡುವಂತೆಯೇ ಎಳೆದಾಡಿದನು.॥ ೪೬ ॥ ವಿಸ್ಮಿತನಾದ ನಗ್ನಜಿತ ಮಹಾರಾಜನು ಶ್ರೀಕೃಷ್ಣನ ವೀರ್ಯ-ಸಾಹಸವನ್ನು ನೋಡಿ ಸುಪ್ರೀತನಾಗಿ ತನ್ನ ಮಗಳನ್ನು ಶ್ರೀಕೃಷ್ಣನಿಗೆ ಒಪ್ಪಿಸಿಕೊಟ್ಟನು. ಭಗವಂತನು ತನಗೆ ಅನುರೂಪಳಾಗಿದ್ದ ಸತ್ಯೆಯನ್ನು ವಿಧಿಪೂರ್ವಕವಾಗಿ ಪಾಣಿಗ್ರಹಣಮಾಡಿಕೊಂಡನು. ॥ ೪೭ ॥ ತಮ್ಮ ಮಗಳಿಗೆ ಅತ್ಯಂತ ಪ್ರಿಯನಾಗಿದ್ದ ಶ್ರೀಕೃಷ್ಣನು ಪತಿಯಾಗಿ ದೊರೆತಿರುವುದನ್ನು ನೋಡಿದ ರಾಜಪತ್ನಿಯರು ಪರಮಾನಂದವನ್ನು ಹೊಂದಿದರು. ಕಲ್ಯಾಣಮಹೋತ್ಸವವು ಸಂಭ್ರಮದಿಂದ ಜರುಗಿತು. ॥ ೪೮ ॥ ಶಂಖ, ಡೋಲು, ಭೇರಿ, ನಗಾರಿಗಳು ಮೊಳಗಿದವು. ಎಲ್ಲೆಡೆ ಗಾಯನ, ವಾದ್ಯ ಘೋಷಗಳು ನಡೆದವು. ಬ್ರಾಹ್ಮಣರು ಆಶೀರ್ವದಿಸುತ್ತಿದ್ದರು. ಸುಂದರವಾದ ವಸ್ತ್ರಾಭರಣಗಳಿಂದ, ಹೂವಿನ ಹಾರಗಳಿಂದ ಅಲಂಕರಿಸಿ ಕೊಂಡು ನಗರದ ನರ-ನಾರಿಯರು ಆನಂದ ಸಾಗರದಲ್ಲಿ ಮುಳುಗಿಹೋದರು. ॥ ೪೯ ॥ ನಗ್ನಜಿತರಾಜನು ಹತ್ತುಸಾವಿರ ಗೋವುಗಳನ್ನು, ಸುಂದರವಾದ ವಸ್ತ್ರಗಳನ್ನೂ, ಸ್ವರ್ಣ ಹಾರಗಳನ್ನೂ ಧರಿಸಿದ ಮೂರುಸಾವಿರ ನವಯುವತಿಯರಾದ ದಾಸಿಯರನ್ನು ಬಳುವಳಿಯಾಗಿ ಕೊಟ್ಟನು. ಜೊತೆಗೆ ಒಂಭತ್ತು ಸಾವಿರ ಆನೆಗಳು, ಒಂಭತ್ತು ಲಕ್ಷ ರಥಗಳು, ಒಂಭತ್ತು ಕೋಟಿ ಕುದುರೆಗಳನ್ನು ಒಂಭತ್ತು ಅರ್ಬುದ ಸೇವಕರನ್ನು ಬಳುವಳಿಯಾಗಿ ನೀಡಿದನು. ॥ ೫೦-೫೧ ॥ ಕೋಸಲದ ರಾಜನಾದ ನಗ್ನಜಿತನು ಮಗಳು-ಅಳಿಯನನ್ನು ರಥದಲ್ಲಿ ಕುಳ್ಳಿರಿಸಿ ಒಂದು ಬೃಹತ್ತಾದ ಸೇನೆಯೊಂದಿಗೆ ಬೀಳ್ಕೊಟ್ಟನು. ಆಗ ಅವನ ಹೃದಯವು ಸ್ನೇಹ-ವಾತ್ಸಲ್ಯದ ಉದ್ರೇಕದಿಂದ ಆರ್ದ್ರವಾಯಿತು. ॥ ೫೨ ॥

ಶ್ರುತ್ವೈತದ್ರುರುಧುರ್ಭೂಪಾ ನಯಂತಂ ಪಥಿ ಕನ್ಯಕಾಮ್ ।
ಭಗ್ನವೀರ್ಯಾಃ ಸುದುರ್ಮರ್ಷಾ ಯದುಭಿರ್ಗೋವೃಷೈಃ ಪುರಾ ॥ ೫೩ ॥

ಪರೀಕ್ಷಿತನೇ ! ಯದುವಂಶೀಯರಿಂದಲೂ, ನಗ್ನಜಿತನ ಏಳು ಗೂಳಿಗಳಿಂದಲೂ ಭಗ್ನವೀರ್ಯರಾಗಿದ್ದ ರಾಜಕುಮಾರರು - ಶ್ರೀಕೃಷ್ಣನು ಸತ್ಯೆಯನ್ನು ಕರೆದುಕೊಂಡು ಹೋಗುತ್ತಿರುವನೆಂಬ ವಾರ್ತೆಯನ್ನು ಕೇಳಿ, ಅಸಹನಶೀಲರಾಗಿ ಶ್ರೀಕೃಷ್ಣನ ರಥವನ್ನು ಆಕ್ರಮಿಸಿದರು. ॥ ೫೩ ॥ ಅವರೆಲ್ಲರೂ ಶ್ರೀಕೃಷ್ಣನ ಮೇಲೆ ವೇಗವಾಗಿ ಬಾಣಗಳನ್ನು ಸುರಿಸತೊಡಗಿದರು. ಆಗ ಪಾಂಡವವೀರನಾದ ಅರ್ಜುನನು ಗೆಳೆಯನಾದ ಶ್ರೀಕೃಷ್ಣನಿಗೆ ಪ್ರಿಯವನ್ನುಂಟು ಮಾಡಲು ಗಾಂಡೀವ ಧನುಸ್ಸನ್ನು ಹಿಡಿದು, ಸಿಂಹವು ಕ್ಷುದ್ರ ಮೃಗಗಳನ್ನು ಧ್ವಂಸಮಾಡುವಂತೆ ಆ ರಾಜಕುಮಾರರನ್ನು ಧ್ವಂಸಮಾಡಿಬಿಟ್ಟನು. ॥ ೫೪ ॥

ತಾನಸ್ಯತಃ ಶರವ್ರಾತಾನ್ ಬಂಧುಪ್ರಿಯಕೃದರ್ಜುನಃ ।
ಗಾಂಡೀವೀ ಕಾಲಯಾಮಾಸ ಸಿಂಹಃ ಕ್ಷುದ್ರಮೃಗಾನಿವ ॥ ೫೪ ॥

ಪಾರಿಬರ್ಹಮುಪಾಗೃಹ್ಯ ದ್ವಾರಕಾಮೇತ್ಯ ಸತ್ಯಯಾ ।
ರೇಮೇ ಯದೂನಾಮೃಷಭೋ ಭಗವಾನ್ ದೇವಕೀಸುತಃ ॥ ೫೫ ॥

ಅನಂತರ ಯದುವಂಶ ಶಿರೋಮಣಿಯಾದ ದೇವಕೀನಂದನ ಶ್ರೀಕೃಷ್ಣನು ಆ ಬಳುವಳಿಯನ್ನು ಮತ್ತು ಸತ್ಯೆಯನ್ನು ಜೊತೆಸೇರಿ ದ್ವಾರಕೆಗೆ ಬಂದು, ಅಲ್ಲಿ ಗೃಹಸ್ಥೋಚಿತವಾಗಿ ವಿಹರಿಸತೊಡಗಿದನು. ॥ ೫೫ ॥

ಶ್ರುತಕೀರ್ತೇಃ ಸುತಾಂ ಭದ್ರಾಮುಪಯೇಮೇ ಪಿತೃಷ್ವಸುಃ ।
ಕೈಕೇಯೀಂ ಭ್ರಾತೃಭಿರ್ದತ್ತಾಂ ಕೃಷ್ಣಃ ಸಂತರ್ದನಾದಿಭಿಃ ॥ ೫೬ ॥

ಪರೀಕ್ಷಿತನೇ ! ಭಗವಾನ್ ಶ್ರೀಕೃಷ್ಣನ ಸೋದರತ್ತೆಯಾದ ಶ್ರುತಕೀರ್ತಿಯನ್ನು ಕೇಕಯರಾಜನು ವಿವಾಹವಾಗಿದ್ದನು. ಅವಳಿಗೆ ಭದ್ರಾ ಎಂಬ ಮಗಳಿದ್ದಳು. ಆಕೆಯ ಸೋದರರಾದ ಸಂತರ್ದನರೇ ಮೊದಲಾದವರು ಭದ್ರೆಯನ್ನು ಶ್ರೀಕೃಷ್ಣನಿಗೆ ಅರ್ಪಿಸಿದರು. ಅವನು ಆಕೆಯ ಪಾಣಿಗ್ರಹಣ ಮಾಡಿದನು. ॥ ೫೬ ॥ ಮದ್ರದೇಶದ ರಾಜನಿಗೆ ಲಕ್ಷ್ಮಣಾ ಎಂಬ ಅತ್ಯಂತ ಸುಲಕ್ಷಣಳಾದ ಕನ್ಯೆಯೊಬ್ಬಳಿದ್ದಳು. ಗರುಡನು ಸ್ವರ್ಗದಿಂದ ಅಮೃತವನ್ನು ಹರಣಮಾಡಿದಂತೆಯೇ ಶ್ರೀಕೃಷ್ಣನು ಸ್ವಯಂವರದಲ್ಲಿ ಒಬ್ಬಂಟಿಗನಾಗಿ ಆಕೆಯನ್ನು ಅಪಹರಿಸಿ ತಂದನು. ॥ ೫೭ ॥

ಸುತಾಂ ಚ ಮದ್ರಾಧಿಪತೇರ್ಲಕ್ಷ್ಮಣಾಂ ಲಕ್ಷಣೈರ್ಯುತಾಮ್ ।
ಸ್ವಯಂವರೇ ಜಹಾರೈಕಃ ಸ ಸುಪರ್ಣಃ ಸುಧಾಮಿವ ॥ ೫೭ ॥

ಅನ್ಯಾಶ್ಚೈವಂವಿಧಾ ಭಾರ್ಯಾಃ ಕೃಷ್ಣಸ್ಯಾಸನ್ ಸಹಸ್ರಶಃ ।
ಭೌಮಂ ಹತ್ವಾ ತನ್ನಿರೋಧಾದಾಹೃತಾಶ್ಚಾರುದರ್ಶನಾಃ ॥ ೫೮ ॥

ಪರೀಕ್ಷಿತನೇ ! ಹೀಗೆಯೇ ಭಗವಾನ್ ಶ್ರೀಕೃಷ್ಣನಿಗೆ ಇನ್ನೂ ಸಾವಿರಾರು ಪತ್ನಿಯರಿದ್ದರು. ಆ ಪರಮಸುಂದರಿಯನ್ನು ಭೌಮಾಸುರನನ್ನು ಸಂಹರಿಸಿ ಅವನ ಕಾರಾಗೃಹದಿಂದ ಬಿಡಿಸಿ ತಂದಿದ್ದನು. ॥ ೫೮ ॥

ಐವತ್ತೆಂಟನೆಯ ಅಧ್ಯಾಯವು ಮುಗಿಯಿತು. ॥ ೫೮ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಉತ್ತರಾರ್ಧೇ
ಅಷ್ಟಮಹಿಷ್ಯುದ್ವಾಹೋ ನಾಮಾಷ್ಟಪಂಚಾಶತ್ತಮೋಽಧ್ಯಾಯಃ ॥ ೫೮ ॥

# ಐವತ್ತೊಂಭತ್ತನೆಯ ಅಧ್ಯಾಯ

## ನರಕಾಸುರನ ಸಂಹಾರ

## ಹದಿನಾರು ಸಾವಿರದ ನೂರುಮಂದಿ ರಾಜಕನ್ಯೆಯರೊಡನೆ ಶ್ರೀಕೃಷ್ಣನ ವಿವಾಹ

*ರಾಜೋವಾಚ*

ಯಥಾ ಹತೋ ಭಗವತಾ ಭೌಮೋ ಯೇನ ಚ ತಾಃ ಸ್ತ್ರಿಯಃ ।
ನಿರುದ್ಧಾ ಏತದಾಚಕ್ಷ್ವ ವಿಕ್ರಮಂ ಶಾರ್ಙ್ಗಧನ್ವನಃ ॥ ೧ ॥

ಪರೀಕ್ಷಿದ್ರಾಜನು ಪ್ರಶ್ನಿಸುತ್ತಾನೆ - ಪೂಜ್ಯರೇ ! ಸಾವಿರಾರು ಸ್ತ್ರೀಯರನ್ನು ಬಂಧನದಲ್ಲಿರಿಸಿದ ಭೌಮಾಸುರ (ನರಕಾಸುರ)ನನ್ನು ಶ್ರೀಕೃಷ್ಣನು ಹೇಗೆ ಸಂಹರಿಸಿದನು ? ಶಾರ್ಙ್ಗಧನುಸ್ಸನ್ನು ಧರಿಸಿದ್ದ ಶ್ರೀಕೃಷ್ಣನ ಈ ವಿಚಿತ್ರ ಚರಿತ್ರವನ್ನು ವಿಸ್ತಾರವಾಗಿ ಹೇಳಿರಿ. ॥ ೧ ॥

*ಶ್ರೀಶುಕ ಉವಾಚ*

ಇಂದ್ರೇಣ ಹೃತಛತ್ರೇಣ ಹೃತಕುಂಡಲಬಂಧುನಾ ।
ಹೃತಾಮರಾದ್ರಿಸ್ಥಾನೇನ ಜ್ಞಾಪಿತೋ ಭೌಮಚೇಷ್ಟಿತಮ್ ।
ಸಭಾರ್ಯೋ ಗರುಡಾರೂಢಃ ಪ್ರಾಗ್ಜ್ಯೋತಿಷಪುರಂ ಯಯೌ
॥ ೨ ॥

ಗಿರಿದುರ್ಗೈಃ ಶಸ್ತ್ರದುರ್ಗೈರ್ಜಲಾಗ್ನ್ಯನಿಲದುರ್ಗಮಮ್ ।
ಮುರಪಾಶಾಯುತೈರ್ಘೋರೈರ್ದೃಢೈಃ ಸರ್ವತ ಆವೃತಮ್
॥ ೩ ॥

ಗದಯಾ ನಿರ್ಬಿಭೇದಾದ್ರೀನ್ ಶಸ್ತ್ರದುರ್ಗಾಣಿ ಸಾಯಕೈಃ ।
ಚಕ್ರೇಣಾಗ್ನಿಂ ಜಲಂ ವಾಯುಂ ಮುರಪಾಶಾಂಸ್ತಥಾಸಿನಾ
॥ ೪ ॥

ಶಂಖನಾದೇನ ಯಂತ್ರಾಣಿ ಹೃದಯಾನಿ ಮನಸ್ವಿನಾಮ್ ।
ಪ್ರಾಕಾರಂ ಗದಯಾ ಗುರ್ವ್ಯಾ ನಿರ್ಬಿಭೇದ ಗದಾಧರಃ
॥ ೫ ॥

ಪಾಂಚಜನ್ಯಧ್ವನಿಂ ಶ್ರುತ್ವಾ ಯುಗಾಂತಾಶನಿಭೀಷಣಮ್ ।
ಮುರಃ ಶಯಾನ ಉತ್ತಸ್ಥೌ ದೈತ್ಯಃ ಪಂಚಶಿರಾ ಜಲಾತ್
॥ ೬ ॥

ತ್ರಿಶೂಲಮುದ್ಯಮ್ಯ ಸುದುರ್ನಿರೀಕ್ಷಣೋ
ಯುಗಾಂತಸೂರ್ಯಾನಲರೋಚಿರುಲ್ಬಣಃ ।
ಗ್ರಸಂಸ್ತ್ರಿಲೋಕೀಮಿವ ಪಂಚಭಿರ್ಮುಖೈ-
ರಭ್ಯದ್ರವತ್ತಾರ್ಕ್ಷ್ಯಸುತಂ ಯಥೋರಗಃ ॥ ೭ ॥

ಆವಿಧ್ಯ ಶೂಲಂ ತರಸಾ ಗರುತ್ಮತೇ
ನಿರಸ್ಯ ವಕ್ತ್ರೈರ್ವ್ಯನದತ್ ಸ ಪಂಚಭಿಃ ।
ಸ ರೋದಸೀ ಸರ್ವದಿಶೋಽಂತರಂ ಮಹಾ-
ನಾಪೂರಯನ್ನಂಡಕಟಾಹಮಾವೃಣೋತ್ ॥ ೮ ॥

**ಶ್ರೀಶುಕಮಹಾಮುನಿಗಳು ಹೇಳಿದರು** – ಎಲೈ ಪರೀಕ್ಷಿತನೇ ! ಭೌಮಾಸುರನು ವರುಣನ ಛತ್ರವನ್ನೂ, ಅದಿತಿಯ ಕುಂಡಲಗಳನ್ನು, ಮೇರು ಪರ್ವತದಲ್ಲಿರುವ ದೇವತೆಗಳ ಮಣಿಪರ್ವತವೆಂಬ ಸ್ಥಾನವನ್ನು ಅಪಹರಿಸಿದ್ದನು. ಇದರಿಂದ ದೇವೇಂದ್ರನು ದ್ವಾರಕೆಗೆ ಬಂದು ಭಗವಾನ್ ಶ್ರೀಕೃಷ್ಣನಲ್ಲಿ ಭೌಮಾಸುರನ ಉಪಟಳವೆಲ್ಲವನ್ನು ನಿವೇದಿಸಿಕೊಂಡನು. ಆಗ ಶ್ರೀಕೃಷ್ಣನು ಸತ್ಯಭಾಮೆಯೊಡನೆ ಗರುಡನನ್ನೇರಿ ಭೌಮನ ರಾಜಧಾನಿಯಾದ ಪ್ರಾಗ್ಜ್ಯೋತಿಷಪುರಕ್ಕೆ ಹೋದನು. ॥ ೨ ॥ ಆ ಪುರವನ್ನು ಪ್ರವೇಶಿಸುವುದು ಅತ್ಯಂತ ಕಠಿಣವಾಗಿತ್ತು. ಮೊದಲನೆಯದಾಗಿ ಆ ಪಟ್ಟಣದ ಸುತ್ತಲೂ ಪರ್ವತಗಳದ್ದೇ ಕೋಟೆಯಿತ್ತು. ಕ್ರಮವಾಗಿ ಶಸ್ತ್ರದುರ್ಗದಿಂದಲೂ, ಜಲದುರ್ಗದಿಂದಲೂ, ಅಗ್ನಿದುರ್ಗದಿಂದಲೂ, ವಾಯುದುರ್ಗದಿಂದಲೂ ಸಮಾವೃತವಾಗಿತ್ತು. ಇದೆಲ್ಲ ಕಳೆದ ಬಳಿಕ ಮುರನೆಂಬ ರಾಕ್ಷಸನು ಹತ್ತುಸಾವಿರ ಕಬ್ಬಿಣದ ಸರಪಳಿಗಳ ದೃಢವಾದ ಜಾಲವನ್ನು ಹರಡಿಟ್ಟಿದ್ದನು. ॥ ೩ ॥ ಭಗವಾನ್ ಶ್ರೀಕೃಷ್ಣನು ತನ್ನ ಕೌಮೋದಕೀಗದೆಯಿಂದ ಪರ್ವತ ಪ್ರಾಕಾರಗಳನ್ನು ಭೇದಿಸಿದನು. ಬಾಣಗಳಿಂದ ಶಸ್ತ್ರದುರ್ಗವನ್ನು ಧ್ವಂಸಮಾಡಿದನು. ಸುದರ್ಶನ ಚಕ್ರದಿಂದ ಅಗ್ನಿ, ಜಲ, ವಾಯು ದುರ್ಗಗಳನ್ನು ನಾಶಮಾಡಿದನು. ನಂದಕವೆಂಬ ಖಡ್ಗದಿಂದ ಮುರಾಸುರನ ಪಾಶಗಳನ್ನು ಕತ್ತರಿಸಿ ಹಾಕಿದನು. ॥ ೪ ॥ ಪಾಂಚಜನ್ಯ ಶಂಖದ ಧ್ವನಿಯಿಂದ ಯಂತ್ರ-ತಂತ್ರ-ಮಂತ್ರಗಳನ್ನು, ಧೈರ್ಯಶಾಲಿಗಳಾದ ರಾಕ್ಷಸರ ಮನಸ್ಸನ್ನು ಭೇದಿಸಿದನು ಮತ್ತು ನಗರದ ಕೋಟೆಯನ್ನು ಗದಾಧರನಾದ ಭಗವಂತನು ತನ್ನ ಗದೆಯಿಂದ ಧ್ವಂಸಗೊಳಿಸಿದನು. ॥ ೫ ॥

ಭಗವಂತನ ಪಾಂಚಜನ್ಯದ ಧ್ವನಿಯು ಪ್ರಳಯಕಾಲದ ಸಿಡಿಲಿನಂತೆ ಮಹಾಭಯಂಕರವಾಗಿತ್ತು. ಅದನ್ನು ಕೇಳುತ್ತಲೇ ನೀರಿನಲ್ಲಿ ನಿದ್ರಿಸುತ್ತಿದ್ದ ಐದು ತಲೆಗಳಿಂದ ಕೂಡಿದ ಮುರನೆಂಬ ದೈತ್ಯನು ಎಚ್ಚರಗೊಂಡು ಎದ್ದು ಬಂದನು. ॥ ೬ ॥ ಆ ಮಹಾದೈತ್ಯನು ಪ್ರಳಯಕಾಲದ ಸೂರ್ಯಾಗ್ನಿಗಳಂತೆ ಪ್ರಚಂಡ ತೇಜಸ್ವಿಯಾಗಿದ್ದನು. ಅವನನ್ನು ಕಣ್ಣೆತ್ತಿ ದಿಟ್ಟಿಸಿ ನೋಡಲೂ ಯಾರಿಗೂ ಸಾಧ್ಯವಾಗುತ್ತಿರಲಿಲ್ಲ. ಪ್ರಾಣಬಿಡಲು ಇಚ್ಛಿಸಿದ ಸರ್ಪವು ಗರುಡನ ಬಳಿಗೆ ಧಾವಿಸುವಂತೆ ಮುರಾಸುರನು ತ್ರಿಶೂಲವನ್ನೆತ್ತಿಕೊಂಡು ಶ್ರೀಕೃಷ್ಣನ ಬಳಿಗೆ ಧಾವಿಸಿದನು. ಆ ಸಮಯದಲ್ಲಿ ತನ್ನ ಐದು ಮುಖಗಳಿಂದ ಮೂರು ಲೋಕಗಳನ್ನೂ ನುಂಗಿಬಿಡುವನೋ ಎಂಬಂತೆ ಕಾಣುತ್ತಿದ್ದನು. ॥ ೭ ॥ ಆ ಮಹಾಸುರನು ತನ್ನ ತ್ರಿಶೂಲವನ್ನು ರಭಸದಿಂದ ತಿರುಗಿಸಿ ಶ್ರೀಕೃಷ್ಣನ ವಾಹನವಾದ ಗರುಡನ ಮೇಲೆ ಪ್ರಯೋಗಿಸಿ ತನ್ನ ಐದು ಮುಖಗಳಿಂದಲೂ ಸಿಂಹನಾದವನ್ನು ಮಾಡಿದನು. ಆ ಸಿಂಹ ನಾದದ ಮಹಾಶಬ್ದವು ಪೃಥಿವಿ, ಆಕಾಶ, ಪಾತಾಳ ಮತ್ತು ಹತ್ತುದಿಕ್ಕುಗಳಲ್ಲಿಯೂ ತುಂಬಿ ಬ್ರಹ್ಮಾಂಡವನ್ನೇ ವ್ಯಾಪಿಸಿತು. ॥ ೮ ॥

ತದಾಪತದ್ವೈ ತ್ರಿಶಿಖಂ ಗರುತ್ಮತೇ
ಹರಿಃ ಶರಾಭ್ಯಾಮಭಿನತ್ತ್ರಿಧೌಜಸಾ ।
ಮುಖೇಷು ತಂ ಚಾಪಿ ಶರೈರತಾಡಯತ್
ತಸ್ಮೈ ಗದಾಂ ಸೋಽಪಿ ರುಷಾ ವ್ಯಮುಂಚತ ॥ ೯ ॥

ತಾಮಾಪತಂತೀಂ ಗದಯಾ ಗದಾಂ ಮೃಧೇ
ಗದಾಗ್ರಜೋ ನಿರ್ಬಿಭಿದೇ ಸಹಸ್ರಧಾ ।
ಉದ್ಯಮ್ಯ ಬಾಹೂನಭಿಧಾವತೋಽಜಿತಃ
ಶಿರಾಂಸಿ ಚಕ್ರೇಣ ಜಹಾರ ಲೀಲಯಾ ॥ ೧೦ ॥

ವ್ಯಸುಃ ಪಪಾತಾಂಭಸಿ ಕೃತ್ತಶೀರ್ಷೋ
ನಿಕೃತ್ತಶೃಂಗೋಽದ್ರಿರಿವೇಂದ್ರತೇಜಸಾ ।
ತಸ್ಯಾತ್ಮಜಾಃ ಸಪ್ತ ಪಿತುರ್ವಧಾತುರಾಃ
ಪ್ರತಿಕ್ರಿಯಾಮರ್ಷಜುಷಃ ಸಮುದ್ಯತಾಃ ॥ ೧೧ ॥

ತಾಮ್ರೋಽಂತರಿಕ್ಷಃ ಶ್ರವಣೋ ವಿಭಾವಸು-
ರ್ವಸುರ್ನಭಸ್ವಾನರುಣಶ್ಚ ಸಪ್ತಮಃ ।
ಪೀಠಂ ಪುರಸ್ಕೃತ್ಯ ಚಮೂಪತಿಂ ಮೃಧೇ
ಭೌಮಪ್ರಯುಕ್ತಾ ನಿರಗನ್ ಧೃತಾಯುಧಾಃ ॥ ೧೨ ॥

ಪ್ರಾಯುಂಜತಾಸಾದ್ಯ ಶರಾನಸೀನ್ ಗದಾಃ
ಶಕ್ತ್ಯೃಷ್ಟಿಶೂಲಾನ್ಯಜಿತೇ ರುಷೋಲ್ಬಣಾಃ ।
ತಚ್ಛಸ್ತ್ರಕೂಟಂ ಭಗವಾನ್ ಸ್ವಮಾರ್ಗಣೈ-
ರಮೋಘವೀರ್ಯಸ್ತಿಲಶಶ್ಚಕರ್ತ ಹ ॥ ೧೩ ॥

ತಾನ್ ಪೀಠಮುಖ್ಯಾನನಯದ್ಯಮಕ್ಷಯಂ
ನಿಕೃತ್ತಶೀರ್ಷೋರುಭುಜಾಂಘ್ರಿವರ್ಮಣಃ ।
ಸ್ವಾನೀಕಪಾನಚ್ಯುತಚಕ್ರಸಾಯಕೈ-
ಸ್ತಥಾ ನಿರಸ್ತಾನ್ ನರಕೋ ಧರಾಸುತಃ ॥ ೧೪ ॥

ನಿರೀಕ್ಷ್ಯ ದುರ್ಮರ್ಷಣ ಆಸ್ರವನ್ಮದೈ-
ರ್ಗಜೈಃ ಪಯೋಧಿಪ್ರಭವೈರ್ನಿರಾಕ್ರಮತ್ ।
ದೃಷ್ಟ್ವಾ ಸಭಾರ್ಯಂ ಗರುಡೋಪರಿ ಸ್ಥಿತಂ
ಸೂರ್ಯೋಪರಿಷ್ಟಾತ್ ಸತಡಿದ್ಘನಂ ಯಥಾ ।
ಕೃಷ್ಣಂ ಸ ತಸ್ಮೈ ವ್ಯಸೃಜಚ್ಛತಘ್ನೀಂ
ಯೋಧಾಶ್ಚ ಸರ್ವೇ ಯುಗಪತ್ ಸ್ಮ ವಿವ್ಯಧುಃ ॥ ೧೫ ॥

ಮುರಾಸುರನು ಪ್ರಯೋಗಿಸಿದ ತ್ರಿಶೂಲವು ವೇಗವಾಗಿ ಗರುಡನ ಕಡೆಗೆ ಬರುತ್ತಿರುವುದನ್ನು ಕಂಡು ಶ್ರೀಕೃಷ್ಣನು ತನ್ನ ಹಸ್ತಕೌಶಲ್ಯವನ್ನು ತೋರುತ್ತಾ, ಎರಡು ಬಾಣಗಳಿಂದ ಆ ತ್ರಿಶೂಲವನ್ನು ಮೂರು ತುಂಡಾಗಿ ಕತ್ತರಿಸಿ ಹಾಕಿದನು. ಮರುಕ್ಷಣದಲ್ಲೇ ಮುರಾಸುರನ ಐದು ಮುಖಗಳಲ್ಲಿಯೂ ಭಗವಂತನು ಬಾಣಗಳನ್ನು ಪ್ರಯೋಗಿಸಿದನು. ಇದರಿಂದ ಅತಿ ಕ್ರುದ್ಧನಾದ ಮುರಾಸುರನು ಶ್ರೀಕೃಷ್ಣನ ಮೇಲೆ ತನ್ನ ಗದೆಯನ್ನು ಪ್ರಯೋಗಿಸಿದನು. ॥ ೯ ॥ ಆದರೆ ಶ್ರೀಕೃಷ್ಣನು ತನ್ನ ಗದಾ ಪ್ರಹಾರದಿಂದ ಮುರಾಸುರನ ಗದೆಯನ್ನು ತನ್ನ ಬಳಿಗೆ ಬರುವ ಮೊದಲೇ ನುಚ್ಚುನೂರಾಗಿಸಿನು. ಈಗ ಅವನು ನಿಃಶಸ್ತ್ರನಾದ್ದರಿಂದ ತನ್ನ ಭುಜಗಳನ್ನು ಚಾಚಿ ಶ್ರೀಕೃಷ್ಣನ ಕಡೆಗೆ ನುಗ್ಗಿದನು. ತತ್‌ಕ್ಷಣ ಅಜಿತನಾದ ಭಗವಂತನು ಚಕ್ರಾಯುಧದಿಂದ ರಾಕ್ಷಸನ ಐದು ತಲೆಗಳನ್ನು ಲೀಲಾಜಾಲವಾಗಿ ಕತ್ತರಿಸಿ ಹಾಕಿದನು ॥ ೧೦ ॥ ಇಂದ್ರನ ವಜ್ರಾಯುಧದಿಂದ ಕತ್ತರಿಸಲ್ಪಟ್ಟ ಪರ್ವತವು ಸಮುದ್ರದಲ್ಲಿ ಬೀಳುವಂತೆ ಶ್ರೀಕೃಷ್ಣನ ಚಕ್ರದಿಂದ ಕತ್ತರಿಸಲ್ಪಟ್ಟು ಶಿರಸ್ಸು ರಹಿತವಾಗಿದ್ದ ಮುರಾಸುರನ ಶರೀರವು ಪ್ರಾಣರಹಿತವಾಗಿ ನೀರಿನಲ್ಲಿ ಬಿದ್ದು ಹೋಯಿತು. ಮುರಾಸುರನಿಗೆ - ತಾಮ್ರ, ಅಂತರಿಕ್ಷ, ಶ್ರವಣ, ವಿಭಾವಸು, ವಸು, ನಭಸ್ವಾನ್ ಮತ್ತು ಅರುಣನೆಂಬ ಏಳು ಮಕ್ಕಳಿದ್ದರು. ಅವರು ತಮ್ಮ ತಂದೆಯ ಮೃತ್ಯುವಿನಿಂದಾಗಿ ಅತ್ಯಂತ ಶೋಕಾಕುಲರಾಗಿ, ಸೇಡು ತೀರಿಸಿಕೊಳ್ಳಲು ಅತ್ಯಂತ ಕ್ರುದ್ಧರಾಗಿ ಭೌಮಾಸುರನ ಆದೇಶದಿಂದ ಶಸ್ತ್ರಾಸ್ತ್ರಗಳಿಂದ ಸುಸಜ್ಜಿತರಾಗಿ ಪೀಠನೆಂಬ ದೈತ್ಯನನ್ನು ತಮ್ಮ ಸೇನಾಪತಿಯನ್ನಾಗಿಸಿಕೊಂಡು ಶ್ರೀಕೃಷ್ಣನ ಮೇಲೆ ಆಕ್ರಮಣ ಮಾಡಿದರು. ॥ ೧೧-೧೨ ॥ ಅವರು ಅಲ್ಲಿಗೆ ಬಂದು ಭಯಂಕರ ಸಿಟ್ಟಿನಿಂದ ಶ್ರೀಕೃಷ್ಣನ ಮೇಲೆ ಬಾಣ, ಖಡ್ಗ, ಗದೆ, ಶಕ್ತಿ, ಋಷ್ಟಿ ತ್ರಿಶೂಲ ಮೊದಲಾದ ಪ್ರಚಂಡ ಶಸ್ತ್ರಗಳನ್ನು ಮಳೆಗರೆದರು. ಪರೀಕ್ಷಿತನೇ! ಭಗವಂತನ ಶಕ್ತಿಯು ಅಮೋಘವೂ, ಅನಂತವೂ ಆದುದು. ಶ್ರೀಕೃಷ್ಣನು ತನ್ನ ಹಲವಾರು ಬಾಣಗಳಿಂದ ಅವರ ಕೋಟಿ-ಕೋಟಿ ಶಸ್ತ್ರಾಸ್ತ್ರಗಳನ್ನು ನುಚ್ಚುನೂರಾಗಿಸಿದನು. ॥ ೧೩ ॥ ಭಗವಂತನು ಶಸ್ತ್ರಪ್ರಹಾರದಿಂದ ಸೇನಾಪತಿ ಪೀಠ ಮತ್ತು ಅವನ ಸೈನಿಕರ ತಲೆಗಳು, ತೊಡೆಗಳು, ಭುಜಗಳು, ಕಾಲುಗಳು, ಕವಚಗಳು ಹೀಗೆ ಎಲ್ಲವನ್ನು ತುಂಡು ತುಂಡಾಗಿ ಕತ್ತರಿಸಿ ಅವರೆಲ್ಲರನ್ನು ಯಮಸದನಕ್ಕೆ ಕಳಿಸಿದನು. ಭಗವಾನ್ ಶ್ರೀಕೃಷ್ಣನ ಚಕ್ರಾಯುಧದಿಂದಲೂ, ಬಾಣಗಳಿಂದಲೂ ತನ್ನ ಸೇನೆ ಮತ್ತು ಸೇನಾಪತಿಗಳ ಸಂಹಾರವನ್ನು ಕಂಡು ಭೂಮಿಪುತ್ರನಾದ ನರಕಾಸುರನು ಕ್ರುದ್ಧನಾದನು. ಸಮುದ್ರದಲ್ಲಿ ಹುಟ್ಟಿದ್ದ ಅನೇಕ ಮದಭರಿತ ಆನೆಗಳ ಸೈನ್ಯದೊಂದಿಗೆ ನಗರದಿಂದ ಹೊರಬಿದ್ದನು. ಸೂರ್ಯನ ಮೇಲ್ಭಾಗದಲ್ಲಿ ಮಿಂಚಿನಿಂದ ಕೂಡಿದ ವರ್ಷಾಕಾಲದ ಶ್ಯಾಮಲ ಮೇಘದಂತೆ ಪತ್ನಿಯೊಡನೆ ಗರುಡಾರೂಢನಾದ ಶ್ರೀಕೃಷ್ಣನನ್ನು ನರಕನು ನೋಡಿದನು. ಅವನನ್ನು ನೋಡುತ್ತಲೇ ಭೌಮಾಸುರನು ಭಗವಂತನ ಮೇಲೆ ಶತಘ್ನಿ ಎಂಬ ಶಕ್ತಿಯನ್ನು ಪ್ರಯೋಗಿಸಿದನು ಮತ್ತು ಅವನ ಸೈನಿಕರು ಒಟ್ಟಿಗೆ ಕೃಷ್ಣನ ಮೇಲೆ ತಮ್ಮ-ತಮ್ಮ ಅಸ್ತ್ರ-ಶಸ್ತ್ರಗಳನ್ನು ಪ್ರಯೋಗಿಸಿದರು. ॥ ೧೪-೧೫ ॥

ತದ್ಭೌಮಸೈನ್ಯಂ ಭಗವಾನ್ ಗದಾಗ್ರಜೋ
ವಿಚಿತ್ರವಾಜೈರ್ನಿಶಿತೈಃ ಶಿಲೀಮುಖೈಃ ।
ನಿಕೃತ್ತಬಾಹೂರುಶಿರೋಧ್ರವಿಗ್ರಹಂ
ಚಕಾರ ತರ್ಹ್ಯೇವ ಹತಾಶ್ವಕುಂಜರಮ್ ॥ ೧೬ ॥

ಯಾನಿ ಯೋಧೈಃ ಪ್ರಯುಕ್ತಾನಿ ಶಸ್ತ್ರಾಸ್ತ್ರಾಣಿ ಕುರೂದ್ವಹ ।
ಹರಿಸ್ತಾನ್ಯಚ್ಛಿನತ್ತೀಕ್ಷ್ಣೈಃ ಶರೈರೇಕೈಕಶಸ್ತ್ರಿಭಿಃ ॥ ೧೭ ॥

ಉಹ್ಯಮಾನಃ ಸುಪರ್ಣೇನ ಪಕ್ಷಾಭ್ಯಾಂ ನಿಘ್ನತಾ ಗಜಾನ್ ।
ಗರುತ್ಮತಾ ಹನ್ಯಮಾನಾಸ್ತುಂಡಪಕ್ಷನಖೈರ್ಗಜಾಃ ॥ ೧೮ ॥

ಪುರಮೇವಾವಿಶನ್ನಾರ್ತಾ ನರಕೋ ಯುಧ್ಯಯುಧ್ಯತ ।
ದೃಷ್ಟ್ವಾ ವಿದ್ರಾವಿತಂ ಸೈನ್ಯಂ ಗರುಡೇನಾರ್ದಿತಂ ಸ್ವಕಮ್ ॥ ೧೯ ॥

ತಂ ಭೌಮಃ ಪ್ರಾಹರಚ್ಛಕ್ತ್ಯಾ ವಜ್ರಃ ಪ್ರತಿಹತೋ ಯತಃ ।
ನಾಕಂಪತ ತಯಾ ವಿದ್ಧೋ ಮಾಲಾಹತ ಇವ ದ್ವಿಪಃ ॥ ೨೦ ॥

ಶೂಲಂ ಭೌಮೋಽಚ್ಯುತಂ ಹಂತುಮಾದದೇ ವಿತಥೋದ್ಯಮಃ ।
ತದ್ವಿಸರ್ಗಾತ್ ಪೂರ್ವಮೇವ ನರಕಸ್ಯ ಶಿರೋ ಹರಿಃ ।
ಅಪಾಹರದ್ಗಜಸ್ಥಸ್ಯ ಚಕ್ರೇಣ ಕ್ಷುರನೇಮಿನಾ ॥ ೨೧ ॥

ಸಕುಂಡಲಂ ಚಾರುಕಿರೀಟಭೂಷಣಂ
ಬಭೌ ಪೃಥಿವ್ಯಾಂ ಪತಿತಂ ಸಮುಜ್ಜ್ವಲತ್ ।
ಹಾ ಹೇತಿ ಸಾಧ್ವಿತ್ಯೃಷಯಃ ಸುರೇಶ್ವರಾ
ಮಾಲ್ಯೈರ್ಮುಕುಂದಂ ವಿಕಿರಂತ ಈಡಿರೇ ॥ ೨೨ ॥

ತತಶ್ಚ ಭೂಃ ಕೃಷ್ಣಮುಪೇತ್ಯ ಕುಂಡಲೇ
ಪ್ರತಪ್ತಜಾಂಬೂನದರತ್ನಭಾಸ್ವರೇ ।
ಸವೈಜಯಂತ್ಯಾ ವನಮಾಲಯಾರ್ಪಯತ್
ಪ್ರಾಚೇತಸಂ ಛತ್ರಮಥೋ ಮಹಾಮಣಿಮ್ ॥ ೨೩ ॥

ಅಸ್ತೌಷೀದಥ ವಿಶ್ವೇಶಂ ದೇವೀ ದೇವವರಾರ್ಚಿತಮ್ ।
ಪ್ರಾಂಜಲಿಃ ಪ್ರಣತಾ ರಾಜನ್ ಭಕ್ತಿಪ್ರವಣಯಾ ಧಿಯಾ ॥ ೨೪ ॥

ಇದಕ್ಕೆ ಪ್ರತಿಯಾಗಿ ಶ್ರೀಕೃಷ್ಣನೂ ಕೂಡ ಚಿತ್ರ-ವಿಚಿತ್ರವಾದ ಗರಿಕಟ್ಟಿದ ತೀಕ್ಷ್ಣವಾದ ಬಾಣಗಳನ್ನು ಪ್ರಯೋಗಿಸಿದನು. ಇವುಗಳಿಂದ ಆಗಲೇ ಭೌಮಾಸುರ ಸೈನಿಕರ ಭುಜಗಳು, ತೊಡೆಗಳು, ತಲೆಗಳು ಕತ್ತರಿಸಲ್ಪಟ್ಟು ತೊಪ-ತೊಪನೆ ನೆಲಕ್ಕುರುಳಿದವು ಮತ್ತು ಅಸಂಖ್ಯಾತವಾದ ಆನೆ, ಕುದುರೆಗಳೂ ಅಸುನೀಗಿದವು. ॥ ೧೬ ॥ ಪರೀಕ್ಷಿತನೇ! ನರಕಾಸುರನ ಸೈನಿಕರು ಭಗವಂತನ ಮೇಲೆ ಪ್ರಯೋಗಿಸಿದ ಅಸ್ತ್ರ-ಶಸ್ತ್ರಗಳೆಲ್ಲವನ್ನೂ ಶ್ರೀಕೃಷ್ಣನು ಮೂರು-ಮೂರು ಬಾಣಗಳಿಂದ ಕತ್ತರಿಸಿ ಹಾಕಿದನು. ॥ ೧೭ ॥ ಆ ಸಮಯದಲ್ಲಿ ಭಗವಾನ್ ಶ್ರೀಕೃಷ್ಣನು ಗರುಡಾರೂಢನಾಗಿದ್ದನು ಹಾಗೂ ಗರುಡನೂ ತನ್ನ ಬಲಿಷ್ಠವಾದ ರೆಕ್ಕೆಗಳಿಂದ ಗಜಸೈನ್ಯವನ್ನು ಬಡಿದು ಕೊಲ್ಲುತ್ತಿದ್ದನು. ಕೊಕ್ಕಿನಿಂದ ಕುಕ್ಕಿ, ಪಂಜಗಳಿಂದ, ರೆಕ್ಕೆಗಳಿಂದ ಪ್ರಹರಿಸುತ್ತಿದ್ದ ಏಟುಗಳನ್ನು ತಾಳಲಾರದೆ ಆನೆಗಳೆಲ್ಲವೂ ಸಂಕಟಪಡುತ್ತಾ, ಕಿರಿಚಿಕೊಳ್ಳುತ್ತಾ ಯುದ್ಧಭೂಮಿಯಿಂದ ಓಡಿಹೋಗಿ ನಗರವನ್ನು ಹೊಕ್ಕವು. ಆಗ ಭೌಮಾಸುರನು ಒಬ್ಬಂಟಿಗನಾಗಿ ಕಾದಾಡುತ್ತಿದ್ದನು. ಗರುಡನ ಏಟುಗಳಿಂದ ಪೀಡಿತವಾಗಿ ತನ್ನ ಸೇನೆಯು ಓಡುತ್ತಿರುವುದನ್ನು ಕಂಡು ನರಕನು ವಜ್ರಾಯುಧವನ್ನೂ ವಿಫಲಗೊಳಿಸಿದ ಭಾರೀ ಶಕ್ತಿಯೊಂದನ್ನು ಗರುಡನ ಮೇಲೆ ಪ್ರಯೋಗಿಸಿದನು. ಆದರೆ ಆ ಶಕ್ತಿಯಿಂದ ಗರುಡನು ಸ್ವಲ್ಪವೂ ವಿಚಲಿತನಾಗದೆ ಯಾರಾದರೂ ಆನೆಯನ್ನು ಹೂವಿನ ಹಾರದಿಂದ ಹೊಡೆದಂತೆ ನಿಶ್ಚಲನಾಗಿದ್ದನು. ॥ ೧೮-೨೦ ॥ ತಾನು ಪ್ರಯೋಗಿಸಿದ ಆಯುಧಗಳೆಲ್ಲವೂ ವ್ಯರ್ಥವಾಗಿ ಹೋಗುತ್ತಿರಲು ಅತಿಕ್ರುದ್ಧವಾದ ನರಕಾಸುರನು ಶ್ರೀಕೃಷ್ಣನನ್ನು ಕೊಂದುಹಾಕಲು ಒಂದು ತ್ರಿಶೂಲವನ್ನು ಎತ್ತಿಕೊಂಡನು. ಆದರೆ ಅದನ್ನು ಪ್ರಯೋಗಿಸಬೇಕೆನ್ನುಷ್ಟರಲ್ಲಿ ಭಗವಾನ್ ಶ್ರೀಕೃಷ್ಣನು ಖಡ್ಗದಂತೆ ಹರಿತವಾಗಿದ್ದ ಅಂಚುಳ್ಳ ಚಕ್ರಾಯುಧದಿಂದ ಗಜಾರೂಢನಾದ ಭೌಮಾಸುರನ ತಲೆಯನ್ನು ಕತ್ತರಿಸಿ ಹಾಕಿದನು. ॥ ೨೧ ॥ ಸುಂದರವಾದ ಕಿರೀಟ ಕುಂಡಲಗಳಿಂದ ಹೊಳೆಯುತ್ತಿದ್ದ ಅವನ ಶಿರಸ್ಸು ನೆಲಕ್ಕೆ ಉರುಳಿತು. ಅದನ್ನು ನೋಡಿದ ನರಕಾಸುರನ ಸಂಬಂಧಿಗಳು ಅಯ್ಯೋ! ನಮ್ಮ ಗತಿ ಏನು? ಎಂದು ಕಿರುಚಿಕೊಂಡರು. ಋಷಿ-ಮುನಿಗಳು ಸಾಧು! ಸಾಧು! ಎಂದು ಶ್ರೀಕೃಷ್ಣನನ್ನು ಪ್ರಶಂಸಿಸಿದರು. ದೇವತೆಗಳು ಅವನ ಮೇಲೆ ಪುಷ್ಪವೃಷ್ಟಿಯನ್ನು ಗರೆಯುತ್ತಾ ಸ್ತುತಿಸತೊಡಗಿದರು. ॥ ೨೨ ॥

ಬಳಿಕ ನರಕಾಸುರನ ತಾಯಿಯಾದ ಭೂದೇವಿಯು ಶ್ರೀಕೃಷ್ಣನ ಬಳಿಗೆ ಬಂದು ಅವನ ಕೊರಳಿಗೆ ವೈಜಯಂತಿ ಯೊಂದಿಗೆ ವನಮಾಲೆಯನ್ನು ತೊಡಿಸಿದಳು ಮತ್ತು ಪುಟಕ್ಕೆ ಹಾಕಿದ ಬಂಗಾರದಿಂದಲೂ ಶ್ರೇಷ್ಠವಾದ ರತ್ನಗಳಿಂದಲೂ ಬೆಳಗುತ್ತಿದ್ದ ಅದಿತಿಯ ಕುಂಡಲಗಳನ್ನು ಭಗವಂತನಿಗೆ ನೀಡಿದಳು. ಜೊತೆಗೆ ವರುಣನ ಛತ್ರವನ್ನೂ ಒಂದು ಮಹಾಮಣಿಯನ್ನು ಅರ್ಪಿಸಿದಳು. ॥ ೨೩ ॥ ರಾಜೇಂದ್ರನೇ! ಬಳಿಕ ಭೂದೇವಿಯು ದೇವಶ್ರೇಷ್ಠರಿಂದ ಅರ್ಚಿಸಲ್ಪಡುತ್ತಿದ್ದ ವಿಶ್ವೇಶನಾದ ಭಗವಾನ್ ಶ್ರೀಕೃಷ್ಣನಿಗೆ ಪ್ರಣಾಮಗೈದು, ಕೈಜೋಡಿಸಿಕೊಂಡು ಭಕ್ತಿಭಾವದಿಂದ ತುಂಬಿದ ಹೃದಯದಿಂದ ಸ್ತುತಿಸತೊಡಗಿದಳು. ॥ ೨೪ ॥

ಭೂಮಿರುವಾಚ

ನಮಸ್ತೇ ದೇವದೇವೇಶ ಶಂಖಚಕ್ರಗದಾಧರ ।
ಭಕ್ತೇಚ್ಛೋಪಾತ್ತರೂಪಾಯ ಪರಮಾತ್ಮನ್ ನಮೋಽಸ್ತು ತೇ ॥ ೨೫ ॥

ನಮಃ ಪಂಕಜನಾಭಾಯ ನಮಃ ಪಂಕಜಮಾಲಿನೇ ।
ನಮಃ ಪಂಕಜನೇತ್ರಾಯ ನಮಸ್ತೇ ಪಂಕಜಾಂಘ್ರಯೇ ॥ ೨೬ ॥

ನಮೋ ಭಗವತೇ ತುಭ್ಯಂ ವಾಸುದೇವಾಯ ವಿಷ್ಣವೇ ।
ಪುರುಷಾಯಾದಿಬೀಜಾಯ ಪೂರ್ಣಬೋಧಾಯ ತೇ ನಮಃ ॥ ೨೭ ॥

ಅಜಾಯ ಜನಯಿತ್ರೇಽಸ್ಯ ಬ್ರಹ್ಮಣೇಽನಂತಶಕ್ತಯೇ ।
ಪರಾವರಾತ್ಮನ್ ಭೂತಾತ್ಮನ್ ಪರಮಾತ್ಮನ್ ನಮೋಽಸ್ತು ತೇ ॥ ೨೮ ॥

ತ್ವಂ ವೈ ಸಿಸೃಕ್ಷೂ ರಜ ಉತ್ಕಟಂ ಪ್ರಭೋ
ತಮೋ ನಿರೋಧಾಯ ಬಿಭರ್ಷ್ಯಸಂವೃತಃ ।
ಸ್ಥಾನಾಯ ಸತ್ತ್ವಂ ಜಗತೋ ಜಗತ್ಪತೇ
ಕಾಲಃ ಪ್ರಧಾನಂ ಪುರುಷೋ ಭವಾನ್ಪರಃ ॥ ೨೯ ॥

ಅಹಂ ಪಯೋ ಜ್ಯೋತಿರಥಾನಿಲೋ ನಭೋ
ಮಾತ್ರಾಣಿ ದೇವಾ ಮನ ಇಂದ್ರಿಯಾಣಿ ।
ಕರ್ತಾ ಮಹಾನಿತ್ಯಖಿಲಂ ಚರಾಚರಂ
ತ್ವಯ್ಯದ್ವಿತೀಯೇ ಭಗವನ್ನಯಂ ಭ್ರಮಃ ॥ ೩೦ ॥

ತಸ್ಯಾತ್ಮಜೋಽಯಂ ತವ ಪಾದಪಂಕಜಂ
ಭೀತಃ ಪ್ರಪನ್ನಾರ್ತಿಹರೋಪಸಾದಿತಃ ।
ತತ್ಪಾಲಯೈನಂ ಕುರು ಹಸ್ತಪಂಕಜಂ
ಶಿರಸ್ಯಮುಷ್ಯಾಖಿಲಕಲ್ಮಷಾಪಹಮ್ ॥ ೩೧ ॥

**ಪೃಥಿವಿದೇವಿಯು ಹೇಳಿದಳು** – ಶಂಖಚಕ್ರಗದಾಧರನೇ! ದೇವದೇವೇಶ್ವರನೇ! ನಾನು ನಿನಗೆ ನಮಸ್ಕರಿಸುತ್ತೇನೆ. ಪರಮಾತ್ಮನೇ! ನೀನು ನಿನ್ನ ಭಕ್ತರ ಇಚ್ಛೆಯನ್ನು ಪೂರ್ಣಗೊಳಿಸಲು ಅದಕ್ಕನುಸಾರವಾಗಿ ರೂಪಗಳನ್ನು ಹೊಂದುವಂತಹ ನಿನಗೆ ನಮಸ್ಕರಿಸುತ್ತೇನೆ. ॥ ೨೫ ॥ ಪ್ರಭುವೇ! ನಿನ್ನ ನಾಭಿಯಿಂದ ಕಮಲವು ಪ್ರಕಟವಾಗಿದೆ. ನೀನು ಕಮಲದ ಮಾಲೆಯನ್ನು ಧರಿಸಿರುವೆ. ನಿನ್ನ ನೇತ್ರಗಳು ಕಮಲದಂತೆ ಅರಳಿ ಶಾಂತಿದಾಯಕಗಳಾಗಿವೆ. ನಿನ್ನ ಚರಣಗಳು ಕಮಲದಂತೆ ಸುಕೋಮಲ ಮತ್ತು ಭಕ್ತರ ಹೃದಯಗಳನ್ನು ಶೀತಲಗೊಳಿಸುವಂತಹುವುಗಳು. ಅಂತಹ ನಿನಗೆ ಪದೇ-ಪದೇ ನಮಸ್ಕರಿಸುತ್ತೇನೆ. ॥ ೨೬ ॥ ನೀನು ಸಮಗ್ರ ಐಶ್ವರ್ಯ, ಧರ್ಮ, ಯಶ, ಸಂಪತ್ತು, ಜ್ಞಾನ ಮತ್ತು ವೈರಾಗ್ಯ ಇವುಗಳಿಗೆ ಆಶ್ರಯನಾಗಿರುವೆ. ನೀನು ಸರ್ವವ್ಯಾಪಕನಾಗಿದ್ದರೂ ವಸುದೇವನ ನಂದನನಾಗಿ ಪ್ರಕಟನಾಗುವೆ. ನಾನು ನಿನಗೆ ನಮಸ್ಕರಿಸುತ್ತೇನೆ. ಪುರುಷೋತ್ತಮನಾಗಿರುವ, ಸಮಸ್ತ ಕಾರಣಗಳಿಗೂ ಪರಮಕಾರಣನಾದ, ಪೂರ್ಣಜ್ಞಾನಸ್ವರೂಪನಾದ ನಿನಗೆ ನಾನು ನಮಸ್ಕರಿಸುತ್ತೇನೆ. ॥ ೨೭ ॥ ನೀನು ಜನ್ಮರಹಿತನಾದರೂ ಈ ಜಗತ್ತಿಗೆ ಜನ್ಮದಾತನಾಗಿರುವೆ. ನೀನೇ ಅನಂತ ಶಕ್ತಿಗಳಿಗೆ ಆಶ್ರಯನಾದ ಪರಬ್ರಹ್ಮನಾಗಿರುವೆ. ಜಗತ್ತಿನಲ್ಲಿರುವ ಕಾರ್ಯ ಕಾರಣರೂಪಗಳೂ, ಚರಾಚರಗಳೆಲ್ಲವೂ ನಿನ್ನ ಸ್ವರೂಪವೇ ಆಗಿದೆ. ಪರಮಾತ್ಮನೇ! ನಿನಗೆ ಪುನಃ ಪುನಃ ನಮಸ್ಕಾರಗಳು. ॥ ೨೮ ॥ ಪ್ರಭುವೇ! ನೀನು ಜಗತ್ತನ್ನು ಸೃಷ್ಟಿಮಾಡಲು ಇಚ್ಛಿಸಿದಾಗ ಉತ್ಕಟವಾದ ರಜೋಗುಣವನ್ನು, ಅದನ್ನು ಪ್ರಳಯ ಮಾಡಲು ಬಯಸಿದಾಗ ತಮೋಗುಣವನ್ನು ಹಾಗೂ ಅದನ್ನು ಪಾಲಿಸಲು ಬಯಸಿದಾಗ ಸತ್ವಗುಣವನ್ನು ಸ್ವೀಕರಿಸುವೆ. ಆದರೆ ಇದೆಲ್ಲವನ್ನೂ ಮಾಡಿಯೂ ನೀನು ಗುಣಗಳಿಂದ ಲಿಪ್ತನಾಗುವುದಿಲ್ಲ. ಜಗತ್ಪತಿಯೇ! ನೀನು ಸಾಕ್ಷಾತ್ ಪ್ರಕೃತಿ, ಪುರುಷ ಮತ್ತು ಎರಡರ ಸಂಯೋಗ-ವಿಯೋಗಗಳಿಗೆ ಕಾರಣವಾದ ಕಾಲಸ್ವರೂಪನೂ ಆಗಿರುವೆ ; ಅವುಗಳಿಂದ ಬೇರೆಯೂ ಆಗಿರುವೆ. ॥ ೨೯ ॥ ಭಗವಂತ! ಭೂಮಿಯಾದ ನಾನು, ಜಲ, ಅಗ್ನಿ, ವಾಯು, ಆಕಾಶ, ಪಂಚತನ್ಮಾತ್ರೆಗಳು, ಮನಸ್ಸು, ಇಂದ್ರಿಯಗಳು ಮತ್ತು ಇವುಗಳ ಅಧಿಷ್ಠಾತೃ ದೇವತೆಗಳು, ಅಹಂಕಾರ, ಮಹತ್ತತ್ತ್ವ, ಸಮಸ್ತ ಚರಾಚರ ಜಗತ್ತು – ಇವೆಲ್ಲವೂ ಅದ್ವಿತೀಯನಾದ ನಿನ್ನಲ್ಲಿ ಭ್ರಾಂತಿಯಿಂದಾಗಿ ಪ್ರತ್ಯೇಕವಾಗಿ ಕಾಣುತ್ತದೆ. ಆದರೆ ವಸ್ತುತಃ ಇವೆಲ್ಲವೂ ನಿನ್ನ ಸ್ವರೂಪವೇ ಆಗಿದೆ. ॥ ೩೦ ॥ ಶರಣಾಗತ ಭಯಭಂಜನನಾದ ಪ್ರಭುವೇ! ನನ್ನ ಪುತ್ರನಾದ ಭೌಮಾಸುರನ ಮಗ ಭಗದತ್ತನು ಅತ್ಯಂತ ಭಯಗೊಂಡಿರುವನು. ನಾನು ಇವನನ್ನು ನಿನ್ನ ಚರಣಾರವಿಂದಗಳ ಆಶ್ರಯವನ್ನು ಬೇಡಲು ಕರೆತಂದಿರುವೆನು. ಪ್ರಭೋ! ನೀನು ಇವನನ್ನು ರಕ್ಷಿಸು ಮತ್ತು ಸಮಸ್ತ ಜಗತ್ತಿನ ಪಾಪ-ತಾಪಗಳನ್ನು ನಾಶಗೊಳಿಸುವಂತಹ ನಿನ್ನ ಕರಕಮಲವನ್ನು ಇವನ ತಲೆಯ ಮೇಲೆ ಇರಿಸು. ॥ ೩೧ ॥

*ಶ್ರೀಶುಕ ಉವಾಚ*

ಇತಿ ಭೂಮ್ಯಾರ್ಥಿತೋ ವಾಗ್ಭಿರ್ಭಗವಾನ್ ಭಕ್ತಿನಮ್ರಯಾ ।
ದತ್ತ್ವಾಭಯಂ ಭೌಮಗೃಹಂ ಪ್ರಾವಿಶತ್ ಸಕಲರ್ದ್ಧಿಮತ್ ॥ ೩೨ ॥

ತತ್ರ ರಾಜನ್ಯಕನ್ಯಾನಾಂ ಷಟ್ಸಹಸ್ರಾಧಿಕಾಯುತಮ್ ।
ಭೌಮಾಹೃತಾನಾಂ ವಿಕ್ರಮ್ಯ ರಾಜಭ್ಯೋ ದದೃಶೇ ಹರಿಃ ॥ ೩೩ ॥

ತಂ ಪ್ರವಿಷ್ಟಂ ಸ್ತ್ರಿಯೋ ವೀಕ್ಷ್ಯ ನರವೀರಂ ವಿಮೋಹಿತಾಃ ।
ಮನಸಾ ವವ್ರಿರೇಽಭೀಷ್ಟಂ ಪತಿಂ ದೈವೋಪಸಾದಿತಮ್ ॥ ೩೪ ॥

ಭೂಯಾತ್ ಪತಿರಯಂ ಮಹ್ಯಂ ಧಾತಾ ತದನುಮೋದತಾಮ್ ।
ಇತಿ ಸರ್ವಾಃ ಪೃಥಕ್ ಕೃಷ್ಣೇ ಭಾವೇನ ಹೃದಯಂ ದಧುಃ ॥ ೩೫ ॥

ತಾಃ ಪ್ರಾಹಿಣೋದ್ದ್ವಾರವತೀಂ ಸುಮೃಷ್ಟವಿರಜೋಽಂಬರಾಃ ।
ನರಯಾನೈರ್ಮಹಾಕೋಶಾನ್ ರಥಾಶ್ವಾನ್ ದ್ರವಿಣಂ ಮಹತ್ ॥ ೩೬ ॥

ಐರಾವತಕುಲೇಭಾಂಶ್ಚ ಚತುರ್ದಂತಾಂಸ್ತರಸ್ವಿನಃ ।
ಪಾಂಡುರಾಂಶ್ಚ ಚತುಃಷಷ್ಟಿಂ ಪ್ರೇಷಯಾಮಾಸ ಕೇಶವಃ ॥ ೩೭ ॥

ಗತ್ವಾ ಸುರೇಂದ್ರಭವನಂ ದತ್ತ್ವಾದಿತ್ಯೈ ಚ ಕುಂಡಲೇ ।
ಪೂಜಿತಸ್ತ್ರಿದಶೇಂದ್ರೇಣ ಸಹೇಂದ್ರಾಣ್ಯಾ ಚ ಸಪ್ರಿಯಃ ॥ ೩೮ ॥

ಚೋದಿತೋ ಭಾರ್ಯಯೋತ್ಪಾಟ್ಯ ಪಾರಿಜಾತಂ ಗರುತ್ಮತಿ ।
ಆರೋಪ್ಯ ಸೇಂದ್ರಾನ್ವಿಬುಧಾನ್ನಿರ್ಜಿತ್ಯೋಪಾನಯತ್ ಪುರಮ್ ॥ ೩೯ ॥

ಸ್ಥಾಪಿತಃ ಸತ್ಯಭಾಮಾಯಾ ಗೃಹೋದ್ಯಾನೋಪಶೋಭನಃ ।
ಅನ್ವಗುರ್ಭ್ರಮರಾಃ ಸ್ವರ್ಗಾತ್ ತದ್ಗಂಧಾಸವಲಂಪಟಾಃ ॥ ೪೦ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿತನೇ! ಭೂದೇವಿಯು ಭಕ್ತಿಭಾವದಿಂದ, ವಿನಮ್ರಳಾಗಿ ಹೀಗೆ ಭಗವಾನ್ ಶ್ರೀಕೃಷ್ಣನನ್ನು ಪ್ರಾರ್ಥಿಸಿದಾಗ ಅವನು ಭಗದತ್ತನಿಗೆ ಅಭಯ ದಾನವನ್ನು ಇತ್ತು ಭೌಮಾಸುರನ ಸಮಸ್ತ ಸಂಪತ್ಸಮೃದ್ಧವಾದ ಅರಮನೆಯನ್ನು ಪ್ರವೇಶಿದನು. ॥ ೩೨ ॥ ಭಗವಂತನು ಅಲ್ಲಿಗೆ ಹೋಗಿ ನೋಡಿದನು – ಭೌಮಾಸುರನು ಬಲಾತ್ಕಾರವಾಗಿ ರಾಜರಿಂದ ಹದಿನಾರು ಸಾವಿರ ರಾಜಕುಮಾರಿಯರನ್ನು ಅಪಹರಿಸಿ ತನ್ನಲ್ಲಿ ಇಟ್ಟುಕೊಂಡಿದ್ದನು. ॥ ೩೩ ॥ ಅಂತಃಪುರವನ್ನು ಪ್ರವೇಶಿಸಿದ ನರಶ್ರೇಷ್ಠನಾದ ಭಗವಾನ್ ಶ್ರೀಕೃಷ್ಣನನ್ನು ನೋಡಿದಾಗ ಆ ರಾಜಕುಮಾರಿಯರು ಮೋಹಿತರಾಗಿ ಭಗವಂತನ ಅಹೈತುಕವಾದ ದಯೆ ಮತ್ತು ತಮ್ಮ ಸೌಭಾಗ್ಯವೆಂದೇ ಭಾವಿಸಿ ಮನಸ್ಸಿನಲ್ಲಿಯೇ ಅವನನ್ನು ಪರಮಪ್ರಿಯತಮ ಪತಿಯ ರೂಪದಲ್ಲಿ ವರಿಸಿದರು. ॥ ೩೪ ॥ ಆ ರಾಜಕುಮಾರಿಯರಲ್ಲಿ ಪ್ರತಿಯೊಬ್ಬಳೂ ಬೇರೆ-ಬೇರೆಯಾಗಿ – 'ಈ ಶ್ರೀಕೃಷ್ಣನೇ ನನಗೆ ಪತಿಯಾಗಲಿ ಹಾಗೂ ವಿಧಾತನು ನನ್ನ ಈ ಅಭಿಲಾಷೆಯನ್ನು ಪೂರ್ಣಗೊಳಿಸಲಿ' ಎಂದು ಮನಸ್ಸಿನಲ್ಲೇ ನಿಶ್ಚಯಿಸಿ, ಅವರು ಪ್ರೇಮಭಾವದಿಂದ ತಮ್ಮ ಹೃದಯಗಳನ್ನು ಭಗವಂತನಿಗೆ ಅರ್ಪಿಸಿಬಿಟ್ಟರು. ॥ ೩೫ ॥ ಶ್ರೀಕೃಷ್ಣನು ಅವರೆಲ್ಲರಿಗೆ ಅಭಯವನ್ನಿತ್ತನು. ಸುಂದರವಾದ ವಸ್ತ್ರಾಭರಣಗಳಿಂದ ಸಮಲಂಕೃತೆಯರಾಗಿದ್ದ ಆ ರಾಜಕುಮಾರಿಯರನ್ನು ಪಲ್ಲಕ್ಕಿಗಳಲ್ಲಿ ಕುಳ್ಳಿರಿಸಿ ದ್ವಾರಕೆಗೆ ಕಳಿಸಿಕೊಟ್ಟನು. ಜೊತೆಗೆ ನರಾಕುಸರನಲ್ಲಿದ್ದ ಅತುಲವಾದ ಭಂಡಾರವನ್ನು, ರಥಾಶ್ವಗಳನ್ನೂ, ಐಶ್ವರ್ಯವನ್ನೂ ದ್ವಾರಕೆಗೆ ಕಳಿಸಿದನು.॥ ೩೬ ॥ ಐರಾವತದ ವಂಶದಲ್ಲಿ ಹುಟ್ಟಿದ, ಅತ್ಯಂತ ವೇಗವುಳ್ಳ, ನಾಲ್ಕು ನಾಲ್ಕು ದಂತಗಳುಳ್ಳ ಬಿಳಿಯ ಬಣ್ಣದ ಅರವತ್ತನಾಲ್ಕು ಆನೆಗಳನ್ನು ಭಗವಂತನು ಅಲ್ಲಿಂದ ದ್ವಾರಕೆಗೆ ಕಳಿಸಿದನು. ॥ ೩೭ ॥

ಅನಂತರ ಭಗವಾನ್ ಶ್ರೀಕೃಷ್ಣನು ಸತ್ಯಭಾಮೆಯೊಂದಿಗೆ ಅಮರಾವತಿಯಲ್ಲಿದ್ದ ದೇವೇಂದ್ರನ ಅರಮನೆಗೆ ಹೋದನು. ಅಲ್ಲಿ ಇಂದ್ರನು ತನ್ನ ಪತ್ನಿಯಾದ ಶಚಿದೇವಿಯೊಡನೆ ಸತ್ಯಭಾಮೆಯನ್ನೂ, ಭಗವಾನ್ ಶ್ರೀಕೃಷ್ಣನನ್ನು ಯಥೋಚಿತವಾಗಿ ಪೂಜಿಸಿದನು. ಬಳಿಕ ಭಗವಂತನು ಅದಿತಿಯ ಕುಂಡಲಗಳನ್ನು ಅವನಿಗೆ ಕೊಟ್ಟನು. ॥ ೩೮ ॥ ಅಲ್ಲಿಂದ ಮರಳುವಾಗ ಸತ್ಯಭಾಮೆಯ ಪ್ರೇರಣೆಯಂತೆ ಭಗವಾನ್ ಶ್ರೀಕೃಷ್ಣನು ನಂದನವನದ ಪಾರಿಜಾತವನ್ನು ಕಿತ್ತು ಗರುಡನ ಹೆಗಲೇರಿಸಿ, ದೇವೇಂದ್ರ ಹಾಗೂ ಸಮಸ್ತ ದೇವತೆಗಳನ್ನು ಜಯಿಸಿ ಅದನ್ನು ದ್ವಾರಕೆಗೆ ತೆಗೆದುಕೊಂಡು ಬಂದನು. ॥ ೩೯ ॥ ಭಗವಂತನು ಅದನ್ನು ಸತ್ಯಭಾಮೆಯ ಅರಮನೆಯ ಹೂದೋಟದಲ್ಲಿ ನೆಟ್ಟನು. ಇದರಿಂದ ಆ ಉದ್ಯಾನದ ಶೋಭೆಯು ಇನ್ನೂ ಹೆಚ್ಚಾಯಿತು. ಕಲ್ಪವೃಕ್ಷದೊಂದಿಗೆ ಅದರ ಹೂಗಳ ಮತ್ತು ಮಕರಂದದ ಲೋಭಿಗಳಾದ ದುಂಬಿಗಳು ಸ್ವರ್ಗದಿಂದ ದ್ವಾರಕೆಗೆ ಬಂದುಬಿಟ್ಟವು. ॥ ೪೦ ॥

ಪರೀಕ್ಷಿತನೇ! ಇಂದ್ರನು ಶ್ರೀಕೃಷ್ಣನಿಂದ ಯಾವುದಾದರೂ ಕೆಲಸವಾಗಬೇಕಾದಾಗ ಅವನು ತಲೆಯನ್ನು ತಗ್ಗಿಸಿ ಕಿರೀಟದ ತುದಿಯಿಂದ ಶ್ರೀಕೃಷ್ಣನ ಚರಣಗಳನ್ನು ಸ್ಪರ್ಶಿಸಿ ಅವನಲ್ಲಿ ಭಿಕ್ಷೆ

ಯಯಾಚ ಆನಮ್ಯ ಕಿರೀಟಕೋಟಿಭಿಃ
ಪಾದೌ ಸ್ಪೃಶನ್ನಚ್ಯುತಮರ್ಥಸಾಧನಮ್ ।
ಸಿದ್ಧಾರ್ಥ ಏತೇನ ವಿಗೃಹ್ಯತೇ ಮಹಾ-
ನಹೋ ಸುರಾಣಾಂ ಚ ತಮೋ ಧಿಗಾಢ್ಯತಾಮ್ ॥ ೪೧ ॥

ಅಥೋ ಮುಹೂರ್ತ ಏಕಸ್ಮಿನ್
ನಾನಾಗಾರೇಷು ತಾಃ ಸ್ತ್ರಿಯಃ ।
ಯಥೋಪಯೇಮೇ ಭಗವಾಂ-
ಸ್ತಾವದ್ರೂಪಧರೋಽವ್ಯಯಃ ॥ ೪೨ ॥

ಗೃಹೇಷು ತಾಸಾಮನಪಾಯ್ಯತರ್ಕ್ಯಕೃ-
ನ್ನಿರಸ್ತಸಾಮ್ಯಾತಿಶಯೇಷ್ವವಸ್ಥಿತಃ ।
ರೇಮೇ ರಮಾಭಿರ್ನಿಜಕಾಮಸಂಪ್ಲುತೋ
ಯಥೇತರೋ ಗಾರ್ಹಕಮೇಧಿಕಾಂಶ್ಚರನ್ ॥ ೪೩ ॥

ಇತ್ಥಂ ರಮಾಪತಿಮವಾಪ್ಯ ಪತಿಂ ಸ್ತ್ರಿಯಸ್ತಾ
ಬ್ರಹ್ಮಾದಯೋಽಪಿ ನ ವಿದುಃ ಪದವೀಂ ಯದೀಯಾಮ್ ।
ಭೇಜುರ್ಮುದಾವಿರತಮೇಧಿತಯಾನುರಾಗ-
ಹಾಸಾವಲೋಕನವಸಂಗಮಜಲ್ಪಲಜ್ಜಾಃ ॥ ೪೪ ॥

ಪ್ರತ್ಯುದ್ಗಮಾಸನವರಾರ್ಹಣಪಾದಶೌಚ-
ತಾಂಬೂಲವಿಶ್ರಮಣವೀಜನಗಂಧಮಾಲ್ಯೈಃ ।
ಕೇಶಪ್ರಸಾರಶಯನಸ್ನಪನೋಪಹಾರ್ಯೈ-
ರ್ದಾಸೀಶತಾ ಅಪಿ ವಿಭೋರ್ವಿದಧುಃ ಸ್ಮ ದಾಸ್ಯಮ್ ॥ ೪೫ ॥

ಬೇಡಿದ್ದನು. ಆದರೆ ಕೆಲಸವಾದಮೇಲೆ ಅವನು ಅದೇ ಶ್ರೀಕೃಷ್ಣನಲ್ಲಿ ಯುದ್ಧವನ್ನು ಮಾಡಲು ಹಿಂದು ಮುಂದು ನೋಡಲಿಲ್ಲ. ನಿಜವಾಗಿ ನೋಡಿದರೆ ಈ ದೇವತೆಗಳೂ ಕೂಡ ಭಾರೀ ತಮೋಗುಣಿಗಳು ಸ್ವಾರ್ಥಿಗಳು ಮತ್ತು ಅವರಲ್ಲಿರುವ ದೊಡ್ಡ ದೋಷವೆಂದರೆ ಧನಾಢ್ಯತೆ. ಇಂತಹ ಧನಾಢ್ಯತೆಗೆ ಧಿಕ್ಕಾರವಿರಲಿ. ॥ ೪೧ ॥

ಅನಂತರ ಭಗವಾನ್ ಶ್ರೀಕೃಷ್ಣನು ಒಂದೇ ಮುಹೂರ್ತದಲ್ಲಿ ಪ್ರತ್ಯೇಕ-ಪ್ರತ್ಯೇಕ ಭವನಗಳಲ್ಲಿ ಬೇರೆ-ಬೇರೆಯ ರಾಜಕನ್ಯೆಯರಿಗೆ ಅಭೀಷ್ಟವಾದ ಅಷ್ಟೂ ರೂಪಗಳನ್ನು ಧರಿಸಿಕೊಂಡು ಒಂದೇ ಬಾರಿಗೆ ಹದಿನಾರುಸಾವಿರ ಕನ್ಯೆಯರ ಪಾಣಿಗ್ರಹಣ ಮಾಡಿದನು. ಸರ್ವಶಕ್ತನಾದ ಅವಿನಾಶಿ ಭಗವಂತನ ವಿಷಯದಲ್ಲಿ ಆಶ್ಚರ್ಯದ ಮಾತೇನಿದೆ? ॥ ೪೨ ॥ ಭಗವಂತನ ಪತ್ನಿಯರ ಬೇರೆ-ಬೇರೆ ಭವನಗಳಲ್ಲಿ ಜಗತ್ತಿನಲ್ಲಿ ಅದಕ್ಕೆ ಸರಿಸಮಾನವಾದ ಯಾವುದೇ ಸಾಮಗ್ರಿಗಳೂ ಎಲ್ಲಿಯೂ, ಇಲ್ಲದಿರುವಂತಹ ದಿವ್ಯ ಸಾಮಗ್ರಿಗಳು ತುಂಬಿದ್ದವು. ಆ ಅರಮನೆಗಳಲ್ಲಿ ಇದ್ದುಕೊಂಡು ಮತಿಗೆ ನಿಲುಕದ ಲೀಲೆಯನ್ನು ತೋರುವ ಅವಿನಾಶಿ ಭಗವಾನ್ ಶ್ರೀಕೃಷ್ಣನು ಆತ್ಮಾನಂದದಲ್ಲಿ ಮಗ್ನನಾಗಿರುತ್ತಾ ಲಕ್ಷ್ಮೀದೇವಿಯ ಅಂಶರೂಪರಾದ ಆ ಪತ್ನಿಯರೊಂದಿಗೆ - ಸಾಧಾರಣ ಗೃಹಸ್ಥನಂತೆ ಗೃಹಸ್ಥ ಧರ್ಮಕ್ಕನುಸಾರ ಆಚರಣೆಗಳನ್ನು ಮಾಡುತ್ತಾ ವಿಹರಿಸುತ್ತಿದ್ದನು. ॥ ೪೩ ॥ ಪರೀಕ್ಷಿತನೇ! ಬ್ರಹ್ಮಾದಿ ಶ್ರೇಷ್ಠದೇವತೆಗಳೂ ಕೂಡ ಭಗವಂತನ ವಾಸ್ತವಿಕವಾದ ಸ್ವರೂಪವನ್ನು ಮತ್ತು ಅವನ ಪ್ರಾಪ್ತಿಯ ಮಾರ್ಗವನ್ನೂ ತಿಳಿಯುತ್ತಿಲ್ಲ. ಅಂತಹ ರಮಾರಮಣನಾದ ಭಗವಾನ್ ಶ್ರೀಕೃಷ್ಣನನ್ನು ಆ ಪತ್ನಿಯರು ಪತಿಯಾಗಿ ಪಡೆದುಕೊಂಡಿದ್ದರು. ಈಗ ನಿತ್ಯ-ನಿರಂತರ ಅವರ ಪ್ರೇಮಾನಂದಗಳು ಅಭಿವೃದ್ಧಿಯಾಗುತ್ತಿತ್ತು. ಅವರು ಪ್ರೇಮದಿಂದ ಕೂಡಿದ ಮಂದಹಾಸದಿಂದಲೂ ಮಧುರವಾದ ನೋಟದಿಂದಲೂ, ನೂತನ ಸಮಾಗಮ ದಿಂದಲೂ, ಪ್ರೇಮಾಲಾಪ ಹಾಗೂ ಪ್ರೇಮಭಾವವನ್ನು ಹೆಚ್ಚಿಸುವ ಲಜ್ಜೆಯಿಂದ ಕೂಡಿಕೊಂಡು ಎಲ್ಲ ಪ್ರಕಾರದಿಂದ ಭಗವಂತನ ಸೇವೆ ಮಾಡುತ್ತಿದ್ದರು. ॥ ೪೪ ॥ ಅವರಲ್ಲಿ ಎಲ್ಲ ಪತ್ನಿಯರೊಂದಿಗೂ ಸೇವೆ ಮಾಡುವ ಸಾವಿರಾರು ದಾಸಿಯರು ಇರುತ್ತಿದ್ದರು. ಹೀಗಿದ್ದರೂ ಅವರ ಅರಮನೆಗೆ ಭಗವಂತನು ದಯಮಾಡಿಸಿದಾಗ ಅವರು ಸ್ವತಃ ಮುಂದೆ ಬಂದು ಆದರದಿಂದ ಬರಮಾಡಿಕೊಂಡು ಶ್ರೇಷ್ಠ ಆಸನದಲ್ಲಿ ಕುಳ್ಳಿರಿಸಿ, ಉತ್ತಮ ಸಾಮಗ್ರಿಗಳಿಂದ ಪೂಜಿಸುವರು. ಚರಣಕಮಲಗಳನ್ನು ತೊಳೆದು ಸುವಾಸಿತವಾದ ತಾಂಬೂಲವನ್ನು ನೀಡುವರು. ಕಾಲೊತ್ತುತ್ತಾ ಬಳಲಿಕೆಯನ್ನು ದೂರಮಾಡುವರು. ಗಾಳಿ ಬೀಸುವರು, ಚಂದನ ಮುಂತಾದ ಪರಿಮಳ ದ್ರವ್ಯಗಳನ್ನು ಪೂಸುವರು. ಹೂವಿನ ಹಾರಗಳನ್ನು ತೊಡಿಸಿ, ಕೂದಲು ಸರಿಪಡಿಸುವರು. ಸ್ನಾನಮಾಡಿಸುವರು, ಮಲಗಿಸುವರು, ಬಗೆ-ಬಗೆಯ ಭೋಜನ ಮಾಡಿಸುವರು - ಹೀಗೆ ತಮ್ಮ ಕೈಗಳಿಂದಲೇ ಭಗವಂತನ ಸೇವೆ ಮಾಡುತ್ತಿದ್ದರು. ॥ ೪೫ ॥

ಐವತ್ತೊಂಭತ್ತನೆಯ ಅಧ್ಯಾಯವು ಮುಗಿಯಿತು. ॥ ೫೯ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಉತ್ತರಾರ್ಧೇ
ಪಾರಿಜಾತಹರಣನರಕವಧೋ ನಾಮೈಕೋನಷಷ್ಟಿತಮೋಽಧ್ಯಾಯಃ ॥ ೫೯ ॥

# ಅರವತ್ತನೆಯ ಅಧ್ಯಾಯ

## ಶ್ರೀಕೃಷ್ಣ-ರುಕ್ಮಿಣೀ-ಸಂವಾದ

ಶ್ರೀಶುಕ ಉವಾಚ

ಕರ್ಹಿಚಿತ್ ಸುಖಮಾಸೀನಂ ಸ್ವತಲ್ಪಸ್ಥಂ ಜಗದ್ಗುರುಮ್ ।
ಪತಿಂ ಪರ್ಯಚರದ್ಭೈಷ್ಮೀ ವ್ಯಜನೇನ ಸಖೀಜನೈಃ ॥ ೧ ॥

ಯಸ್ತ್ವೇತಲ್ಲೀಲಯಾ ವಿಶ್ವಂ ಸೃಜತ್ಯತ್ತ್ಯವತೀಶ್ವರಃ ।
ಸ ಹಿ ಜಾತಃ ಸ್ವಸೇತೂನಾಂ ಗೋಪೀಥಾಯ ಯದುಷ್ವಜಃ ॥ ೨ ॥

ತಸ್ಮಿನ್ನಂತರ್ಗೃಹೇ ಭ್ರಾಜನ್ಮುಕ್ತಾದಾಮವಿಲಂಬಿನಾ ।
ವಿರಾಜಿತೇ ವಿತಾನೇನ ದೀಪೈರ್ಮಣಿಮಯೈರಪಿ ॥ ೩ ॥

ಮಲ್ಲಿಕಾದಾಮಭಿಃ ಪುಷ್ಪೈರ್ದ್ವಿರೇಫಕುಲನಾದಿತೈಃ ।
ಜಾಲರಂಧ್ರಪ್ರವಿಷ್ಟೈಶ್ಚ ಗೋಭಿಶ್ಚಂದ್ರಮಸೋಽಮಲೈಃ ॥ ೪ ॥

ಪಾರಿಜಾತವನಾಮೋದವಾಯುನೋದ್ಯಾನಶಾಲಿನಾ ।
ಧೂಪೈರಗುರುಜೈ ರಾಜನ್ ಜಾಲರಂಧ್ರವಿನಿರ್ಗತೈಃ ॥ ೫ ॥

ಪಯಃಫೇನನಿಭೇ ಶುಭ್ರೇ ಪರ್ಯಂಕೇ ಕಶಿಪೂತ್ತಮೇ ।
ಉಪತಸ್ಥೇ ಸುಖಾಸೀನಂ ಜಗತಾಮೀಶ್ವರಂ ಪತಿಮ್ ॥ ೬ ॥

ಬಾಲವ್ಯಜನಮಾದಾಯ ರತ್ನದಂಡಂ ಸಖೀಕರಾತ್ ।
ತೇನ ವೀಜಯತೀ ದೇವೀ ಉಪಾಸಾಂಚಕ್ರ ಈಶ್ವರಮ್ ॥ ೭ ॥

ಸೋಪಾಚ್ಯುತಂ ಕ್ವಣಯತೀ ಮಣಿನೂಪುರಾಭ್ಯಾಂ
ರೇಜೇಽಂಗುಲೀಯವಲಯವ್ಯಜನಾಗ್ರಹಸ್ತಾ ।
ವಸ್ತ್ರಾಂತಗೂಢಕುಚಕುಂಕುಮಶೋಣಹಾರ-
ಭಾಸಾ ನಿತಂಬಧೃತಯಾ ಚ ಪರಾರ್ಧ್ಯಕಾಂಚ್ಯಾ ॥ ೮ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಎಲೈ ಪರೀಕ್ಷಿತನೇ! ಹೀಗೆ ಇರುತ್ತಿರಲಾಗಿ ಒಂದು ದಿನ ಸಮಸ್ತ ಜಗತ್ತಿಗೂ ಗುರುವಾದ ಭಗವಾನ್ ಶ್ರೀಕೃಷ್ಣನು ರುಕ್ಮಿಣಿಯ ಮಂಚದಮೇಲೆ ಸುಖವಾಗಿ ಕುಳಿತಿದ್ದನು. ರುಕ್ಮಿಣೀದೇವಿಯು ತನ್ನ ಸಖಿಯರೊಂದಿಗೆ ಸ್ವಾಮಿಗೆ ಗಾಳಿ ಬೀಸುತ್ತಾ ಉಪಚರಿಸುತ್ತಿದ್ದಳು. ॥ ೧ ॥ ಸರ್ವಶಕ್ತನಾದ ಭಗವಂತನು ಲೀಲೆಯಿಂದ ಈ ವಿಶ್ವವನ್ನು ಸೃಜಿಸಿ, ರಕ್ಷಿಸಿ, ಕಡೆಯಲ್ಲಿ ಪ್ರಳಯವನ್ನೂ ಮಾಡುವವನು. ಅಂತಹ ಹುಟ್ಟು ಸಾವುಗಳಿಲ್ಲದ ಪ್ರಭುವು ತಾನೇ ಕಲ್ಪಿಸಿದ ಧರ್ಮಮರ್ಯಾದೆಗಳ ರಕ್ಷಣೆಗಾಗಿ ಯದುವಂಶದಲ್ಲಿ ಅವತರಿಸಿದ್ದನು. ॥ ೨ ॥ ಪರೀಕ್ಷಿತನೇ! ರುಕ್ಮಿಣಿಯ ಆ ಅಂತಃಪುರವು ಬಹು ಸುಂದರವಾಗಿತ್ತು. ವಸ್ತ್ರಗಳಿಂದ ಕಲ್ಪಿಸಿದ್ದ ಮೇಲುಛಾವಣಿಯಲ್ಲಿ ಥಳ-ಥಳಿಸುವ ಮುತ್ತಿನ ಸರಗಳನ್ನು ತೂಗುಹಾಕಿದ್ದರು. ಮಣಿಮಯವಾದ ದೀಪಗಳು ಝಗ-ಝಗಿಸುತ್ತಿದ್ದವು. ॥ ೩ ॥ ದುಂಬಿಗಳ ನಿನಾದದಿಂದ ಕೂಡಿದ ಜಾಜಿ, ಮಲ್ಲಿಗೆ ಹೂವುಗಳ ಹಾರಗಳಿಂದಲೂ ಅಂತಃಪುರವು ಸಮಲಂಕೃತವಾಗಿತ್ತು. ಪೂರ್ಣಚಂದ್ರನ ಶುಭ್ರವಾದ ಕಿರಣಗಳು ಕಿಟಕಿಗಳ ಮೂಲಕವಾಗಿ ಅಂತಃಪುದಲ್ಲಿ ಹರಡಿದ್ದವು. ॥ ೪ ॥ ಉದ್ಯಾನದಲ್ಲಿ ಪಾರಿಜಾತ ಪುಷ್ಪಗಳ ಮೇಲೆ ಬೀಸಿದ ಸುಗಂಧಮಯ ಮಂದಾನಿಲವು ಎಲ್ಲೆಡೆ ಪಸರಿಸಿತ್ತು. ಅಗರು ಧೂಪಗಳ ಪರಿಮಳವು ಕಿಟಕಿಯ ರಂಧ್ರಗಳಿಂದ ಹೊರಗೆ ಹೋಗಿ ಹರಡುತ್ತಿತ್ತು. ॥ ೫ ॥ ಅಂತಹ ಅಂತಃಪುರದಲ್ಲಿ ಹಾಲಿನ ನೊರೆಯಂತೆ ಶುಭ್ರವಾದ ಹಂಸತೂಲಿಕಾತಲ್ಪದಲ್ಲಿ ಆನಂದ ತುಂದಿಲನಾಗಿ ಶ್ರೀಕೃಷ್ಣನು ವಿರಾಜಿಸುತ್ತಿದ್ದನು. ರುಕ್ಮಿಣೀದೇವಿಯು ತ್ರಿಲೋಕಾಧೀಶನನ್ನು ತನ್ನ ಪತಿಯನ್ನಾಗಿಸಿಕೊಂಡು ಅವನ ಸೇವೆ ಮಾಡುತ್ತಿದ್ದಳು. ॥ ೬ ॥ ಲಕ್ಷ್ಮೀಸ್ವರೂಪಿಣಿಯಾದ ರುಕ್ಮಿಣಿ ದೇವಿಯು ರತ್ನಖಚಿತವಾದ ಹಿಡಿಯುಳ್ಳ ಮನೋಹರವಾದ ಚಾಮರವನ್ನು ಸಖಿಯ ಕೈಯಿಂದ ತೆಗೆದುಕೊಂಡು ತಾನೇ ಶ್ರೀಕೃಷ್ಣನಿಗೆ ಬೀಸುತ್ತಾ ಅವನ ಸೇವೆಯನ್ನು ಮಾಡುತ್ತಿದ್ದಳು. ॥ ೭ ॥ ಆಕೆಯ ಕರಕಮಲಗಳಲ್ಲಿ ಕೈಗಡಗಗಳೂ, ಉಂಗುರಗಳೂ, ರತ್ನ ಖಚಿತ ಬಳೆಗಳೂ, ಚಾಮರವೂ ಶೋಭಿಸುತ್ತಿದ್ದವು. ಚರಣಗಳಲ್ಲಿ ಮಣಿಖಚಿತ ನೂಪುರಗಳು ಝಣ-ಝಣಿಸುತ್ತಿದ್ದವು. ಸೆರಗಿನಲ್ಲಿ ಅಡಗಿದ್ದ ಸ್ತನಗಳ ಕುಂಕುಮಕೇಸರದ ಬಣ್ಣದಿಂದ ಕೊರಳ ಹಾರಗಳು ಕೆಂಪಾಗಿ ಕಾಣುತ್ತಾ, ಚಾಮರ ಬೀಸುವಾಗ ಸ್ಪಂದಿಸುತ್ತಿದ್ದವು. ಸೊಂಟದಲ್ಲಿ ಧರಿಸಿದ್ದ ರತ್ನಖಚಿತವಾದ ಡಾಬಿನ ಸರಗಳು ನಿತಂಬಗಳ ಮೇಲೆ ಜೋಲಾಡುತ್ತಿದ್ದವು. ಹೀಗೆ ಆಕೆಯು ಭಗವಂತನ ಬಳಿಯಲ್ಲೇ ಇದ್ದು ಅವನ ಸೇವೆಯಲ್ಲಿ ತಲ್ಲೀನಳಾಗಿದ್ದಳು. ॥ ೮ ॥

ತಾಂ ರೂಪಿಣೀಂ ಶ್ರಿಯಮನನ್ಯಗತಿಂ ನಿರೀಕ್ಷ್ಯ
ಯಾ ಲೀಲಯಾ ಧೃತತನೋರನುರೂಪರೂಪಾ ।
ಪ್ರೀತಃ ಸ್ಮಯನ್ನಲಕಕುಂಡಲನಿಷ್ಕಕಂಠ-
ವಕ್ತ್ರೋಲ್ಲಸತ್ಸ್ಮಿತಸುಧಾಂ ಹರಿರಾಬಭಾಷೇ ॥ ೯ ॥

ಲೀಲೆಗಾಗಿ ಮನುಷ್ಯರೂಪವನ್ನು ಧರಿಸಿ ಬಂದಿರುವ ತನಗೆ ಅನುರೂಪಳಾಗಿರುವ, ಅನನ್ಯ ಶರಣಾಗಿರುವ, ಕಡು ಚೆಲುವೆಯಾದ, ಲಕ್ಷ್ಮಿಯ ಸ್ವರೂಪಳೇ ಆಗಿರುವ, ಮುಂಗುರುಳುಗಳಿಂದಲೂ, ಕುಂಡಲಗಳಿಂದಲೂ, ಕನಕಹಾರಗಳಿಂದಲೂ ವಿರಾಜಿಸುತ್ತಿದ್ದ ಮುಖದಲ್ಲಿ ಮಂದಹಾಸವೆಂಬ ಅಮೃತವನ್ನು ಸುರಿಸುತ್ತಿರುವ ರುಕ್ಮಿಣೀದೇವಿಯನ್ನು ನೋಡಿ ಸುಪ್ರೀತನಾದ ಶ್ರೀಹರಿಯು ಅವಳಲ್ಲಿ ಇಂತೆಂದನು - ॥ ೯ ॥

ಶ್ರೀಭಗವಾನುವಾಚ

ರಾಜಪುತ್ರೀಪ್ಸಿತಾ ಭೂಪೈರ್ಲೋಕಪಾಲವಿಭೂತಿಭಿಃ ।
ಮಹಾನುಭಾವೈಃ ಶ್ರೀಮದ್ಭಿ ರೂಪೌದಾರ್ಯಬಲೋರ್ಜಿತೈಃ
॥ ೧೦ ॥

ತಾನ್ ಪ್ರಾಪ್ತಾನರ್ಥಿನೋ ಹಿತ್ವಾ
ಚೈದ್ಯಾದೀನ್ಸ್ಮರದುರ್ಮದಾನ್ ।
ದತ್ತಾ ಭ್ರಾತ್ರಾ ಸ್ವಪಿತ್ರಾ ಚ
ಕಸ್ಮಾನ್ನೋ ವವೃಷೇಽಸಮಾನ್ ॥ ೧೧ ॥

ರಾಜಭ್ಯೋ ಬಿಭ್ಯತಃ ಸುಭ್ರೂಃ ಸಮುದ್ರಂ ಶರಣಂ ಗತಾನ್ ।
ಬಲವದ್ಭಿಃ ಕೃತದ್ವೇಷಾನ್ಪ್ರಾಯಸ್ತ್ಯಕ್ತನೃಪಾಸನಾನ್
॥ ೧೨ ॥

ಅಸ್ಪಷ್ಟವರ್ತ್ಮನಾಂ ಪುಂಸಾಮಲೋಕಪಥಮೀಯುಷಾಮ್ ।
ಆಸ್ಥಿತಾಃ ಪದವೀಂ ಸುಭ್ರೂಃ ಪ್ರಾಯಃ ಸೀದಂತಿ ಯೋಷಿತಃ
॥ ೧೩ ॥

ನಿಷ್ಕಿಂಚನಾ ವಯಂ ಶಶ್ವನ್ನಿಷ್ಕಿಂಚನಜನಪ್ರಿಯಾಃ ।
ತಸ್ಮಾತ್ ಪ್ರಾಯೇಣ ನ ಹ್ಯಾಢ್ಯಾ ಮಾಂ ಭಜಂತಿ ಸುಮಧ್ಯಮೇ
॥ ೧೪ ॥

ಯಯೋರಾತ್ಮಸಮಂ ವಿತ್ತಂ ಜನ್ಮೈಶ್ವರ್ಯಾಕೃತಿರ್ಭವಃ ।
ತಯೋರ್ವಿವಾಹೋ ಮೈತ್ರೀ ಚ ನೋತ್ತಮಾಧಮಯೋಃ ಕ್ವಚಿತ್
॥ ೧೫ ॥

ವೈದರ್ಭ್ಯೇತದವಿಜ್ಞಾಯ ತ್ವಯಾದೀರ್ಘಸಮೀಕ್ಷಯಾ ।
ವೃತಾ ವಯಂ ಗುಣೈರ್ಹೀನಾ ಭಿಕ್ಷುಭಿಃ ಶ್ಲಾಘಿತಾ ಮುಧಾ
॥ ೧೬ ॥

ಅಥಾತ್ಮನೋಽನುರೂಪಂ ವೈ ಭಜಸ್ವ ಕ್ಷತ್ರಿಯರ್ಷಭಮ್ ।
ಯೇನ ತ್ವಮಾಶಿಷಃ ಸತ್ಯಾ ಇಹಾಮುತ್ರ ಚ ಲಪ್ಸ್ಯಸೇ
॥ ೧೭ ॥

ಚೈದ್ಯಶಾಲ್ವಜರಾಸಂಧದಂತವಕ್ತ್ರಾದಯೋ ನೃಪಾಃ ।
ಮಮ ದ್ವಿಷಂತಿ ವಾಮೋರು ರುಕ್ಮೀ ಚಾಪಿ ತವಾಗ್ರಜಃ
॥ ೧೮ ॥

**ಭಗವಾನ್ ಶ್ರೀಕೃಷ್ಣನು ಹೇಳಿದನು** - ರಾಜಕುಮಾರಿ! ಐಶ್ವರ್ಯದಲ್ಲಿ ಲೋಕಪಾಲರಂತಿದ್ದ, ಹೆಚ್ಚು ಪ್ರಭಾವಶಾಲಿಗಳಾಗಿದ್ದ, ಶ್ರೀಮಂತರಾಗಿದ್ದ, ರೂಪ-ಔದಾರ್ಯ-ಬಲದಲ್ಲಿ ಅಧಿಕರಾಗಿದ್ದ ಹಲವಾರು ರಾಜರು ನಿನ್ನನ್ನು ವಿವಾಹವಾಗಲು ಅಪೇಕ್ಷಿಸಿದ್ದರು. ॥ ೧೦ ॥ ನಿನ್ನ ತಂದೆ ಮತ್ತು ಅಣ್ಣಂದಿರು ಶಿಶುಪಾಲನೊಂದಿಗೆ ನಿನ್ನ ಮದುವೆಮಾಡುವುದಾಗಿ ವಾಗ್ದಾನವನ್ನೂ ಮಾಡಿದ್ದರು. ಕಾಮೋನ್ಮತ್ತರಾದ ಶಿಶುಪಾಲನೇ ಮೊದಲಾದವರು ನಿನ್ನನ್ನು ಯಾಚಿಸಲೂ ಬಂದಿದ್ದರು. ಅಂತಹವರೆಲ್ಲರನ್ನು ತ್ಯಜಿಸಿ, ನಿನಗೆ ಸರಿದೂಗದಿರುವ ನನ್ನನ್ನೇಕೆ ನೀನು ಮದುವೆಯಾದೆ? ಸುಂದರಿ! ನೋಡು, ಜರಾಸಂಧನೇ ಮೊದಲಾದ ಶತ್ರುರಾಜರಿಗೆ ಹೆದರಿ ನಾವು ಸಮುದ್ರದಲ್ಲಿ ಮನೆಮಾಡಿಕೊಂಡು ಇದ್ದೇವೆ. ಬಲಿಷ್ಠರೊಡನೆ ನಾವು ವೈರವನ್ನು ಕಟ್ಟಿಕೊಂಡಿದ್ದೇವೆ. ಮೇಲಾಗಿ ನಾವು ರಾಜಸಿಂಹಾಸನದ ಅಧಿಕಾರದಿಂದಲೂ ವಂಚಿತರಾಗಿದ್ದೇವೆ. ॥ ೧೨ ॥ ಸುಂದರಿಯೇ! ಅಸ್ಪಷ್ಟಮಾರ್ಗವುಳ್ಳ, ಲೋಕದ ಜನರ ಮಾರ್ಗವನ್ನು ಅನುಸರಿಸದೆ, ವಿಲಕ್ಷಣವಾದ ಮಾರ್ಗವನ್ನು ಹಿಡಿದಿರುವ ನಮ್ಮಂತಹ ಪುರುಷರ ಮಾರ್ಗವನ್ನು ಹಿಡಿದ ಸ್ತ್ರೀಯರು ಪ್ರಾಯಶಃ ಕಷ್ಟಕ್ಕೆ ಒಳಗಾಗುತ್ತಾರೆ. ॥ ೧೩ ॥ ಸುಂದರಳೇ! ನಾವು ಯಾವಾಗಲೂ ಯಾವುದೇ ಕಾಮನೆ ಇಲ್ಲದವರು ಆದುದರಿಂದ ನಮಗೆ ಅಂಥ ನಿಷ್ಕಂಚನರನ್ನು ಕಂಡರೆ ಬಹಳ ಪ್ರೀತಿ. ಈ ಕಾರಣದಿಂದಲೇ ಪ್ರಾಯಶಃ ಧನಿಕರಾದವರು ನನ್ನನ್ನು ಆಶ್ರಯಿಸುವುದಿಲ್ಲ. ॥ ೧೪ ॥ ಧನ, ಕುಲ, ಐಶ್ವರ್ಯ, ಸೌಂದರ್ಯ, ಆದಾಯ - ಇವುಗಳಲ್ಲಿ ತಮಗೆ ಸಮಾನರಾದವರೊಂದಿಗೆ ವಿವಾಹ ಮತ್ತು ಮೈತ್ರಿಯ ಸಂಬಂಧವನ್ನು ಬೆಳೆಸಬೇಕು. ತನ್ನಿಂದ ಶ್ರೇಷ್ಠ ಅಥವಾ ಕನಿಷ್ಠರೊಂದಿಗೆ ಸಂಬಂಧ ಬೆಳೆಸಬಾರದು. ॥ ೧೫ ॥ ವಿದರ್ಭರಾಜಕುಮಾರೀ! ನೀನು ದೂರದೃಷ್ಟಿಯಿಲ್ಲದೆ ಈ ವಿಷಯಗಳ ಕುರಿತು ವಿಚಾರಮಾಡಲಿಲ್ಲ. ಏನೂ ತಿಳಿಯದ ಭಿಕ್ಷುಕರಿಂದ ನನ್ನ ಪ್ರಶಂಸೆಯನ್ನು ಕೇಳಿ, ಗುಣಹೀನನಾದ ನನ್ನನ್ನು ವರಿಸಿದೆ. ॥ ೧೬ ॥ ದೇವಿ! ಈಗಲೂ ಕಾಲಮಿಂಚಿ ಹೋಗಿಲ್ಲ. ನೀನು ನಿನಗೆ ಅನುರೂಪನಾದ, ಶ್ರೇಷ್ಠನಾದ ಕ್ಷತ್ರಿಯ ಕುಮಾರನನ್ನು ಈಗಲೂ ವರಿಸಬಹುದು. ಇದರಿಂದ ಇಹಲೋಕ-ಪರಲೋಕಗಳ ಸಮಸ್ತ ಆಸೆ-ಆಕಾಂಕ್ಷೆಗಳು ಈಡೇರುತ್ತವೆ. ॥ ೧೭ ॥ ಸುಂದರೀ! ಶಿಶುಪಾಲ, ಶಾಲ್ವ, ಜರಾಸಂಧ, ದಂತವಕ್ತ್ರ ಮುಂತಾದ ರಾಜರು ಮತ್ತು ನಿಮ್ಮಣ್ಣ ರುಕ್ಮಿಯೂ ಸದಾಕಾಲ ನನ್ನನ್ನು ದ್ವೇಷಿಸುತ್ತಾರೆ - ಇದು ನಿನಗೆ ತಿಳಿದೇ ಇದೆ. ॥ ೧೮ ॥

ತೇಷಾಂ ವೀರ್ಯಮದಾಂಧಾನಾಂ ದೃಪ್ತಾನಾಂ ಸ್ಮಯನುತ್ತಯೇ ।
ಆನೀತಾಸಿ ಮಯಾ ಭದ್ರೇ ತೇಜೋಽಪಹರತಾ ಸತಾಮ್
॥ ೧೯ ॥

ಉದಾಸೀನಾ ವಯಂ ನೂನಂ ನ ಸ್ತ್ರ್ಯಪತ್ಯಾರ್ಥಕಾಮುಕಾಃ ।
ಆತ್ಮಲಬ್ಧ್ಯಾಸ್ಮಹೇ ಪೂರ್ಣಾ ಗೇಹಯೋರ್ಜ್ಯೋತಿರಕ್ರಿಯಾಃ
॥ ೨೦ ॥

*ಶ್ರೀಶುಕ ಉವಾಚ*

ಏತಾವದುಕ್ತ್ವಾ ಭಗವಾನಾತ್ಮಾನಂ ವಲ್ಲಭಾಮಿವ ।
ಮನ್ಯಮಾನಾಮವಿಶ್ಲೇಷಾತ್ ತದ್ದರ್ಪಘ್ನ ಉಪಾರಮತ್
॥ ೨೧ ॥

ಇತಿ ತ್ರಿಲೋಕೇಶಪತೇಸ್ತದಾಽಽತ್ಮನಃ
ಪ್ರಿಯಸ್ಯ ದೇವ್ಯಶ್ರುತಪೂರ್ವಮಪ್ರಿಯಮ್ ।
ಆಶ್ರುತ್ಯ ಭೀತಾ ಹೃದಿ ಜಾತವೇಪಥುಃ
ಚಿಂತಾಂ ದುರಂತಾಂ ರುದತೀ ಜಗಾಮ ಹ ॥ ೨೨ ॥

ಪದಾ ಸುಜಾತೇನ ನಖಾರುಣಶ್ರಿಯಾ
ಭುವಂ ಲಿಖಂತ್ಯಶ್ರುಭಿರಂಜನಾಸಿತೈಃ ।
ಆಸಿಂಚತೀ ಕುಂಕುಮರೂಷಿತೌ ಸ್ತನೌ
ತಸ್ಥಾವಧೋಮುಖ್ಯತಿದುಃಖರುದ್ಧವಾಕ್ ॥ ೨೩ ॥

ತಸ್ಯಾಃ ಸುದುಃಖಭಯಶೋಕವಿನಷ್ಟಬುದ್ಧೇ-
ರ್ಹಸ್ತಾಚ್ಛ್ಲಥದ್ವಲಯತೋ ವ್ಯಜನಂ ಪಪಾತ ।
ದೇಹಶ್ಚ ವಿಕ್ಲವಧಿಯಃ ಸಹಸೈವ ಮುಹ್ಯನ್
ರಂಭೇವ ವಾಯುವಿಹತಾ ಪ್ರವಿಕೀರ್ಯ ಕೇಶಾನ್ ॥ ೨೪ ॥

ತದ್ದೃಷ್ಟ್ವಾ ಭಗವಾನ್ ಕೃಷ್ಣಃ ಪ್ರಿಯಾಯಾಃ ಪ್ರೇಮಬಂಧನಮ್ ।
ಹಾಸ್ಯಪ್ರೌಢಿಮಜಾನಂತ್ಯಾಃ ಕರುಣಃ ಸೋಽನ್ವಕಂಪತ
॥ ೨೫ ॥

ಪರ್ಯಂಕಾದವರುಹ್ಯಾಶು ತಾಮುತ್ಥಾಪ್ಯ ಚತುರ್ಭುಜಃ ।
ಕೇಶಾನ್ ಸಮುಹ್ಯ ತದ್ವಕ್ತ್ರಂ ಪ್ರಾಮೃಜತ್ ಪದ್ಮಪಾಣಿನಾ
॥ ೨೬ ॥

ಕಲ್ಯಾಣೀ! ಅವರೆಲ್ಲರೂ ಬಲ-ಪರಾಕ್ರಮದ ಮದದಿಂದ ಕುರುಡರಾಗಿದ್ದರು. ತಮ್ಮ ಮುಂದೆ ಯಾರನ್ನೂ ಲೆಕ್ಕಿಸುತ್ತಿರಲಿಲ್ಲ. ಅಂತಹ ದುಷ್ಟರ ಗರ್ವವನ್ನೂ ಮುರಿಯಲಿಕ್ಕಾಗಿಯೇ ನಾನು ನಿನ್ನನ್ನು ಅಪಹರಿಸಿ ತಂದಿರುವೆನು. ಇದಲ್ಲದೆ ಬೇರೆ ಯಾವ ಕಾರಣವೂ ಇಲ್ಲ. ॥ ೧೯ ॥ ನಿಶ್ಚಯವಾಗಿಯೂ ನಾವು ಉದಾಸೀನರು. ನಮಗೆ ಪತ್ನೀ-ಪುತ್ರರಲ್ಲಾಗಲೀ, ಧನದಲ್ಲಾಗಲೀ ಲಾಲಸೆಯಿಲ್ಲ. ಪತ್ನೀ-ಪುತ್ರರನ್ನು ಪಡೆಯಬೇಕೆಂಬ ಕಾಮನೆಯೂ ಇಲ್ಲ. ಈ ಮನೆಯಲ್ಲಿಯೂ, ದೇಹದಲ್ಲಿಯೂ ದೀಪಶಿಖೆಯಂತೆ ಸಾಕ್ಷಿಭೂತರಾಗಿ ನಿಷ್ಕ್ರಿಯರಾಗಿ ಕುಳಿತಿದ್ದೇವೆ. ಆತ್ಮಸಾಕ್ಷಾತ್ಕಾರವನ್ನು ಪಡೆದು ಪೂರ್ಣಕಾಮರಾಗಿ ಕೃತಕೃತರಾಗಿದ್ದೇವೆ. ॥ ೨೦ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** - ಪರೀಕ್ಷಿತನೇ! ಭಗವಾನ್ ಶ್ರೀಕೃಷ್ಣನನ್ನು ಅರೆಕ್ಷಣವೂ ಬಿಟ್ಟಿರಲಾರದೇ ಇರುವ ರುಕ್ಮಿಣಿಯಲ್ಲಿ - ನಾನು ಎಲ್ಲರಿಗಿಂತ ಹೆಚ್ಚು ನನ್ನ ಇನಿಯನಿಗೆ ಪ್ರಿಯಳಾಗಿದ್ದೇನೆ' ಎಂಬ ಅಭಿಮಾನ ಉಂಟಾಗಿತ್ತು. ಇಂತಹ ಗರ್ವವನ್ನು ಕಳೆಯಲಿಕ್ಕಾಗಿಯೇ ಭಗವಂತನು ಇಷ್ಟನ್ನು ಹೇಳಿ ಸುಮ್ಮನಾದನು. ॥ ೨೧ ॥ ರಾಜೇಂದ್ರನೇ! ರುಕ್ಮಿಣೀದೇವಿಯು ತನ್ನ ಪರಮ ಪ್ರಿಯತಮನೂ, ತ್ರೈಲೋಕ್ಯನಾಥನೂ ಆದ ಭಗವಂತನ ಇಂತಹ ಅಪ್ರಿಯವಾದ ಮಾತನ್ನು ಹಿಂದೆ ಎಂದೂ ಕೇಳಿರಲಿಲ್ಲ. ಇಂದು ಕೇಳಿದಾಗ ಅತ್ಯಂತ ಭಯಗೊಂಡಳು. ಹೃದಯವು ನಡುಗತೊಡಗಿತು. ಬಿಕ್ಕಿ-ಬಿಕ್ಕಿ ಅಳುತ್ತಾ ಅಗಾಧವಾದ ಚಿಂತಾಸಾಗರದಲ್ಲಿ ಮುಳುಗಿಹೋದಳು. ॥ ೨೨ ॥ ಆಕೆಯು ಕಮಲದಂತೆ ಕೋಮಲವಾದ ಹಾಗೂ ನಸುಗೆಂಪಾದ ಉಗುರುಗಳುಳ್ಳ ಪಾದದಿಂದ ನೆಲವನ್ನು ಕೆರೆಯುತ್ತಾ, ಕಾಡಿಗೆಯಿಂದ ಕಪ್ಪಾದ ಕಣ್ಣೀರಿನಿಂದ ಕುಂಕುಮಾಂಕಿತವಾದ ಸ್ತನಗಳನ್ನು ನೆನೆಸುತ್ತಾ, ತಲೆಯನ್ನು ತಗ್ಗಿಸಿ ನಿಂತಿದ್ದಳು. ಅತೀವ ದುಃಖದಿಂದಾಗಿ ಆಕೆಯ ಕಂಠವು ಬಿಗಿದು ಮಾತುನಿಂತು ಹೋಗಿತ್ತು. ॥ ೨೩ ॥ ಅತ್ಯಂತ ವ್ಯಥೆ, ಭಯ, ಶೋಕದ ಕಾರಣಗಳಿಂದಾಗಿ ವಿಚಾರಶಕ್ತಿಯು ಲುಪ್ತವಾಗಿತ್ತು. ಪತಿಯ ವಿಯೋಗವು ಸಂಭವಿಸಬಹುದೆಂಬ ಕಾರಣದಿಂದ ಕ್ಷಣಮಾತ್ರದಲ್ಲಿ ಕೃಶಳಾಗಿ, ಕೈಯ, ಕಂಕಣಗಳು ಉದುರಿಹೋದವು. ಹಿಡಿದಿದ್ದ ಚಾಮರವು ಕೈಯಿಂದ ಜಾರಿತು. ತಲೆಯು ಕೆದರಿತ್ತು. ಕಳವಳಗೊಂಡ ಬುದ್ಧಿಯಿಂದ ಕೂಡಿದ್ದ ದೇಹವು ಬಿರುಗಾಳಿಗೆ ಸಿಕ್ಕಿದ ಬಾಳೆಯಗಿಡವು ಬುಡಮೇಲಾಗಿ ಬೀಳುವಂತೆ ಪ್ರಜ್ಞಾಹೀನಳಾಗಿ ನೆಲಕ್ಕುರುಳಿದಳು. ॥ ೨೪ ॥ ಹಾಸ್ಯದ ಹಿರಿಮೆಯನ್ನರಿಯದ ಪ್ರೇಯಸಿಯ ಪ್ರೇಮಪಾಶದ ದಾರ್ಢ್ಯವನ್ನು ಕಂಡು ಪರಮ ಕಾರುಣಿಕನಾದ ಭಗವಾನ್ ಶ್ರೀಕೃಷ್ಣನ ಹೃದಯವು ರುಕ್ಮಿಣಿಯ ಕುರಿತು ಕರುಣೆಯಿಂದ ತುಂಬಿಹೋಯಿತು. ॥ ೨೫ ॥ ಮರುಕ್ಷಣದಲ್ಲೇ ಮಂಚದಿಂದ ಕೆಳಗಿಳಿದು ತನ್ನ ನಾಲ್ಕು ಕೈಗಳಿಂದಲೂ ಪ್ರೇಯಸಿಯನ್ನು ಹಿಡಿದೆತ್ತಿ ಕೆದರಿಹೋಗಿದ್ದ ಆಕೆಯ ಕೇಶಪಾಶಗಳನ್ನು ಸರಿಪಡಿಸಿ ತನ್ನ ಶೀತಲವಾದ ಕರಕಮಲಗಳಿಂದ ಆಕೆಯ ಮುಖವನ್ನು ನೇವರಿಸಿದನು. ॥ ೨೬ ॥

ಪ್ರಮೃಜ್ಯಾಶ್ರುಕಲೇ ನೇತ್ರೇ ಸ್ತನೌ ಚೋಪಹತೌ ಶುಚಾ ।
ಆಶ್ಲಿಷ್ಯ ಬಾಹುನಾ ರಾಜನ್ನನನ್ಯವಿಷಯಾಂ ಸತೀಮ್
॥ ೨೭ ॥

ಸಾಂತ್ವಯಾಮಾಸ ಸಾಂತ್ವಜ್ಞಃ ಕೃಪಯಾ ಕೃಪಣಾಂ ಪ್ರಭುಃ ।
ಹಾಸ್ಯಪ್ರೌಢಿಭ್ರಮಚ್ಚಿತ್ತಾಮತದರ್ಹಾಂ ಸತಾಂ ಗತಿಃ
॥ ೨೮ ॥

ಶ್ರೀಭಗವಾನುವಾಚ

ಮಾ ಮಾ ವೈದರ್ಭ್ಯಸೂಯೇಥಾ
ಜಾನೇ ತ್ವಾಂ ಮತ್ಪರಾಯಣಾಮ್ ।
ತ್ವದ್ವಚಃ ಶ್ರೋತುಕಾಮೇನ
ಕ್ಷ್ವೇಲ್ಯಾಽಽಚರಿತಮಂಗನೇ ॥ ೨೯ ॥

ಮುಖಂ ಚ ಪ್ರೇಮಸಂರಂಭಸ್ಫುರಿತಾಧರಮೀಕ್ಷಿತುಮ್ ।
ಕಟಾಕ್ಷೇಪಾರುಣಾಪಾಂಗಂ ಸುಂದರಭ್ರುಕುಟೀತಟಮ್
॥ ೩೦ ॥

ಅಯಂ ಹಿ ಪರಮೋ ಲಾಭೋ
ಗೃಹೇಷು ಗೃಹಮೇಧಿನಾಮ್ ।
ಯನ್ನರ್ಮೈರೀಯತೇ ಯಾಮಃ
ಪ್ರಿಯಯಾ ಭೀರು ಭಾಮಿನಿ ॥ ೩೧ ॥

ಶ್ರೀಶುಕ ಉವಾಚ

ಸೈವಂ ಭಗವತಾ ರಾಜನ್ ವೈದರ್ಭೀ ಪರಿಸಾಂತ್ವಿತಾ ।
ಜ್ಞಾತ್ವಾ ತತ್ಪರಿಹಾಸೋಕ್ತಿಂ ಪ್ರಿಯತ್ಯಾಗಭಯಂ ಜಹೌ
॥ ೩೨ ॥

ಬಭಾಷ ಋಷಭಂ ಪುಂಸಾಂ ವೀಕ್ಷಂತೀ ಭಗವನ್ಮುಖಮ್ ।
ಸವ್ರೀಡಹಾಸರುಚಿರಸ್ನಿಗ್ಧಾಪಾಂಗೇನ ಭಾರತ
॥ ೩೩ ॥

ರುಕ್ಮಿಣ್ಯುವಾಚ

ನನ್ವೇವಮೇತದರವಿಂದವಿಲೋಚನಾಹ
ಯದ್ವೈ ಭವಾನ್ ಭಗವತೋಽಸದೃಶೀ ವಿಭೂಮ್ನಃ ।
ಕ್ವ ಸ್ವೇ ಮಹಿಮ್ನ್ಯಭಿರತೋ ಭಗವಾಂಸ್ತ್ರ್ಯಧೀಶಃ
ಕ್ವಾಹಂ ಗುಣಪ್ರಕೃತಿರಜ್ಞಗೃಹೀತಪಾದಾ ॥ ೩೪ ॥

ಭಗವಂತನು ರುಕ್ಮಿಣಿಯ ಕಣ್ಣುಗಳನ್ನು ಮತ್ತು ಕಣ್ಣೀರಿನಿಂದ ನೆನೆದಿದ್ದ ಸ್ತನಗಳನ್ನು ಒರೆಸಿ, ತನ್ನಲ್ಲಿ ಅನನ್ಯ ಪ್ರೇಮಭಾವವುಳ್ಳ ಆ ಸಾಧ್ವಿಯಾದ ರುಕ್ಮಿಣಿಯನ್ನು ಗಾಢವಾಗಿ ಆಲಿಂಗಿಸಿ ಕೊಂಡನು. ॥ ೨೭ ॥ ಭಗವಾನ್ ಶ್ರೀಕೃಷ್ಣನು ಸಾಂತ್ವನಗೊಳಿಸುವು ದರಲ್ಲಿ ಅತ್ಯಂತ ಕುಶಲನಾಗಿದ್ದನು ಮತ್ತು ತನ್ನ ಪ್ರೇಮಿ ಭಕ್ತರಿಗೆ ಏಕಮಾತ್ರ ಆಶ್ರಯನಾಗಿದ್ದನು. ಹಾಸ್ಯದ ಗಂಭೀರತೆಯಿಂದಾಗಿ ರುಕ್ಮಿಣಿಯ ಬುದ್ಧಿಯು ಭ್ರಮಿಸಿ, ಅತ್ಯಂತ ದೀನಳಾಗಿರುವುದನ್ನು ಕಂಡು ಶ್ರೀಕೃಷ್ಣನು ತನ್ನ ಪ್ರೇಯಸಿಯನ್ನು ನಯದ ಮಾತುಗಳಿಂದ ಸಮಾಧಾನಗೊಳಿಸಿದನು. ॥ ೨೮ ॥

**ಭಗವಾನ್ ಶ್ರೀಕೃಷ್ಣನು ಹೇಳಿದನು** – ವಿದರ್ಭನಂದಿನಿಯೇ! ನನ್ನಲ್ಲಿ ನೀನು ದೋಷವೆಣಿಸಬೇಡ. ನೀನು ಏಕಮಾತ್ರ ನನ್ನಲ್ಲೇ ಪರಾಯಣಳಾಗಿರುವೆ ಎಂಬುದನ್ನು ನಾನು ಬಲ್ಲೆನು. ಪ್ರಿಯ ಸಹಚರಿಯೇ! ನಿನ್ನ ಪ್ರೇಮಪೂರ್ಣವಾದ ಮಾತನ್ನು ಕೇಳಲೆಂದೇ ನಾನು ವಿನೋದಕ್ಕಾಗಿ, ಹೀಗೆ ಮಾತನಾಡಿದೆ. ॥ ೨೯ ॥ ಸುಂದರಿಯೇ! ಪ್ರಣಯಕೋಪದಿಂದ ನಿನ್ನ ಕೆಂಪಾದ ತುಟಿಗಳು ಅದುರುವುದನ್ನೂ, ನಸುಗೆಂಪಾದ ಕಡೆಗಣ್ಣ ನೋಟವನ್ನೂ, ಗಂಟಿಕ್ಕಿದ ಸುಂದರವಾದ ಹುಬ್ಬುಗಳನ್ನು ಮುನಿಸಿನಿಂದ ಕೂಡಿದ ಮುದ್ದುಮುಖವನ್ನೂ ನೋಡಬೇಕೆಂದೇ ನಾನು ಹೀಗೆ ಹೇಳಿದೆ. ॥ ೩೦ ॥ ಪರಮಪ್ರಿಯಳಾದ ಭಾಮಿನಿಯೇ! ಮನೆಯ ಕೆಲಸ-ಕಾರ್ಯ ಗಳಲ್ಲಿ ಹಗಲು-ರಾತ್ರಿಯೂ ತೊಡಗಿರುವ ಗೃಹಸ್ಥರಿಗೆ ತನ್ನ ಪ್ರಿಯತಮೆಯಾದ ಅರ್ಧಾಂಗಿಯೊಡನೆ ಸ್ವಲ್ಪಕಾಲವಾದರೂ ಪರಿಹಾಸ-ವಿನೋದದಲ್ಲಿ ಕಳೆಯುವುದೇ ಮಹತ್ತರವಾದ ಒಂದು ಲಾಭವಲ್ಲವೇ? ॥ ೩೧ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ರಾಜೇಂದ್ರನೇ! ಭಗವಾನ್ ಶ್ರೀಕೃಷ್ಣನು ತನ್ನ ಪ್ರೇಯಸಿಯನ್ನು ಹೀಗೆ ನಯವಿನ ಯವಾದ ಮಾತುಗಳಿಂದ ಸಮಾಧಾನಗೊಳಿಸಲು, ತನ್ನ ಪ್ರಿಯ ಕರನು ಹೇಳಿದುದು ಹಾಸ್ಯಕ್ಕಾಗಿ ಎಂದು ತಿಳಿದ ರುಕ್ಮಿಣಿಯು ತನ್ನನ್ನು ಪರಿತ್ಯಾಗ ಮಾಡಿಬಿಡುವನೋ ಎಂಬ ಭಯವನ್ನು ತ್ಯಜಿಸಿ ನಿಶ್ಚಿಂತ ಳಾದಳು. ॥ ೩೨ ॥ ಪರೀಕ್ಷಿತನೇ! ಈಗ ಆಕೆಯು ನಾಚಿಕೆಯಿಂದ ಕೂಡಿದ ಪ್ರೇಮಪೂರ್ಣವಾದ ಕಡೆಗಣ್ಣ ನೋಟದಿಂದ ಪುರುಷ ಶ್ರೇಷ್ಠನಾದ ಭಗವಾನ್ ಶ್ರೀಕೃಷ್ಣನನ್ನು ವೀಕ್ಷಿಸುತ್ತಾ ಮಧುರವಾದ ಮಾತಿನಿಂದ ಇಂತೆಂದಳು. ॥ ೩೩ ॥

**ರುಕ್ಮಿಣೀದೇವಿಯು ಹೇಳಿದಳು** – ಕಮಲಾಕ್ಷನೇ! ನೀನು ಹೇಳಿರುವುದು ಸರಿಯಾಗಿಯೇ ಇದೆ. ಬಹಳ ದೊಡ್ಡವನಾದ ನಿನಗೆ ನಾನು ಖಂಡಿತವಾಗಿಯೂ ಸಮಾನಳಲ್ಲ. ಅಪಾರವಾದ ಮಹಿಮೆಯುಳ್ಳ, ಸ್ವಸ್ವರೂಪದಲ್ಲಿ ಆನಂದವನ್ನು ಹೊಂದುವ, ತ್ರಿಗುಣಗಳಿಗೆ ಸ್ವಾಮಿಯಾದ, ಬ್ರಹ್ಮಾದಿ ದೇವತೆಗಳಿಂದ ಸೇವಿತ ನಾದ ಷಡ್ಗುಣೈಶ್ವರ್ಯ ಸಂಪನ್ನನಾದ ನೀನೆಲ್ಲಿ? ತ್ರಿಗುಣಾತ್ಮಕ ಪ್ರಕೃತಿಯಾಗಿ, ಫಲಾಪೇಕ್ಷಿಗಳಾದ ಮೂಢರಿಂದ ವಂದಿಸಲ್ಪಡುವ ಪಾದಗಳುಳ್ಳ ನಾನೆಲ್ಲಿ? ॥ ೩೪ ॥

ಸತ್ತ್ವಂ ಭಯಾದಿವ ಗುಣೇಭ್ಯ ಉರುಕ್ರಮಾಂತಃ
ಶೇತೇ ಸಮುದ್ರ ಉಪಲಂಭನಮಾತ್ರ ಆತ್ಮಾ ।

ನಿತ್ಯಂ ಕದಿಂದ್ರಿಯಗಣೈಃ ಕೃತವಿಗ್ರಹಸ್ತ್ವಂ
ತ್ವತ್ಸೇವಕೈರ್ನೃಪಪದಂ ವಿಧುತಂ ತಮೋಽಂಧಮ್ ॥ ೩೫ ॥

ತ್ವತ್ಪಾದಪದ್ಮಮಕರಂದಜುಷಾಂ ಮುನೀನಾಂ
ವರ್ತ್ಮಾಸ್ಫುಟಂ ನೃಪಶುಭಿರ್ನನು ದುರ್ವಿಭಾವ್ಯಮ್ ।

ಯಸ್ಮಾದಲೌಕಿಕಮಿವೇಹಿತಮೀಶ್ವರಸ್ಯ
ಭೂಮಂಸ್ತವೇಹಿತಮಥೋ ಅನು ಯೇ ಭವಂತಮ್ ॥ ೩೬ ॥

ನಿಷ್ಕಿಂಚನೋ ನನು ಭವಾನ್ ನ ಯತೋಽಸ್ತಿ ಕಿಂಚಿದ್
ಯಸ್ಮೈ ಬಲಿಂ ಬಲಿಭುಜೋಽಪಿ ಹರಂತ್ಯಜಾದ್ಯಾಃ ।

ನ ತ್ವಾ ವಿದಂತ್ಯಸುತೃಪೋಽಂತಕಮಾಢ್ಯತಾಂಧಾಃ
ಪ್ರೇಷ್ಠೋ ಭವಾನ್ ಬಲಿಭುಜಾಮಪಿ ತೇಽಪಿ ತುಭ್ಯಮ್
॥ ೩೭ ॥

ತ್ವಂ ವೈ ಸಮಸ್ತಪುರುಷಾರ್ಥಮಯಃ ಫಲಾತ್ಮಾ
ಯದ್ವಾಂಛಯಾ ಸುಮತಯೋ ವಿಸೃಜಂತಿ ಕೃತ್ಸ್ನಮ್ ।

ತೇಷಾಂ ವಿಭೋ ಸಮುಚಿತೋ ಭವತಃ ಸಮಾಜಃ
ಪುಂಸಃ ಸ್ತ್ರಿಯಾಶ್ಚ ರತಯೋಃ ಸುಖದುಃಖಿನೋರ್ನ
॥ ೩೮ ॥

ತ್ರಿವಿಕ್ರಮಸ್ವರೂಪನೇ ! 'ರಾಜರಿಗೆ ಹೆದರಿ ಸಮುದ್ರವನ್ನು ಸೇರಿಕೊಂಡಿರುವೆವು' ಎಂದು ನೀನು ಹೇಳಿದುದು ಸರಿಯೇ; ಆದರೆ ರಾಜರೆಂದರೆ ಭೂಮಂಡಲದ ರಾಜರಲ್ಲ, ಸತ್ತ್ವ,ರಜಸ್ತಮಗಳೆಂಬ ಮೂವರು ರಾಜರು. ಅವರಿಗೆ ಹೆದರಿ ನೀನು ಅಂತಃಕರಣರೂಪವಾದ ಸಮುದ್ರದಲ್ಲಿ ಸಚ್ಚಿದಾನಂದಮಯವಾದ ಆತ್ಮಸ್ವರೂಪದಲ್ಲಿ ರಾರಾಜಿಸುತ್ತಿರುವೆ. 'ಬಲಿಷ್ಠರೊಡನೆ ದ್ವೇಷವನ್ನು ಕಟ್ಟಿಕೊಂಡವರು' ಎಂದು ಹೇಳಿಕೊಂಡೆ. ಇದೂ ನಿಜವೇ. ಮಹಾಬಲಿಷ್ಠವಾದುದು ಈ ಇಂದ್ರಿಯಗಳೇ. ಅವರೊಂದಿಗೆ ನಿನ್ನ ವೈರವಿದ್ದೇ ಇದೆ. 'ರಾಜಸಿಂಹಾಸನದಿಂದ ವಂಚಿತರಾದವರು' ಎಂದು ಹೇಳಿದುದೂ ಸರಿಯೇ. ನಿನ್ನ ಪಾದ ಸೇವಕರೂ ಕೂಡ ರಾಜಪದವಿಯನ್ನು ಅಜ್ಞಾನಾಂಧಕಾರಮಯವಾದುದೆಂದು ಧಿಕ್ಕರಿಸುವಾಗ, ನಿತ್ಯತೃಪ್ತನೂ ಆಪ್ತಕಾಮನೂ ಆದ ನಿನ್ನ ವಿಷಯದಲ್ಲಿ ಹೇಳುವುದೇನಿದೆ ? ॥ ೩೫ ॥ ನಾವು ಸ್ಪಷ್ಟವಾದ ಮಾರ್ಗವಿಲ್ಲದವರೆಂದೂ, ಲೌಕಿಕ ವ್ಯವಹಾರಗಳನ್ನು ಪಾಲಿಸತಕ್ಕವರಲ್ಲವೆಂದೂ, ಹೇಳಿಕೊಂಡೆ ; ಇದೂ ಯಥಾರ್ಥವೇ ಆಗಿದೆ. ಏಕೆಂದರೆ, ನಿನ್ನ ಪಾದಪದ್ಮಗಳ ಮಕರಂದವನ್ನು ಸೇವಿಸುವವರ ಮಾರ್ಗವೂ ಅಸ್ಪಷ್ಟವಾಗಿರುತ್ತದೆ ಮತ್ತು ವಿಷಯಗಳಲ್ಲಿ ಮೈಮರೆತ ನರಪಶುಗಳಿಂದ ಅದನ್ನು ಊಹಿಸಲು ಸಾಧ್ಯವಾಗುವುದಿಲ್ಲ. ಓ ಅನಂತನೇ ! ನಿನ್ನ ಮಾರ್ಗದಲ್ಲಿ ನಡೆಯುವ ನಿನ್ನ ಭಕ್ತರ ಚೇಷ್ಟೆಗಳೂ ಪ್ರಾಯಶಃ ಅಲೌಕಿಕವಾಗಿರುವಾಗ ಸಮಸ್ತ ಶಕ್ತಿಗಳ ಮತ್ತು ಐಶ್ವರ್ಯಗಳ ಆಶ್ರಯನಾದ ನಿನ್ನ ಚೇಷ್ಟೆಗಳು ಅಲೌಕಿವಾಗಿರುವುದರಲ್ಲಿ ಹೇಳುವುದೇನಿದೆ ? ॥ ೩೬ ॥ ನಾವು ಅಕಿಂಚನರು ಎಂದು ಹೇಳಿಕೊಂಡೆ, ಆದರೆ ನಿನ್ನ ಅಕಿಂಚನತೆ ದರಿದ್ರತೆಯಲ್ಲ, ನೀನಲ್ಲದೆ ಬೇರೆ ಯಾವ ವಸ್ತುವೂ ಇಲ್ಲದಿರುವುದರಿಂದ ಎಲ್ಲವೂ ನೀನೇ ಆಗಿರುವೆ ಎಂಬುದೇ ಅರ್ಥವಾಗಿದೆ. ನಿನ್ನ ಬಳಿಯಲ್ಲಿ ಇಟ್ಟುಕೊಳ್ಳಲಿಕ್ಕಾಗಿ ಏನೂ ಇಲ್ಲ, ಆದರೆ ಯಾರು ಬ್ರಹ್ಮಾದಿ ದೇವತೆಗಳನ್ನು ಪೂಜಿಸುವರೋ, ಕಾಣಿಕೆಗಳನ್ನು ಅರ್ಪಿಸುವರೋ ಆ ಜನರೇ ನಿನ್ನನ್ನೂ ಪೂಜಿಸುತ್ತಲೇ ಇರುತ್ತಾರೆ. ನೀನು ಅವರಿಗೆ ಪ್ರಿಯನಾಗಿರುವೆ, ಅವರು ನಿನಗೆ ಪ್ರಿಯರಾಗಿರುವರು. ಧನಾಢ್ಯರಾದವರು ನನ್ನನ್ನು ಭಜಿಸುವುದಿಲ್ಲ ಎಂದು ನೀನು ಹೇಳಿದುದೂ ಉಚಿತವೇ ಆಗಿದೆ. ತಮ್ಮ ಶ್ರೀಮಂತಿಕೆಯ ಅಭಿಮಾನದಿಂದ ಕುರುಡರಾಗಿ, ಇಂದ್ರಿಯಗಳನ್ನು ತೃಪ್ತಿಪಡಿಸುವುದರಲ್ಲೇ ತೊಡಗಿರುವವರು ನಿನ್ನನ್ನು ಭಜಿಸುವುದಿಲ್ಲ, ಸೇವಿಸುವುದಿಲ್ಲ, ನೀನೇ ಮೃತ್ಯು(ಕಾಲ)ರೂಪದಿಂದ ಅವರ ತಲೆಯ ಮೇಲೆ ಕುಳಿತಿರುವೆ ಎಂಬುದನ್ನೂ ಅವರು ತಿಳಿಯರು. ॥ ೩೭ ॥ ಜಗತ್ತಿನಲ್ಲಿ ಜೀವಿಯ ವಾಂಛನೀಯವಾದ ಧರ್ಮ, ಅರ್ಥ, ಕಾಮ, ಮೋಕ್ಷ – ಇವೆಲ್ಲದರ ರೂಪದಲ್ಲಿ ನೀನೇ ಪ್ರಕಟನಾಗಿರುವೆ. ಸಮಸ್ತ ವೃತ್ತಿ–ಪ್ರವೃತ್ತಿಗಳು, ಸಾಧನೆಗಳು, ಸಿದ್ಧಿಗಳು ಮತ್ತು ಸಾಧ್ಯಗಳು ಇವೆಲ್ಲದರ ಫಲಸ್ವರೂಪ ನೀನೆ ಆಗಿರುವೆ. ವಿಚಾರಶೀಲರಾದ ಜನರು ನಿನ್ನನ್ನು ಪಡೆಯಲಿಕ್ಕಾಗಿ, ಎಲ್ಲವನ್ನೂ ಬಿಟ್ಟುಬಿಡುತ್ತಾರೆ. ಭಗವಂತಾ! ಅಂತಹ ವಿವೇಕೀ ಜನರೊಂದಿಗೆ ನಿನ್ನ ಸಂಬಂಧವಾಗಬೇಕು. ಸ್ತ್ರೀ–ಪುರುಷರ ಸಹವಾಸದಿಂದ ದೊರಕುವ ಸುಖ ಅಥವಾ ದುಃಖಗಳಿಗೆ ವಶೀಭೂತರಾದ ಜನರು ಎಂದಿಗೂ ನಿನ್ನೊಂದಿಗೆ ಸಂಬಂಧ ಬೆಳೆಸಲು ಯೋಗ್ಯರಾಗಿರುವುದಿಲ್ಲ. ॥ ೩೮ ॥

ತ್ವಂ ನ್ಯಸ್ತದಂಡಮುನಿಭಿರ್ಗದಿತಾನುಭಾವ
ಆತ್ಮಾಽಽತ್ಮದಶ್ಚ ಜಗತಾಮಿತಿ ಮೇ ವೃತೋಽಸಿ ।

ಹಿತ್ವಾ ಭವದ್ಭ್ರುವ ಉದೀರಿತಕಾಲವೇಗ-
ಧ್ವಸ್ತಾಶಿಷೋಽಬ್ಜಭವನಾಕಪತೀನ್ ಕುತೋಽನ್ಯೇ ॥ ೩೯ ॥

ಭಿಕ್ಷುಕರಿಂದ ವ್ಯರ್ಥವಾಗಿ ಪ್ರಶಂಸಿಸಲ್ಪಡುವವನು ಎಂದು ಹೇಳಿಕೊಂಡಿರುವೆ. ಆದರೆ ಯಾವ ಭಿಕ್ಷುಕರು? ಪರಮ ಶಾಂತರೂ, ಸಂನ್ಯಾಸಿಗಳೂ, ಮಹಾಪರಾಧಿಯನ್ನು ಶಿಕ್ಷಿಸಬಾರ ದೆಂದು ನಿಶ್ಚಯಿಸಿಕೊಂಡವರೂ ಆದ ಮಹಾತ್ಮರು ನಿನ್ನ ಮಹಿಮೆ ಯನ್ನು ವರ್ಣಿಸಿರುವರು. ನಾನು ದೂರದರ್ಶಿತ್ವವಿಲ್ಲದೆ ನಿನ್ನನ್ನು ವರಿಸಲಿಲ್ಲ. ನೀನು ಸಮಸ್ತ ಜಗತ್ತಿನ ಆತ್ಮನಾಗಿರುವೆ. ನಿನ್ನ ಪ್ರೇಮಿ ಗಳಿಗೆ ನಿನ್ನನ್ನೇ ಕೊಟ್ಟುಕೊಳ್ಳುವೆ. ನೀನು ಕೇವಲ ಹುಬ್ಬನ್ನು ಹಾರಿಸಿದ ಮಾತ್ರದಿಂದ ಪ್ರೇರಿತವಾದ ಕಾಲವು ಬ್ರಹ್ಮೇಂದ್ರಾದಿಗಳ ಐಶ್ವರ್ಯ ವನ್ನೂ, ಆಕಾಂಕ್ಷೆಗಳನ್ನೂ ಧ್ವಂಸಮಾಡಿಬಿಡುತ್ತದೆ. ಇದನ್ನು ತಿಳಿದೇ ನಾನು ಅವರನ್ನು ತ್ಯಾಗಮಾಡಿರುವೆನು. ಹಾಗಿರುವಾಗ ಬೇರೆ ಯವರ ವಿಷಯದಲ್ಲಿ ಹೇಳುವುದೇನಿದೆ? ॥ ೩೯ ॥

ಜಾಡ್ಯಂ ವಚಸ್ತವ ಗದಾಗ್ರಜ ಯಸ್ತು ಭೂಪಾನ್
ವಿದ್ರಾವ್ಯ ಶಾರ್ಙ್ಗನಿನದೇನ ಜಹರ್ಥ ಮಾಂ ತ್ವಮ್ ।

ಸಿಂಹೋ ಯಥಾ ಸ್ವಬಲಿಮೀಶ ಪಶೂನ್ ಸ್ವಭಾಗಂ
ತೇಭ್ಯೋ ಭಯಾದ್ಯದುದಧಿಂ ಶರಣಂ ಪ್ರಪನ್ನಃ ॥ ೪೦ ॥

ಗದಾಗ್ರಜನೇ! ಸಿಂಹವು ತನ್ನ ಗರ್ಜನೆಯಿಂದ ಕಾಡಿನ ಮೃಗ ಗಳನ್ನು ಓಡಿಸಿ, ಆದರ ಭಾಗವನ್ನು ಕಚ್ಚಿಕೊಂಡು ಹೋಗುವಂತೆ ಕೇವಲ ಶಾರ್ಙ್ಗಧನುಸ್ಸಿನ ಟಂಕಾರದಿಂದಲೇ ಸಮಸ್ತ ರಾಜರನ್ನು ಓಡಿಸಿ, ನಿನ್ನ ದಾಸಿಯಾದ ನನ್ನನ್ನು ಅಪಹರಿಸಿಕೊಂಡು ಬಂದಿ ರುವೆ. ಇದಕ್ಕೆ ನಾನೇ ಸಾಕ್ಷಿಯಾಗಿದ್ದೇನೆ. ಹೀಗಿರುವಾಗ ರಾಜರಿಗೆ ಹೆದರಿ ಸಮುದ್ರವನ್ನು ಆಶ್ರಯಿಸಿರುವೆನು ಎಂಬ ನಿನ್ನ ಮಾತು ಯುಕ್ತಿಯುಕ್ತವಾಗಿ ಕಾಣುವುದಿಲ್ಲ. ॥ ೪೦ ॥ ಕಮಲನಯನ! 'ನನ್ನನ್ನು ಅನುಸರಿಸಿದವರು ಪ್ರಾಯಶಃ ಕಷ್ಟವನ್ನೇ ಪಡುತ್ತಾರೆ' ಎಂದು ನೀನು ಹೇಗೆ ಹೇಳಬಲ್ಲೆ? ಹಿಂದೆ ಅಂಗ, ಪೃಥು, ಭರತ, ಯಯಾತಿ, ಗಯ ಇವೇ ಮೊದಲಾದ ರಾಜಾಧಿರಾಜರು ತಮ್ಮ ಏಕಚ್ಛತ್ರ ಸಾಮ್ರಾಜ್ಯವನ್ನು ಪರಿತ್ಯಜಿಸಿ ಕೇವಲ ನಿನ್ನನ್ನು ಸೇರಬೇಕೆಂಬ ಮಹತ್ವಾಕಾಂಕ್ಷೆಯಿಂದ ತಪಸ್ಸು ಮಾಡಲು ಅರಣ್ಯಕ್ಕೆ ಹೋದರು. ನಿನ್ನನ್ನು ಅನುಸರಣೆ ಮಾಡಿದ ಅವರು ಏನಾದರೂ ಕಷ್ಟವನ್ನು ಅನುಭವಿಸುತ್ತಿರುವರೇ? ॥ ೪೧ ॥ ಬೇರೆ ಯಾರಾದರೂ ರಾಜ ಕುಮಾರನನ್ನು ವರಿಸೆಂದು ನೀನು ನನಗೆ ಸಲಹೆ ಮಾಡಿದೆ. ಭಗವಂತಾ! ನೀನು ಸಮಸ್ತ ಗುಣಗಳಿಗೆ ಏಕಮಾತ್ರ ಆಶ್ರಯ ನಾಗಿರುವೆ. ಸತ್ಪುರುಷರು ನಿನ್ನ ಚರಣಕಮಲಗಳ ಗಂಧವನ್ನು ಆಘ್ರಾಣಿಸಿ ಅವನ್ನು ಗಾನಮಾಡುತ್ತಲೇ ಇರುತ್ತಾರೆ. ದಿವ್ಯವಾದ ಆ ನಿನ್ನ ಚರಣಕಮಲಗಳ ಆಶ್ರಯವನ್ನು ಹೊಂದಿದೊಡನೆಯೇ ಸಂಸಾರದ ಪಾಪ-ತಾಪಗಳಿಂದ ಮುಕ್ತಿ ಸಿಗುತ್ತದೆ. ಲಕ್ಷ್ಮಿಯು ಸದಾಕಾಲ ಅವುಗಳಲ್ಲೇ ನಿವಾಸಮಾಡಿಕೊಂಡಿದ್ದಾಳೆ. ತನ್ನ ಸ್ವಾರ್ಥ ಪರಮಾರ್ಥಗಳನ್ನು ಚೆನ್ನಾಗಿ ತಿಳಿದಿರುವ ಯಾವ ಸ್ತ್ರೀಯು ತಾನೇ ಒಮ್ಮೆ ಅಂತಹ ಚರಣಕಮಲಗಳ ಗಂಧವನ್ನು ಆಘ್ರಾಣಿಸಿದ ಬಳಿಕ ಅದನ್ನು ತಿರಸ್ಕರಿಸಿ, ಹುಟ್ಟು-ಸಾವುಗಳ, ರೋಗ-ರುಜಿನಗಳ ಭಯದಿಂದ ಪೀಡಿತರಾದ ಮನುಷ್ಯರನ್ನು ವರಿಸಿಯಾಳು? ಬುದ್ಧಿವಂತೆಯಾದ ಯಾವ ಸ್ತ್ರೀಯೂ ಹಾಗೆ ಮಾಡ ಲಾರಳು. ॥ ೪೨ ॥ ಪ್ರಭುವೇ! ಸಮಸ್ತ ಜಗತ್ತಿಗೂ ನೀನೇ ಸ್ವಾಮಿ ಯಾಗಿರುವೆ. ನೀನು ಇಹ-ಪರಲೋಕಗಳಲ್ಲಿರುವ ಸಮಸ್ತ ಪ್ರಾಣಿಗಳ ಆಸೆ ಆಕಾಂಕ್ಷೆಗಳನ್ನು ಪೂರ್ಣಗೊಳಿಸುವವನೂ ಮತ್ತು ಆತ್ಮನೂ ಆಗಿರುವೆ. ಅಂತಹ ನಿನ್ನನ್ನು ಆತ್ಮರೂಪನೆಂದೇ ತಿಳಿದು ನಾನು ವರಿಸಿರುವೆನು. ನನ್ನ ಕರ್ಮಕ್ಕೆ ಅನುಸಾರವಾಗಿ ಬೇರೆ-ಬೇರೆ

ಯದ್ವಾಂಛಯಾ ನೃಪಶಿಖಾಮಣಯೋಽಂಗವೈನ್ಯ-
ಜಾಯಂತನಾಹುಷಗಯಾದಯ ಐಕಪತ್ಯಮ್ ।

ರಾಜ್ಯಂ ವಿಸೃಜ್ಯ ವಿವಿಶುರ್ವನಮಂಬುಜಾಕ್ಷ
ಸೀದಂತಿ ತೇಽನುಪದವೀಂ ತ ಇಹಾಸ್ಥಿತಾಃ ಕಿಮ್ ॥ ೪೧ ॥

ಕಾನ್ಯಂ ಶ್ರಯೇತ ತವ ಪಾದಸರೋಜಗಂಧಮ್
ಆಘ್ರಾಯ ಸನ್ಮುಖರಿತಂ ಜನತಾಪವರ್ಗಮ್ ।

ಲಕ್ಷ್ಮ್ಯಾಲಯಂ ತ್ವವಿಗಣಯ್ಯ ಗುಣಾಲಯಸ್ಯ
ಮರ್ತ್ಯಾ ಸದೋರುಭಯಮರ್ಥವಿವಿಕ್ತದೃಷ್ಟಿಃ ॥ ೪೨ ॥

ತಂ ತ್ವಾನುರೂಪಮಭಜಂ ಜಗತಾಮಧೀಶ-
ಮಾತ್ಮಾನಮತ್ರ ಚ ಪರತ್ರ ಚ ಕಾಮಪೂರಮ್ ।

ಸ್ಯಾನ್ಮೇ ತವಾಂಘ್ರಿರರಣಂ ಸೃತಿಭಿರ್ಭ್ರಮಂತ್ಯಾ
ಯೋ ವೈ ಭಜಂತಮುಪಯಾತ್ಯನೃತಾಪವರ್ಗಃ ॥ ೪೩ ॥

ತಸ್ಯಾಃ ಸ್ಯುರಚ್ಯುತ ನೃಪಾ ಭವತೋಪದಿಷ್ಟಾಃ
ಸ್ತ್ರೀಣಾಂ ಗೃಹೇಷು ಖರಗೋಶ್ವಬಿಡಾಲಭೃತ್ಯಾಃ ।

ಯತ್ಕರ್ಣಮೂಲಮರಿಕರ್ಷಣ ನೋಪಯಾಯಾದ್
ಯುಷ್ಮತ್ಕಥಾಮೃಡವಿರಿಂಚಸಭಾಸು ಗೀತಾ ॥ ೪೪ ॥

ತ್ವಕ್ಶ್ಮಶ್ರುರೋಮನಖಕೇಶಪಿನದ್ಧಮಂತ-
ರ್ಮಾಂಸಾಸ್ಥಿರಕ್ತಕೃಮಿವಿಟ್ಕಫಪಿತ್ತವಾತಮ್ ।

ಜೀವಚ್ಛವಂ ಭಜತಿ ಕಾಂತಮತಿರ್ವಿಮೂಢಾ
ಯಾ ತೇ ಪದಾಬ್ಜಮಕರಂದಮಜಿಘ್ರತೀ ಸ್ತ್ರೀ ॥ ೪೫ ॥

ಅಸ್ತ್ವಂಬುಜಾಕ್ಷ ಮಮ ತೇ ಚರಣಾನುರಾಗ
ಆತ್ಮನ್ರತಸ್ಯ ಮಯಿ ಚಾನತಿರಿಕ್ತದೃಷ್ಟೇಃ ।

ಯರ್ಹ್ಯಸ್ಯ ವೃದ್ಧಯ ಉಪಾತ್ತರಜೋಽತಿಮಾತ್ರೋ
ಮಾಮೀಕ್ಷಸೇ ತದು ಹ ನಃ ಪರಮಾನುಕಂಪಾ ॥ ೪೬ ॥

ನೈವಾಲೀಕಮಹಂ ಮನ್ಯೇ ವಚಸ್ತೇ ಮಧುಸೂದನ ।
ಅಂಬಾಯಾ ಇವ ಹಿ ಪ್ರಾಯಃ ಕನ್ಯಾಯಾಃ ಸ್ಯಾದ್ರತಿಃ ಕ್ವಚಿತ್ ॥ ೪೭ ॥

ವ್ಯೂಢಾಯಾಶ್ಚಾಪಿ ಪುಂಶ್ಚಲ್ಯಾ ಮನೋಽಭ್ಯೇತಿ ನವಂ ನವಮ್ ।
ಬುಧೋಽಸತೀಂ ನ ಬಿಭೃಯಾತ್ ತಾಂ ಬಿಭ್ರದುಭಯಚ್ಯುತಃ ॥ ೪೮ ॥

ಶ್ರೀಭಗವಾನುವಾಚ

ಸಾಧ್ವ್ಯೇತಚ್ಛ್ರೋತುಕಾಮೈಸ್ತ್ವಂ ರಾಜಪುತ್ರಿ ಪ್ರಲಂಭಿತಾ ।
ಮಯೋದಿತಂ ಯದನ್ವಾತ್ಥ ಸರ್ವಂ ತತ್ ಸತ್ಯಮೇವ ಹಿ ॥ ೪೯ ॥

ಯೋನಿಗಳಲ್ಲಿ ಹುಟ್ಟಬೇಕಾದರೂ ನಾನು ಆ ಬಗ್ಗೆ ಯೋಚಿಸುವುದಿಲ್ಲ. ನಿನ್ನನ್ನು ಸದಾ ಭಜಿಸುವವರ ಮಿಥ್ಯಾಸಂಸಾರವನ್ನು ನಾಶಗೊಳಿಸುವ ನಿನ್ನ ಚರಣಕಮಲಗಳೇ ನನಗೆ ಎಲ್ಲ ಜನ್ಮಗಳಲ್ಲಿಯೂ ಆಶ್ರಯವಾಗಿರಲೆಂಬ ಒಂದೇ ಅಭಿಲಾಷೆ ಇರುವುದು. ॥ ೪೩ ॥ ಅಚ್ಯುತನೇ! ಶತ್ರುಧ್ವಂಸನೇ! ಕತ್ತೆಗಳಂತೆ, ಎತ್ತುಗಳಂತೆ, ಕುದುರೆಗಳಂತೆ, ಬೆಕ್ಕುಗಳಂತೆ ಮತ್ತು ಭೃತ್ಯರಂತೆ ಅರಮನೆಯಲ್ಲಿ ಹೆಂಗಸರ ಸೇವೆ ಮಾಡಿಕೊಂಡಿರುವ ರಾಜರ ಕುರಿತು ವರಿಸಲು ನೀನು ಸಂಕೇತ ಮಾಡಿರುವೆ. ಆದರೆ ಶಂಕರ, ಬ್ರಹ್ಮಾದಿ ದೇವತೆಗಳ ಸಭೆಯಲ್ಲಿ ಗಾನಮಾಡಲ್ಪಡುವ ನಿನ್ನ ಲೀಲಾಕಥೆಗಳು ಯಾರ ಕಿವಿಗಳಲ್ಲಿ ಪ್ರವೇಶಮಾಡಲಿಲ್ಲವೋ ಅಂತಹ ದುರ್ಭಾಗ್ಯರಾದ ಸ್ತ್ರೀಯರೇ ಆ ರಾಜರನ್ನು ವರಿಸಲಿ. ॥ ೪೪ ॥ ಈ ಮನುಷ್ಯ ಶರೀರವು ಜೀವಿಸಿದ್ದರೂ ಹೆಣದಂತೆ ಇದೆ. ಮೇಲಿನಿಂದ ಚರ್ಮ, ಗಡ್ಡ-ಮೀಸೆ, ರೋಮ, ನಖ, ಕೂದಲುಗಳಿಂದ ಮುಚ್ಚಿರುತ್ತದೆ. ಆದರೆ ಇದರೊಳಗೆ ಮಾಂಸ, ಎಲುಬು, ರಕ್ತ, ಕ್ರಿಮಿ, ಮಲಮೂತ್ರ, ಕಫ-ಪಿತ್ತ ವಾತಗಳಿಂದ ತುಂಬಿದೆ. ಎಂದಿಗೂ ನಿನ್ನ ಚರಣಾರವಿಂದದ ಮಕರಂದವನ್ನು ಆಘ್ರಾಣಿಸದ ಮೂಢ ಸ್ತ್ರೀಯರೇ ಇಂತಹವರನ್ನು ತಮ್ಮ ಪ್ರಿಯತಮನೆಂದು ತಿಳಿದು ಸೇವಿಸುತ್ತಿರುವರು. ॥ ೪೫ ॥ ಕಮಲಾಕ್ಷನೇ! ನೀನು ಆತ್ಮಾರಾಮನಾಗಿರುವೆ. ನಾನು ಸುಂದರಳಾಗಿದ್ದೇನೆ, ಗುಣವತಿಯಾಗಿದ್ದೇನೆ ಇದರ ಕಡೆಗೆ ನಿನ್ನ ದೃಷ್ಟಿಯೇ ಹೋಗುವುದಿಲ್ಲ. ಆದ್ದರಿಂದ ನೀನು ಉದಾಸೀನನಾಗಿರುವುದು ಸ್ವಾಭಾವಿಕವೇ ಆಗಿದೆ. ಹೀಗಿದ್ದರೂ ನಿನ್ನ ಚರಣಕಮಲಗಳಲ್ಲಿ ನನ್ನ ಅನುರಾಗವು ಸುದೃಢವಾಗಿರಲೆಂದೇ ನನಗೆ ಅಭಿಲಾಷೆಯು. ನೀನು ಈ ಜಗತ್ತಿನ ಅಭಿವೃದ್ಧಿಗೆ ಉತ್ಕಟ ರಜೋಗುಣವನ್ನು ಸ್ವೀಕರಿಸಿ ನನ್ನ ಕಡೆಗೆ ನೋಡಿದಾಗಲೇ ನಿನ್ನ ಪರಮಾನುಗ್ರಹವಾಗಿದೆ. ॥ ೪೬ ॥ ಮಧುಸೂದನ! 'ನಿನಗೆ ಅನುರೂಪನಾದ ಕ್ಷತ್ರಿಯ ಶ್ರೇಷ್ಠನನ್ನು ನೀನು ಸೇವಿಸು' ಎಂದೂ ನೀನೇ ಹೇಳಿದೆ. ನಿನ್ನ ಮಾತು ಸುಳ್ಳೆಂದು ನಾನು ಭಾವಿಸುವುದಿಲ್ಲ. ಕೆಲವರ ವಿಷಯದಲ್ಲಿ ಇದು ನಿಜ. ಕಾಶೀರಾಜನ ಮಗಳಾದ ಅಂಬೆಯು ಮೊದಲು ಒಬ್ಬನನ್ನು ಪ್ರೀತಿಸಿ, ಅನಂತರ ಮತ್ತೊಬ್ಬನನ್ನು ಪ್ರೀತಿಸಿದಳು. ಹಾಗೆಯೇ ಕೆಲವು ಕನ್ಯೆಯರು ಮೊದಲು ಒಬ್ಬನನ್ನು ಪ್ರೀತಿಸಿದ್ದು ಬಳಿಕ ಬೇರೆಯವರನ್ನು ಪ್ರೀತಿಸಬಹುದು. ॥ ೪೭ ॥ ಕುಲಟೆಯಾದ ಸ್ತ್ರೀಯಳ ಮನಸ್ಸು ವಿವಾಹವಾದ ಬಳಿಕವೂ ಹೊಸ-ಹೊಸ ಪುರುಷರ ಕಡೆಗೆ ಸೆಳೆಯಲ್ಪಡುತ್ತದೆ. ಬುದ್ಧಿವಂತನಾದವನು ಇಂತಹ ಕುಲಟೆಯಾದ ಸ್ತ್ರೀಯನ್ನು ಇಟ್ಟುಕೊಳ್ಳಬಾರದು. ಅಂತಹವಳನ್ನು ತನ್ನವಳನ್ನಾಗಿಸಿಕೊಳ್ಳುವವರು ಇಹ-ಪರ ಎರಡೂ ಲೋಕಗಳನ್ನು ಕಳೆದುಕೊಳ್ಳುವರು. ಉಭಯ ಭ್ರಷ್ಟರಾಗುವರು. ॥ ೪೮ ॥

ಭಗವಾನ್ ಶ್ರೀಕೃಷ್ಣನು ಹೇಳಿದನು – ಸಾಧ್ವಿಯೇ! ರಾಜಕುಮಾರಿಯೇ! ನಿನ್ನ ಇಂತಹ ಮಾತುಗಳನ್ನು ಕೇಳಬೇಕೆಂದೇ ನಾನು ನಿನ್ನಲ್ಲಿ ಹೀಗೆ ಪರಿಹಾಸದ ಮಾತುಗಳನ್ನಾಡಿದೆ. ನಾನು ಹೇಳಿದುದಕ್ಕೆ ನಿನ್ನ ವ್ಯಾಖ್ಯಾನವು ಸಮಂಜಸವಾಗಿದೆ. ಸತ್ಯವಾಗಿಯೂ ಇದೆ. ॥ ೪೯ ॥

ಯಾನ್ ಯಾನ್ ಕಾಮಯಸೇ ಕಾಮಾನ್ಮಯ್ಯಕಾಮಾಯ ಭಾಮಿನಿ ।
ಸಂತಿ ಹ್ಯೇಕಾಂತಭಕ್ತಾಯಾ ಸ್ತವ ಕಲ್ಯಾಣಿ ನಿತ್ಯದಾ
॥ ೫೦ ॥

ಉಪಲಬ್ಧಂ ಪತಿಪ್ರೇಮ ಪಾತಿವ್ರತ್ಯಂ ಚ ತೇಽನಘೇ ।
ಯದ್ವಾಕ್ಯೈಶ್ಚಾಲ್ಯಮಾನಾಯಾ ನ ಧೀರ್ಮಯ್ಯಪಕರ್ಷಿತಾ
॥ ೫೧ ॥

ಯೇ ಮಾಂ ಭಜಂತಿ ದಾಂಪತ್ಯೇ ತಪಸಾ ವ್ರತಚರ್ಯಯಾ ।
ಕಾಮಾತ್ಮಾನೋಽಪವರ್ಗೇಶಂ ಮೋಹಿತಾ ಮಮ ಮಾಯಯಾ
॥ ೫೨ ॥

ಮಾಂ ಪ್ರಾಪ್ಯ ಮಾನಿನ್ಯಪವರ್ಗಸಂಪದಂ
ವಾಂಛಂತಿ ಯೇ ಸಂಪದ ಏವ ತತ್ಪತಿಮ್ ।
ತೇ ಮಂದಭಾಗ್ಯಾ ನಿರಯೇಽಪಿ ಯೇ ನೃಣಾಂ
ಮಾತ್ರಾತ್ಮಕತ್ವಾನ್ನಿರಯಃ ಸುಸಂಗಮಃ ॥ ೫೩ ॥

ದಿಷ್ಟ್ಯಾ ಗೃಹೇಶ್ವರ್ಯಸಕೃನ್ಮಯಿ ತ್ವಯಾ
ಕೃತಾನುವೃತ್ತಿರ್ಭವಮೋಚನೀ ಖಲೈಃ ।
ಸುದುಷ್ಕರಾಸೌ ಸುತರಾಂ ದುರಾಶಿಷೋ
ಹ್ಯಸುಂಭರಾಯಾ ನಿಕೃತಿಂಜುಷಃ ಸ್ತ್ರಿಯಾಃ ॥ ೫೪ ॥

ನ ತ್ವಾದೃಶೀಂ ಪ್ರಣಯಿನೀಂ ಗೃಹಿಣೀಂ ಗೃಹೇಷು
ಪಶ್ಯಾಮಿ ಮಾನಿನಿ ಯಯಾ ಸ್ವವಿವಾಹಕಾಲೇ ।
ಪ್ರಾಪ್ತಾನ್ನೃಪಾನವಗಣಯ್ಯ ರಹೋಹರೋ ಮೇ
ಪ್ರಸ್ಥಾಪಿತೋ ದ್ವಿಜ ಉಪಶ್ರುತಸತ್ಕಥಸ್ಯ ॥ ೫೫ ॥

ಭ್ರಾತುರ್ವಿರೂಪಕರಣಂ ಯುಧಿ ನಿರ್ಜಿತಸ್ಯ
ಪ್ರೋದ್ವಾಹಪರ್ವಣಿ ಚ ತದ್ವಧಮಕ್ಷಗೋಷ್ಠ್ಯಾಮ್ ।
ದುಃಖಂ ಸಮುತ್ಥಮಸಹೋಽಸ್ಮದಯೋಗಭೀತ್ಯಾ
ನೈವಾಬ್ರವೀಃ ಕಿಮಪಿ ತೇನ ವಯಂ ಜಿತಾಸ್ತೇ ॥ ೫೬ ॥

ಸುಂದರೀ ! ನೀನು ನನ್ನ ಅನನ್ಯ ಪ್ರೇಯಸಿಯಾಗಿರುವೆ. ನಿನಗೆ ನನ್ನಲ್ಲಿಯೂ ಅನನ್ಯ ಪ್ರೀತಿಯಿದೆ. ನೀನು ನನ್ನಿಂದ ಬಯಸುವುದೆಲ್ಲವೂ ನಿನಗೆ ಸರ್ವದಾ ಸಿದ್ಧವಾಗಿಯೇ ಇದೆ. ನನ್ನಲ್ಲಿ ಮಾಡಿದ ಅಭಿಲಾಷೆಗಳು ಸಾಂಸಾರಿಕ ಕಾಮನೆಗಳಂತೆ ಬಂಧನಕ್ಕೆ ಕಾರಣವಾಗುವುದಿಲ್ಲ, ಏಕಾಂತ ಭಕ್ತೆಯಾದ ನಿನಗೆ ಇತರ ಎಲ್ಲ ಕಾಮನೆಗಳನ್ನು ನಿವೃತ್ತಿಗೊಳಿಸಿ ನನ್ನನ್ನೇ ಸೇರಲು ಅನುವು ಮಾಡಿಕೊಡುತ್ತದೆ. ॥ ೫೦ ॥ ಪುಣ್ಯಾತ್ಮಳೇ! ನಾನು ನಿನ್ನ ಪತಿಪ್ರೇಮವನ್ನೂ, ಪಾತಿವ್ರತ್ಯವನ್ನೂ ಚೆನ್ನಾಗಿ ಕಂಡುಕೊಂಡೆ. ಬುದ್ಧಿಯನ್ನು ಕದಲಿಸಬಹುದಾದ ನನ್ನ ಮಾತುಗಳಿಂದಲೂ ನಿನ್ನ ಬುದ್ಧಿಯು ನನ್ನಿಂದ ಸ್ವಲ್ಪವಾದರೂ ವಿಚಲಿತವಾಗಲಿಲ್ಲ. ॥ ೫೧ ॥ ಪ್ರಿಯೇ! ನಾನು ಮೋಕ್ಷಕ್ಕೆ ಸ್ವಾಮಿಯಾಗಿರುವೆನು. ಜನರನ್ನು ಸಂಸಾರ ಸಾಗರದಿಂದ ಪಾರುಮಾಡುತ್ತೇನೆ. ನಾನಾ ವಿಧದ ವ್ರತ, ತಪಸ್ಸು ಮಾಡುತ್ತಾ ದಾಂಪತ್ಯ ಜೀವನದ ವಿಷಯ-ಸುಖದ ಅಭಿಲಾಷೆಯಿಂದ ನನ್ನ ಭಜನೆ ಮಾಡುವ ಸಕಾಮ ಪುರುಷರು ನನ್ನ ಮಾಯೆಯಿಂದ ಮೋಹಿತರಾಗಿದ್ದಾರೆ. ॥ ೫೨ ॥ ಮಾನಿನಿಯೇ! ನಾನು ಮೋಕ್ಷಕ್ಕೂ ಮತ್ತು ಸಮಸ್ತ ಸಂಪತ್ತುಗಳಿಗೂ ಅಧೀಶ್ವರನಾಗಿದ್ದೇನೆ. ಪರಮಾತ್ಮನಾದ ನನ್ನನ್ನು ಪಡೆದ ಬಳಿಕವೂ, ಯಾರು ಕೇವಲ ವಿಷಯಸುಖದ ಸಾಧನವಾದ ಸಂಪತ್ತನ್ನೇ ಬಯಸುತ್ತಾರೋ, ನನ್ನ ಪರಾಭಕ್ತಿಯನ್ನು ಬಯಸುವುದಿಲ್ಲವೋ ಅವರು ಮಂದಭಾಗ್ಯರೇ ಸರಿ, ಏಕೆಂದರೆ, ವಿಷಯಸುಖವಾದರೋ ನರಕದಲ್ಲಿ ಮತ್ತು ನರಕಕ್ಕೆ ಸಮಾನವಾದ ಹಂದಿ, ನಾಯಿ ಮೊದಲಾದ ಯೋನಿಗಳಲ್ಲಿಯೂ ದೊರಕಬಲ್ಲದು. ಆದರೆ ಆ ಜನರ ಮನಸ್ಸು ವಿಷಯಗಳಲ್ಲೇ ತೊಡಗಿರುತ್ತದೆ ಆದಕ್ಕಾಗಿ ಅವರಿಗೆ ನರಕಕ್ಕೆ ಹೋಗುವುದೂ ಒಳ್ಳೆಯದೆನಿಸುತ್ತದೆ. ॥ ೫೩ ॥ ಗೃಹೇಶ್ವರಿಯೇ! ಪ್ರಾಣಪ್ರಿಯಳೇ! ನೀನು ಅದೃಷ್ಟವಶದಿಂದ ಸಂಸಾರಬಂಧನದಿಂದ ವಿಮುಕ್ತಗೊಳಿಸುವ ನನ್ನ ಸೇವೆಯನ್ನು ನಿರಂತರವಾಗಿ ಮಾಡುತ್ತಿರುವೆ. ದುಷ್ಟರಾದವರು ಹೀಗೆಂದೂ ಮಾಡಲಾರರು. ಅದರಲ್ಲಿಯೂ ದುಷ್ಟವಾದ ಕಾಮನೆಗಳಿಂದ ತುಂಬಿಹೋಗುವ ಮನಸ್ಸುಳ್ಳ, ಇಂದ್ರಿಯಗಳ ತೃಪ್ತಿಗಾಗಿ ಅನೇಕ ವಂಚನೆಗಳನ್ನು ಮಾಡುವ ಹೆಂಗಸಿಗೆ ಇಂತಹ ನಿಷ್ಕಾಮ ಸೇವೆಯನ್ನಂತೂ ಮಾಡಲು ಸಾಧ್ಯವೇ ಆಗುವುದಿಲ್ಲ. ॥ ೫೪ ॥ ಮಾನಿನಿಯೇ! ನನಗೆ ನನ್ನ ಮನೆಗಳಲ್ಲಿ ನಿನ್ನಂತೆ ಪ್ರೇಮಿಸುವ ಭಾರ್ಯೆ ಬೇರೆಯಾರೂ ಕಂಡುಬರುವುದಿಲ್ಲ, ಏಕೆಂದರೆ, (ವಿವಾಹದ ಸಮಯದಲ್ಲಿ) ನೀನು ನನ್ನನ್ನು ನೋಡಿರಲಿಲ್ಲ, ಕೇವಲ ನನ್ನ ಪ್ರಶಂಸೆಯನ್ನು ಕೇಳಿದ್ದೆಯಷ್ಟೆ. ಆಗಲೂ ನಿನ್ನ ವಿವಾಹಕ್ಕೆ ಬಂದಿರುವ ರಾಜರನ್ನು ಉಪೇಕ್ಷೆಮಾಡಿ ಬ್ರಾಹ್ಮಣನ ಮೂಲಕ ನನ್ನ ಬಳಿಗೆ ಗುಪ್ತ ಸಂದೇಶವನ್ನು ಕಳಿಸಿದ್ದೆ. ॥ ೫೫ ॥ ನಿನ್ನನ್ನು ಅಪಹರಿಸಿಕೊಂಡು ಬರುವಾಗ ನಿನ್ನ ಅಣ್ಣನನ್ನು ಯುದ್ಧದಲ್ಲಿ ಗೆದ್ದು ವಿರೂಪಗೊಳಿಸಿದ್ದೆ ಹಾಗೂ ಅನಿರುದ್ಧನ ವಿವಾಹ ಮಹೋತ್ಸವದಲ್ಲಿ ಪಗಡೆಯಾಡುವಾಗ ಬಲರಾಮನು ರುಕ್ಮಿಯನ್ನು ಕೊಂದು ಹಾಕಿದನು. ಆದರೆ ನನ್ನಿಂದ ವಿಯೋಗವಾಗುವ ಭಯದಿಂದ ನೀನು ಮೌನವಾಗಿ ಎಲ್ಲ ದುಃಖವನ್ನು ನುಂಗಿಕೊಂಡೆ. ನನ್ನಲ್ಲಿ ಒಂದು ಮಾತೂ ಆಡಲಿಲ್ಲ. ನಿನ್ನ ಈ ಗುಣದಿಂದ ನಾನು ನಿನ್ನ ವಶನಾಗಿಬಿಟ್ಟಿದ್ದೇನೆ. ॥ ೫೬॥

ದೂತಸ್ತ್ವಯಾಽಽತ್ಮಲಭನೇ ಸುವಿವಿಕ್ತಮಂತ್ರಃ
ಪ್ರಸ್ಥಾಪಿತೋ ಮಯಿ ಚಿರಾಯತಿ ಶೂನ್ಯಮೇತತ್ ।
ಮತ್ವಾ ಜಿಹಾಸ ಇದಮಂಗಮನನ್ಯಯೋಗ್ಯಂ
ತಿಷ್ಠೇತ ತತ್ತ್ವಯಿ ವಯಂ ಪ್ರತಿನಂದಯಾಮಃ ॥ ೫೭ ॥

ನೀನು ನನ್ನ ಪ್ರಾಪ್ತಿಗಾಗಿ ಬ್ರಾಹ್ಮಣನ ಮೂಲಕ ಗುಪ್ತ ಸಂದೇಶವನ್ನು ಕಳಿಸಿದ್ದೆ. ಆದರೆ ನಾನು ತಲುಪಲು ಸ್ವಲ್ಪ ತಡವಾದಾಗ ನಿನಗೆ ಇಡೀ ಜಗತ್ತೇ ಶೂನ್ಯವಾದಂತಾಗಿತ್ತು. ಆ ಸಮಯದಲ್ಲಿ ನಿನ್ನ ಈ ಸರ್ವಾಂಗ ಸುಂದರ ಶರೀರವನ್ನು ಬೇರೆ ಯಾರಿಗೂ ಅರ್ಪಿಸುವುದು ಯೋಗ್ಯವಲ್ಲವೆಂದು ತಿಳಿದು ಅದನ್ನು ಬಿಟ್ಟು ಬಿಡುವ ಸಂಕಲ್ಪವನ್ನು ಮಾಡಿದೆ. ನಿನ್ನ ಈ ಪ್ರೇಮಭಾವವು ನಿನ್ನೊಳಗೆ ಇರಲಿ. ಇದಕ್ಕೆ ಬದಲಾಗಿ ನಾನು ಏನನ್ನೂ ಕೊಡಲಾರೆ. ಸರ್ವೋಚ್ಚವಾದ ನಿನ್ನ ಈ ಪ್ರೇಮಭಾವವನ್ನು ನಾನು ಅಭಿನಂದಿಸುತ್ತೇನೆ. ॥ ೫೭ ॥

*ಶ್ರೀಶುಕ ಉವಾಚ*

ಏವಂ ಸೌರತಸಂಲಾಪೈರ್ಭಗವಾನ್ ಜಗದೀಶ್ವರಃ ।
ಸ್ವರತೋ ರಮಯಾ ರೇಮೇ ನರಲೋಕಂ ವಿಡಂಬಯನ್ ॥ ೫೮ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ - ಪರೀಕ್ಷಿತನೇ!** ಜಗದೀಶ್ವರನಾದ ಭಗವಾನ್ ಶ್ರೀಕೃಷ್ಣನು ಆತ್ಮಾರಾಮನಾಗಿದ್ದಾನೆ. ಅವನು ಮನುಷ್ಯರಂತೆ ಲೀಲೆ ಮಾಡುತ್ತಿರುವಾಗ ಅದರಲ್ಲಿ ದಾಂಪತ್ಯ ಪ್ರೇಮವನ್ನು ವೃದ್ಧಿಪಡಿಸುವ ವಿನೋದದಿಂದ ತುಂಬಿದ ಮಾತು-ಕತೆಯನ್ನು ಮಾಡುತ್ತಾ ಮತ್ತು ಹೀಗೆ ಲಕ್ಷ್ಮೀರೂಪಳಾದ ರುಕ್ಮಿಣಿಯೊಂದಿಗೆ ವಿಹರಿಸುತ್ತಿದ್ದನು. ॥ ೫೮ ॥ ಭಗವಾನ್ ಶ್ರೀಕೃಷ್ಣನು ಸಮಸ್ತ ಜಗತ್ತಿಗೆ ಶಿಕ್ಷಣವನ್ನು ಕೊಡುವ ಸರ್ವವ್ಯಾಪಕ ನಾಗಿದ್ದಾನೆ. ಅವನು ಹೀಗೆಯೇ ಇತರ ಪತ್ನಿಯರ ಅರಮನೆ ಗಳಲ್ಲಿಯೂ ಗೃಹಸ್ಥರಂತೆ ಇರುತ್ತಾ, ಗೃಹಸ್ಥೋಚಿತವಾದ ಧರ್ಮ ವನ್ನು ಪಾಲಿಸುತ್ತಿದ್ದನು. ॥ ೫೯ ॥

ತಥಾನ್ಯಾಸಾಮಪಿ ವಿಭುರ್ಗೃಹೇಷು ಗೃಹವಾನಿವ ।
ಆಸ್ಥಿತೋ ಗೃಹಮೇಧೀಯಾಂಧರ್ಮಾಂಲ್ಲೋಕಗುರುರ್ಹರಿಃ ॥ ೫೯ ॥

ಅರವತ್ತನೆಯ ಅಧ್ಯಾಯವು ಮುಗಿಯಿತು. ॥ ೬೦ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಉತ್ತರಾರ್ಧೇ
ಕೃಷ್ಣರುಕ್ಮಿಣೀಸಂವಾದೋ ನಾಮ ಷಷ್ಟಿತಮೋಽಧ್ಯಾಯಃ ॥ ೬೦ ॥

# ಅರವತ್ತೊಂದನೆಯ ಅಧ್ಯಾಯ

## ಭಗವಂತನ ಸಂತತಿಯ ವರ್ಣನೆ - ಅನಿರುದ್ಧನ ವಿವಾಹ - ರುಕ್ಮಿಯ ವಧೆ

*ಶ್ರೀಶುಕ ಉವಾಚ*

ಏಕೈಕಶಸ್ತಾಃ ಕೃಷ್ಣಸ್ಯ ಪುತ್ರಾನ್ ದಶ ದಶಾಬಲಾಃ ।
ಅಜೀಜನನ್ನನವಮಾನ್ಪಿತುಃ ಸರ್ವಾತ್ಮಸಂಪದಾ ॥ ೧ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** - ಎಲೈ ಪರೀಕ್ಷಿತನೇ! ಭಗವಾನ್ ಶ್ರೀಕೃಷ್ಣನ ಪ್ರತಿಯೊರ್ವ ಪತ್ನಿಯಲ್ಲಿ ಹತ್ತತ್ತು ಪುತ್ರರು ಹುಟ್ಟಿದರು. ಅವರೆಲ್ಲರೂ ರೂಪ, ಬಲಾದಿಗಳಲ್ಲಿ ತಂದೆಯಾದ ಶ್ರೀಕೃಷ್ಣನಿಗಿಂತ ಯಾವುದರಲ್ಲಿಯೂ ಕಡಿಮೆಯಾಗಿರಲಿಲ್ಲ. ॥ ೧ ॥ ತಮ್ಮ ಭವನದಿಂದ ಯಾವಾಗಲೂ ಹೊರಕ್ಕೆ ಹೋಗದೆ ತಮ್ಮೊಡನೆಯೇ ಇರುತ್ತಿದ್ದ ಶ್ರೀಕೃಷ್ಣನನ್ನು ನೋಡಿ ಅವನ ಎಲ್ಲ ಪತ್ನಿಯರು ಶ್ರೀಕೃಷ್ಣನು ತನ್ನೊಬ್ಬಳನ್ನೇ ಬಹಳವಾಗಿ ಪ್ರೀತಿಸುತ್ತಿರು ವನೆಂದು ಭಾವಿಸುತ್ತಿದ್ದರು. ಪರೀಕ್ಷಿತನೇ! ನಿಜವಾಗಿ ಹೇಳ ಬೇಕಾದರೆ ಅವರು ತಮ್ಮ ಪತಿಯಾದ ಶ್ರೀಕೃಷ್ಣನ ತತ್ತ್ವವನ್ನು ಮಹಿಮೆಯನ್ನು ತಿಳಿದವರಾಗಿರಲಿಲ್ಲ. ॥ ೨ ॥

ಗೃಹಾದನಪಗಂ ವೀಕ್ಷ್ಯ ರಾಜಪುತ್ರ್ಯೋಽಚ್ಯುತಂ ಸ್ಥಿತಮ್ ।
ಪ್ರೇಷ್ಠಂ ನ್ಯಮಂಸತ ಸ್ವಂ ಸ್ವಂ ನ ತತ್ತತ್ತ್ವವಿದಃ ಸ್ತ್ರಿಯಃ ॥ ೨ ॥

ಚಾರ್ವಬ್ಜಕೋಶವದನಾಯತಬಾಹುನೇತ್ರ-
ಸಪ್ರೇಮಹಾಸರಸವೀಕ್ಷಿತವಲ್ಗುಜಲ್ಪೈಃ ।
ಸಮ್ಮೋಹಿತಾ ಭಗವತೋ ನ ಮನೋ ವಿಜೇತುಂ
ಸ್ವೈರ್ವಿಭ್ರಮೈಃ ಸಮಶಕನ್ವನಿತಾ ವಿಭೂಮ್ನಃ ॥ ೩ ॥

ಸ್ಮಾಯಾವಲೋಕಲವದರ್ಶಿತಭಾವಹಾರಿ-
ಭ್ರೂಮಂಡಲಪ್ರಹಿತಸೌರತಮಂತ್ರಶೌಂಡ್ಯೈಃ ।
ಪತ್ನ್ಯಸ್ತು ಷೋಡಶಸಹಸ್ರಮನಂಗಬಾಣೈ-
ರ್ಯಸ್ಯೇಂದ್ರಿಯಂ ವಿಮಥಿತುಂ ಕರಣೈರ್ನ ಶೇಕುಃ ॥ ೪ ॥

ಇತ್ಥಂ ರಮಾಪತಿಮವಾಪ್ಯ ಪತಿಂ ಸ್ತ್ರಿಯಸ್ತಾ
ಬ್ರಹ್ಮಾದಯೋಽಪಿ ನ ವಿದುಃ ಪದವೀಂ ಯದೀಯಾಮ್ ।
ಭೇಜುರ್ಮುದಾವಿರತಮೇಧಿತಯಾನುರಾಗ-
ಹಾಸಾವಲೋಕನವಸಂಗಮಲಾಲಸಾದ್ಯಮ್ ॥ ೫ ॥

ಪ್ರತ್ಯುದ್ಗಮಾಸನವರಾರ್ಹಣಪಾದಶೌಚ-
ತಾಂಬೂಲವಿಶ್ರಮಣವೀಜನಗಂಧಮಾಲ್ಯೈಃ ।
ಕೇಶಪ್ರಸಾರಶಯನಸ್ನಪನೋಪಹಾರ್ಯೈ-
ರ್ದಾಸೀಶತಾ ಅಪಿ ವಿಭೋರ್ವಿದಧುಃ ಸ್ಮ ದಾಸ್ಯಮ್ ॥ ೬ ॥

ತಾಸಾಂ ಯಾ ದಶಪುತ್ರಾಣಾಂ ಕೃಷ್ಣಸ್ತ್ರೀಣಾಂ ಪುರೋದಿತಾಃ ।
ಅಷ್ಟೌ ಮಹಿಷ್ಯಸ್ತತ್ಪುತ್ರಾನ್ ಪ್ರದ್ಯುಮ್ನಾದೀನ್ ಗೃಣಾಮಿ ತೇ ॥ ೭ ॥

ಚಾರುದೇಷ್ಣಃ ಸುದೇಷ್ಣಶ್ಚ ಚಾರುದೇಹಶ್ಚ ವೀರ್ಯವಾನ್ ।
ಸುಚಾರುಶ್ಚಾರುಗುಪ್ತಶ್ಚ ಭದ್ರಚಾರುಸ್ತಥಾಪರಃ ॥ ೮ ॥

ಚಾರುಚಂದ್ರೋ ವಿಚಾರುಶ್ಚ ಚಾರುಶ್ಚ ದಶಮೋ ಹರೇಃ ।
ಪ್ರದ್ಯುಮ್ನಪ್ರಮುಖಾ ಜಾತಾ ರುಕ್ಮಿಣ್ಯಾಂ ನಾವಮಾಃ ಪಿತುಃ ॥ ೯ ॥

ಆ ಸುಂದರಿಯರು - ತನ್ನ ಆತ್ಮಾನಂದದಲ್ಲೇ ನೆಲೆಸಿರುವ ಭಗವಾನ್ ಶ್ರೀಕೃಷ್ಣನ ಕಮಲದ ಮೊಗ್ಗಿನಂತಹ ಸುಂದರ ಮುಖ, ನೀಳವಾದ ಬಾಹುಗಳು, ಕಮಲದಂಥ ವಿಶಾಲನೇತ್ರಗಳು, ಪ್ರೇಮ ತುಂಬಿದ ಮಂದಹಾಸ, ರಸಮಯ ಕುಡಿನೋಟ, ಮಧುರವಾದ ಮಾತು - ಇವುಗಳಿಂದ ಸ್ವತಃ ಮೋಹಿತರಾಗುತ್ತಿದ್ದರು. ಅವರು ತಮ್ಮ ಶೃಂಗಾರ ಸಂಬಂಧವಾದ ಹಾವ-ಭಾವಗಳಿಂದ ಅವನ ಮನಸ್ಸನ್ನು ತನ್ನ ಕಡೆಗೆ ಸೆಳೆದುಕೊಳ್ಳಲು ಸಮರ್ಥರಾಗಲಿಲ್ಲ. ॥ ೩ ॥ ಅವರು ಹದಿನಾರು ಸಾವಿರಕ್ಕಿಂತಲೂ ಹೆಚ್ಚಿನ ಸಂಖ್ಯೆಯಲ್ಲಿದ್ದರು. ಅವರೆಲ್ಲರೂ ತಮ್ಮ ಮಂದವಾದ ಮುಗುಳ್ನಗೆಯಿಂದ, ಓರೆನೋಟದಿಂದ ಕೂಡಿದ ಹುಬ್ಬುಗಳ ಸಂಕೇತದಿಂದ, ಕಾಮ-ಕಲೆಯಭಾವಗಳಿಂದ ತುಂಬಿದ ಪ್ರೇಮಬಾಣಗಳನ್ನು ಪ್ರಯೋಗಿಸುತ್ತಿದ್ದರು. ಆದರೆ ಯಾವುದೇ ವಿಧದಿಂದ, ಯಾವುದೇ ಸಾಧನೆಯಿಂದ ಅವರು ಭಗವಂತನ ಮನ-ಇಂದ್ರಿಯಗಳಲ್ಲಿ ಚಂಚಲತೆಯನ್ನು ಉಂಟುಮಾಡಲು ಅಸಮರ್ಥರಾಗಿದ್ದರು. ॥ ೪ ॥ ಪರೀಕ್ಷಿತನೇ! ಬ್ರಹ್ಮಾದಿ ಮಹಾ-ಮಹಾ ದೇವತೆಗಳೂ ಕೂಡ ಭಗವಂತನ ವಾಸ್ತವಿಕ ಸ್ವರೂಪವನ್ನು ಅಥವಾ ಅವನನ್ನು ಪಡೆಯುವ ಮಾರ್ಗವನ್ನು ತಿಳಿಯುತ್ತಿರಲಿಲ್ಲ. ಅಂತಹ ರಮಾರಮಣ ಭಗವಾನ್ ಶ್ರೀಕೃಷ್ಣನು ಆ ಸ್ತ್ರೀಯರಿಗೆ ಪತಿಯಾಗಿ ದೊರಕಿದ್ದನು. ಈಗ ನಿತ್ಯ-ನಿರಂತರ ಅವರ ಪ್ರೇಮ-ಆನಂದದ ಅಭಿವೃದ್ಧಿಯಾಗುತ್ತಲೇ ಇತ್ತು. ಅವರು ಪ್ರೇಮತುಂಬಿದ ಮಂದಹಾಸದಿಂದ, ಕುಡಿನೋಟದಿಂದ, ನವ ಸಮಾಗಮದ ಲಾಲಸೆಗಳಿಂದ ಭಗವಂತನ ಸೇವೆ ಮಾಡುತ್ತಾ ಇದ್ದರು. ॥ ೫ ॥ ಅವರಲ್ಲಿ ಎಲ್ಲ ಪತ್ನಿಯರೊಂದಿಗೆ ಸೇವೆಮಾಡುವಂತಹ ನೂರಾರು ದಾಸಿಯರಿರುತ್ತಿದ್ದರು. ಹೀಗಿದ್ದರೂ ಅವರ ಅರಮನೆಗೆ ಭಗವಂತನು ದಯಮಾಡಿಸಿದಾಗ ಅವರು ಸ್ವತಃ ಮುಂದೆ ಬಂದು ಆದರದಿಂದ ಅವನನ್ನು ಸ್ವಾಗತಿಸಿ ಶ್ರೇಷ್ಠ ಆಸನದಲ್ಲಿ ಕುಳ್ಳಿರಿಸಿ, ಉತ್ತಮ ಸಾಮಗ್ರಿಗಳಿಂದ ಅವನನ್ನು ಪೂಜಿಸಿ, ಚರಣಕಮಲಗಳನ್ನು ತೊಳೆದು ತಾಂಬೂಲವನ್ನಿತ್ತು, ಕಾಲುಗಳನ್ನು ಒತ್ತಿ ಅವನ ಬಳಲಿಕೆಯನ್ನು ದೂರಗೊಳಿಸುತ್ತಿದ್ದರು. ಬೀಸಣಿಕೆಯಿಂದ ಗಾಳಿಹಾಕಿ, ಸುಗಂಧ ದ್ರವ್ಯ-ಚಂದನವನ್ನು ಪೂಸುವರು. ಹೂವಿನ ಹಾರವನ್ನು ತೊಡಿಸುವರು. ಕೂದಲನ್ನು ಸರಿಪಡಿಸುವರು. ಸ್ನಾನಮಾಡಿಸುವರು, ಮಲಗಿಸುವರು. ಷಡ್ರಸೋಪೇತವಾದ ಭೋಜನವನ್ನು ಮಾಡಿಸುವರು - ಹೀಗೆ ತಮ್ಮ ಕೈಗಳಿಂದ ಭಗವಂತನ ಸೇವೆ ಮಾಡುತ್ತಿದ್ದರು. ॥ ೬ ॥

ಪರೀಕ್ಷಿತನೇ! ಭಗವಾನ್ ಶ್ರೀಕೃಷ್ಣನ ಪ್ರತಿಯೋರ್ವ ಪತ್ನಿಯರಲ್ಲಿ ಹತ್ತತ್ತು ಪುತ್ರರು ಹುಟ್ಟಿದರೆಂದು ನಾನು ಹೇಳಿಬಿಟ್ಟಿದ್ದೆ. ಆ ರಾಣಿಯರಲ್ಲಿ ಎಂಟು ಮಂದಿ ಪಟ್ಟದರಸಿಯರಿದ್ದರು. ಅವರ ವಿವಾಹದ ಕಥೆಯನ್ನು ಮೊದಲೇ ವರ್ಣಿಸಿರುವೆನು. ಈಗ ಪ್ರದ್ಯುಮ್ನನೇ ಮುಂತಾದ ಅವನ ಪುತ್ರರನ್ನು ವರ್ಣಿಸುವೆನು. ॥ ೭ ॥ ಪ್ರದ್ಯುಮ್ನ, ಚಾರುದೇಷ್ಣ, ಸುದೇಷ್ಣ, ಪರಾಕ್ರಮಿ ಚಾರುದೇಹ, ಸುಚಾರು, ಚಾರುಗುಪ್ತ, ಭದ್ರಚಾರು, ಚಾರುಚಂದ್ರ, ವಿಚಾರು ಮತ್ತು ಚಾರು ಎಂಬ ಹತ್ತು ಪುತ್ರರು ರುಕ್ಮಿಣಿಯ ಗರ್ಭದಿಂದ ಹುಟ್ಟಿದ್ದರು. ಇವರೆಲ್ಲರೂ ತಂದೆಯಾದ ಭಗವಾನ್ ಶ್ರೀಕೃಷ್ಣನಿಗೆ ಯಾವುದರಲ್ಲಿಯೂ ಕಡಿಮೆಯಾಗಿರಲಿಲ್ಲ. ॥ ೮-೯ ॥

ಭಾನುಃ ಸುಭಾನುಃ ಸ್ವರ್ಭಾನುಃ ಪ್ರಭಾನುರ್ಭಾನುಮಾಂಸ್ತಥಾ ।
ಚಂದ್ರಭಾನುರ್ಬೃಹದ್ಭಾನುರತಿಭಾನುಸ್ತಥಾಷ್ಟಮಃ
॥ ೧೦ ॥

ಶ್ರೀಭಾನುಃ ಪ್ರತಿಭಾನುಶ್ಚ ಸತ್ಯಭಾಮಾತ್ಮಜಾ ದಶ ।
ಸಾಂಬಃ ಸುಮಿತ್ರಃ ಪುರುಜಿಚ್ಛತಜಿಚ್ಚ ಸಹಸ್ರಜಿತ್
॥ ೧೧ ॥

ವಿಜಯಶ್ಚಿತ್ರಕೇತುಶ್ಚ ವಸುಮಾನ್ ದ್ರವಿಡಃ ಕ್ರತುಃ ।
ಜಾಂಬವತ್ಯಾಃ ಸುತಾ ಹ್ಯೇತೇ ಸಾಂಬಾದ್ಯಾಃ ಪಿತೃಸಮ್ಮತಾಃ
॥ ೧೨ ॥

ವೀರಶ್ಚಂದ್ರೋಽಶ್ವಸೇನಶ್ಚ ಚಿತ್ರಗುರ್ವೇಗವಾನ್ವೃಷಃ ।
ಆಮಃ ಶಂಕುರ್ವಸುಃ ಶ್ರೀಮಾನ್ ಕುಂತಿರ್ನಾಗ್ನಜಿತೇಃ ಸುತಾಃ
॥ ೧೩ ॥

ಶ್ರುತಃ ಕವಿರ್ವೃಷೋ ವೀರಃ ಸುಬಾಹುರ್ಭದ್ರ ಏಕಲಃ ।
ಶಾಂತಿರ್ದರ್ಶಃ ಪೂರ್ಣಮಾಸಃ ಕಾಲಿಂದ್ಯಾಃ ಸೋಮಕೋಽವರಃ
॥ ೧೪ ॥

ಪ್ರಘೋಷೋ ಗಾತ್ರವಾನ್ಸಿಂಹೋ ಬಲಃ ಪ್ರಬಲ ಊರ್ಧ್ವಗಃ ।
ಮಾದ್ರ್ಯಾಃ ಪುತ್ರಾ ಮಹಾಶಕ್ತಿಃ ಸಹ ಓಜೋಽಪರಾಜಿತಃ
॥ ೧೫ ॥

ವೃಕೋ ಹರ್ಷೋಽನಿಲೋ ಗೃಧ್ರೋ ವರ್ಧನೋಽನ್ನಾದ ಏವ ಚ ।
ಮಹಾಶಃ ಪಾವನೋ ವಹ್ನಿರ್ಮಿತ್ರವಿಂದಾತ್ಮಜಾಃ ಕ್ಷುಧಿಃ
॥ ೧೬ ॥

ಸಂಗ್ರಾಮಜಿದ್ಬೃಹತ್ಸೇನಃ ಶೂರಃ ಪ್ರಹರಣೋಽರಿಜಿತ್ ।
ಜಯಃ ಸುಭದ್ರೋ ಭದ್ರಾಯಾ ವಾಮ ಆಯುಶ್ಚ ಸತ್ಯಕಃ
॥ ೧೭ ॥

ದೀಪ್ತಿಮಾಂಸ್ತಾಮ್ರತಪ್ತಾದ್ಯಾ ರೋಹಿಣ್ಯಾಸ್ತನಯಾ ಹರೇಃ ।
ಪ್ರದ್ಯುಮ್ನಾಚ್ಚಾನಿರುದ್ಧೋಽಭೂದ್ರುಕ್ಮವತ್ಯಾಂ ಮಹಾಬಲಃ
॥ ೧೮ ॥

ಪುತ್ರ್ಯಾಂ ತು ರುಕ್ಮಿಣೋ ರಾಜನ್ ನಾಮ್ನಾ ಭೋಜಕಟೇ ಪುರೇ ।
ಏತೇಷಾಂ ಪುತ್ರಪೌತ್ರಾಶ್ಚ ಬಭೂವುಃ ಕೋಟಿಶೋ ನೃಪ ।
ಮಾತರಃ ಕೃಷ್ಣಜಾತಾನಾಂ ಸಹಸ್ರಾಣಿ ಚ ಷೋಡಶ
॥ ೧೯ ॥

ರಾಜೋವಾಚ

ಕಥಂ ರುಕ್ಮ್ಯರಿಪುತ್ರಾಯ ಪ್ರಾದಾದ್ದುಹಿತರಂ ಯುಧಿ ।
ಕೃಷ್ಣೇನ ಪರಿಭೂತಸ್ತಂ ಹಂತುಂ ರಂಧ್ರಂ ಪ್ರತೀಕ್ಷತೇ ।
ಏತದಾಖ್ಯಾಹಿ ಮೇ ವಿದ್ವನ್ ದ್ವಿಷೋರ್ವೈವಾಹಿಕಂ ಮಿಥಃ
॥ ೨೦ ॥

ಅನಾಗತಮತೀತಂ ಚ ವರ್ತಮಾನಮತೀಂದ್ರಿಯಮ್ ।
ವಿಪ್ರಕೃಷ್ಟಂ ವ್ಯವಹಿತಂ ಸಮ್ಯಕ್ ಪಶ್ಯಂತಿ ಯೋಗಿನಃ
॥ ೨೧ ॥

ಸತ್ಯಭಾಮೆಯಲ್ಲಿಯೂ ಭಾನು, ಸುಭಾನು, ಸ್ವರ್ಭಾನು, ಪ್ರಭಾನು, ಭಾನುಮಂತ, ಚಂದ್ರಭಾನು, ಬೃಹದ್ಭಾನು, ಅತಿಭಾನು, ಶ್ರೀಭಾನು ಮತ್ತು ಪ್ರತಿಭಾನು ಎಂಬ ಹತ್ತು ಪುತ್ರರು ಹುಟ್ಟಿದರು. ಜಾಂಬವತಿಯಲ್ಲಿಯೂ - ಸಾಂಬ, ಸುಮಿತ್ರ, ಪುರುಜಿತ್, ಶತಜಿತ್, ಸಹಸ್ರಜಿತ್, ವಿಜಯ, ಚಿತ್ರಕೇತು, ವಸುಮಾನ್, ದ್ರವಿಡ ಮತ್ತು ಕ್ರತು ಎಂಬ ಹತ್ತ ಪುತ್ರರುದಿಸಿದರು. ಇವರೆಲ್ಲರೂ ಶ್ರೀಕೃಷ್ಣನಿಗೆ ಪ್ರಿಯರಾಗಿದ್ದರು. ॥ ೧೦-೧೨ ॥ ನಾಗ್ನಜಿತಿ ಸತ್ಯೆಯಲ್ಲಿಯೂ ವೀರ, ಚಂದ್ರ, ಅಶ್ವಸೇನ, ಚಿತ್ರಗು, ವೇಗವಾನ್, ವೃಷ, ಆಮ, ಶಂಕು, ವಸು ಮತ್ತು ಪರಮತೇಜಸ್ವಿಯಾದ ಕುಂತಿ ಎಂಬ ಹತ್ತು ಮಕ್ಕಳಾದರು. ॥ ೧೩ ॥ ಕಾಲಿಂದಿಗೆ ಶ್ರುತ, ಕವಿ, ವೃಷ, ವೀರ, ಸುಬಾಹು, ಭದ್ರ, ಶಾಂತಿ, ದರ್ಶ, ಪೂರ್ಣಮಾಸ ಮತ್ತು ಸೋಮಕ ಎಂಬ ಪುತ್ರರಿದ್ದರು. ॥ ೧೪ ॥ ಮದ್ರದೇಶದ ರಾಜಕುಮಾರಿ ಲಕ್ಷ್ಮಣೆಯ ಗರ್ಭದಲ್ಲಿ-ಪ್ರಘೋಷ, ಗಾತ್ರವಾನ್, ಸಿಂಹ, ಬಲ, ಪ್ರಬಲ, ಊರ್ಧ್ವಗ, ಮಹಾಶಕ್ತಿ, ಸಹ, ಓಜ ಮತ್ತು ಅಪರಾಜಿತರೆಂಬ ಹತ್ತು ಮಕ್ಕಳು ಹುಟ್ಟಿದ್ದರು. ॥ ೧೫ ॥ ಮಿತ್ರವಿಂದೆಯಲ್ಲಿ ವೃಕ, ಹರ್ಷ, ಅನಿಲ, ಗೃಧ್ರ, ವರ್ಧನ, ಅನ್ನಾದ, ಮಹಾಶ, ಪಾವನ, ವಹ್ನಿ ಮತ್ತು ಕ್ಷುಧಿ ಎಂಬ ಹತ್ತು ಪುತ್ರರು ಹುಟ್ಟಿದ್ದರು. ॥ ೧೬ ॥ ಭದ್ರಾ ಎಂಬುವಳಲ್ಲಿ - ಸಂಗ್ರಾಮಜಿತ್, ಬೃಹತ್ಸೇನ, ಶೂರ, ಪ್ರಹರಣ, ಅರಿಜಿತ್, ಜಯ, ಸುಭದ್ರ, ವಾಮ, ಆಯು ಮತ್ತು ಸತ್ಯಕ ಎಂಬ ಹತ್ತು ಪುತ್ರರು ಹುಟ್ಟಿದರು. ॥ ೧೭ ॥ ಈ ಎಂಟು ಪಟ್ಟರಾಣಿಯರಲ್ಲದೆ ಭಗವಂತನಿಗೆ ರೋಹಿಣಿಯೇ ಮೊದಲಾದ ಹದಿನಾರು ಸಾವಿರದ ಒಂದು ನೂರು ಇನ್ನೂ ಪತ್ನಿಯರಿದ್ದರು. ರೋಹಿಣಿಯ ಗರ್ಭದಲ್ಲಿ ದೀಪ್ತಮಾನ್, ತಾಮ್ರತಪ್ತ ಮೊದಲಾದ ಹತ್ತು-ಹತ್ತು ಮಂದಿ ಪುತ್ರರು ಹುಟ್ಟಿದರು. ರುಕ್ಮಿಣೀ ನಂದನನಾದ ಪ್ರದ್ಯುಮ್ನನಿಗೆ ಮಾಯಾವತಿಯಲ್ಲದೆ ಭೋಜಕಟ ನಿವಾಸಿಯಾದ ರುಕ್ಮಿಯ ಮಗಳಾದ ರುಕ್ಮವತಿ ಯೊಡನೆಯೂ ವಿವಾಹವಾಗಿತ್ತು. ಪರೀಕ್ಷಿತನೇ! ಶ್ರೀಕೃಷ್ಣನ ಮಕ್ಕಳ ತಾಯಂದಿರೇ ಹದಿನಾರು ಸಾವಿರಕ್ಕಿಂತಲೂ ಹೆಚ್ಚಾಗಿದ್ದರು. ಆದರಿಂದ ಅವನ ಪುತ್ರರು-ಪೌತ್ರರು ಇವರ ಸಂಖ್ಯೆಯು ಕೋಟಿಯನ್ನೂ ಮೀರಿತ್ತು. ॥ ೧೮-೧೯ ॥

**ಪರೀಕ್ಷಿದ್ರಾಜನು ಕೇಳಿದನು** - ಮಹಾಮುನಿಗಳೇ! ನೀವೀಗ ರುಕ್ಮಿಯ ಮಗಳೊಡನೆ ಪ್ರದ್ಯುಮ್ನನ ವಿವಾಹವಾಯಿತೆಂದು ಹೇಳಿದಿರಿ. ಪರಮ ಶತ್ರುವಾದ ಶ್ರೀಕೃಷ್ಣನ ಮಗನಿಗೆ ಏಕೆ ರುಕ್ಮಿಯು ತನ್ನ ಮಗಳನ್ನು ಕೊಟ್ಟನು? ಶ್ರೀಕೃಷ್ಣನಿಂದ ಪರಾಜಿತನಾಗಿ ಅವಮಾನಿತನಾಗಿದ್ದ ಅವನು ಶ್ರೀಕೃಷ್ಣನನ್ನೇ ಸಂಹರಿಸಲು ಸಮಯ ಕಾಯುತ್ತಿದ್ದನು. ಇಬ್ಬರು ವೈರಿಗಳ ನಡುವೆ ವಿವಾಹ ಸಂಬಂಧವು ಹೇಗೆ ಏರ್ಪಟ್ಟಿತೆಂಬುದನ್ನು ದಯಮಾಡಿ ಹೇಳಿರಿ. ॥ ೨೦ ॥ ಬ್ರಾಹ್ಮಣ ಶ್ರೇಷ್ಠರೇ! ಯೋಗಿಗಳಾದವರು ಭೂತ-ಭವಿಷ್ಯದ್ವರ್ತಮಾನಗಳನ್ನು ತಿಳಿದವರಾಗಿರುತ್ತಾರೆ. ಇಂದ್ರಿಯಗಳಿಗೆ ಗೋಚರಿಸದೇ ಇರುವುದನ್ನು, ದೂರದಲ್ಲಿರುವುದನ್ನೂ, ಮರೆಯಾಗಿರುವುದನ್ನೂ ತಿಳಿಯಲು ಅವರು ಸಮರ್ಥರು. ತಮ್ಮಂತಹ ಯೋಗಿಗಳಿಗೆ ತಿಳಿಯದೇ ಇರುವ ವಿಷಯವೇ ಇಲ್ಲ, ಆದ್ದರಿಂದ ನಿಗೂಢವಾಗಿರುವ ಈ ವಿಷಯವನ್ನು ನನಗೆ ಹೇಳಿರಿ. ॥ ೨೧ ॥

ಶ್ರೀಶುಕ ಉವಾಚ

ವೃತಃ ಸ್ವಯಂವರೇ ಸಾಕ್ಷಾದನಂಗೋಽಂಗಯುತಸ್ತಯಾ ।
ರಾಜ್ಞಃ ಸಮೇತಾನ್ನಿರ್ಜಿತ್ಯ ಜಹಾರೈಕರಥೋ ಯುಧಿ
॥ ೨೨ ॥

ಯದ್ಯಪ್ಯನುಸ್ಮರನ್ ವೈರಂ ರುಕ್ಮೀ ಕೃಷ್ಣಾವಮಾನಿತಃ ।
ವ್ಯತರದ್ಭಾಗಿನೇಯಾಯ ಸುತಾಂ ಕುರ್ವನ್ಸ್ವಸುಃ ಪ್ರಿಯಮ್
॥ ೨೩ ॥

ರುಕ್ಮಿಣ್ಯಾಸ್ತನಯಾಂ ರಾಜನ್ ಕೃತವರ್ಮಸುತೋ ಬಲೀ ।
ಉಪಯೇಮೇ ವಿಶಾಲಾಕ್ಷೀಂ ಕನ್ಯಾಂ ಚಾರುಮತೀಂ ಕಿಲ
॥ ೨೪ ॥

ದೌಹಿತ್ರಾಯಾನಿರುದ್ಧಾಯ ಪೌತ್ರೀಂ ರುಕ್ಮ್ಯದದಾದ್ಧರೇಃ ।
ರೋಚನಾಂ ಬದ್ಧವೈರೋಽಪಿ ಸ್ವಸುಃ ಪ್ರಿಯಚಿಕೀರ್ಷಯಾ ।
ಜಾನನ್ನಧರ್ಮಂ ತದ್ಯೌನಂ ಸ್ನೇಹಪಾಶಾನುಬಂಧನಃ
॥ ೨೫ ॥

ತಸ್ಮಿನ್ನಭ್ಯುದಯೇ ರಾಜನ್ ರುಕ್ಮಿಣೀ ರಾಮಕೇಶವೌ ।
ಪುರಂ ಭೋಜಕಟಂ ಜಗ್ಮುಃ ಸಾಂಬಪ್ರದ್ಯುಮ್ನಕಾದಯಃ
॥ ೨೬ ॥

ತಸ್ಮಿನ್ ನಿವೃತ್ತ ಉದ್ವಾಹೇ ಕಾಲಿಂಗಪ್ರಮುಖಾ ನೃಪಾಃ ।
ದೃಪ್ತಾಸ್ತೇ ರುಕ್ಮಿಣಂ ಪ್ರೋಚುರ್ಬಲಮಕ್ಷೈರ್ವಿನಿರ್ಜಯ
॥ ೨೭ ॥

ಅನಕ್ಷಜ್ಞೋ ಹ್ಯಯಂ ರಾಜನ್ನಪಿ ತದ್ವ್ಯಸನಂ ಮಹತ್ ।
ಇತ್ಯುಕ್ತೋ ಬಲಮಾಹೂಯ ತೇನಾಕ್ಷೈ ರುಕ್ಮ್ಯದೀವ್ಯತ
॥ ೨೮ ॥

ಶತಂ ಸಹಸ್ರಮಯುತಂ ರಾಮಸ್ತತ್ರಾದದೇ ಪಣಮ್ ।
ತಂ ತು ರುಕ್ಮ್ಯಜಯತ್ತತ್ರ ಕಾಲಿಂಗಃ ಪ್ರಾಹಸದ್ಬಲಮ್ ।
ದಂತಾನ್ ಸಂದರ್ಶಯನ್ನುಚ್ಚೈರ್ನಾಮೃಷ್ಯತ್ತದ್ಧಲಾಯುಧಃ
॥ ೨೯ ॥

ತತೋ ಲಕ್ಷಂ ರುಕ್ಮ್ಯಗೃಹ್ಣಾದ್ ಗ್ಲಹಂ ತತ್ರಾಜಯದ್ಬಲಃ ।
ಜಿತವಾನಹಮಿತ್ಯಾಹ ರುಕ್ಮೀ ಕೈತವಮಾಶ್ರಿತಃ
॥ ೩೦ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** - ಪರೀಕ್ಷಿತನೇ! ಪ್ರದ್ಯುಮ್ನನು ಮೂರ್ತಿಮಂತನಾದ ಕಾಮದೇವನೇ ಆಗಿದ್ದನು. ಅವನ ಸೌಂದರ್ಯ ಮತ್ತು ಗುಣಗಳಿಗೆ ಮಾರುಹೋಗಿ ರುಕ್ಮವತಿಯು ಸ್ವಯಂವರದಲ್ಲಿ ಆವನಿಗೆ ವರಮಾಲೆಯನ್ನು ಹಾಕಿದಳು. ಪ್ರದ್ಯುಮ್ನನು ಒಬ್ಬಂಟಿಗನಾಗಿ ಯುದ್ಧದಲ್ಲಿ ಅಲ್ಲಿ ನೆರೆದ ರಾಜರನ್ನು ಗೆದ್ದು ರುಕ್ಮವತಿಯನ್ನು ಅಪಹರಿಸಿಕೊಂಡು ಬಂದನು. ॥ ೨೨ ॥ ಶ್ರೀಕೃಷ್ಣನಿಂದ ಅಪಮಾನಿತನಾದ ಕಾರಣ ರುಕ್ಮಿಯ ಹೃದಯದಲ್ಲಿ ಕ್ರೋಧಾಗ್ನಿಯು ಇನ್ನೂ ಆರಿರಲಿಲ್ಲ. ಇನ್ನೂ ಅವನೊಂದಿಗೆ ವೈರವನ್ನು ಸಾಧಿಸುತ್ತಲೇ ಇದ್ದನು. ಹೀಗಿದ್ದರೂ ತನ್ನ ತಂಗಿ ರುಕ್ಮಿಣಿಯನ್ನು ಸಂತೋಷಗೊಳಿಸಲಿಕ್ಕಾಗಿ ಅವನು ತನ್ನ ಸೋದರಳಿಯನಾದ ಪ್ರದ್ಯುಮ್ನನಿಗೆ ತನ್ನ ಮಗಳನ್ನು ವಿವಾಹ ಮಾಡಿಕೊಟ್ಟನು. ॥ ೨೩ ॥ ಪರೀಕ್ಷಿತನೇ! ಹತ್ತು ಪುತ್ರರಲ್ಲದೆ ರುಕ್ಮಿಣಿಗೆ ಪರಮ ಸುಂದರಳಾದ, ದೊಡ್ಡ-ದೊಡ್ಡ ಕಣ್ಣುಗಳುಳ್ಳ ಚಾರುಮತಿ ಎಂಬ ಕನ್ಯೆಯೋರ್ವಳಿದ್ದಳು. ಕೃತವರ್ಮನ ಪುತ್ರನಾದ ಬಲಿಯು ಆಕೆಯೊಂದಿಗೆ ವಿವಾಹವಾಗಿದ್ದನು. ॥ ೨೪ ॥

ಪರೀಕ್ಷಿತನೇ! ರುಕ್ಮಿಗೆ ಭಗವಾನ್ ಶ್ರೀಕೃಷ್ಣನೊಂದಿಗೆ ಹಳೆಯ ವೈರವಿದ್ದರೂ ತನ್ನ ತಂಗಿಗೆ ಸಂತೋಷವನ್ನುಂಟುಮಾಡಲು ಅವನು ತನ್ನ ಮೊಮ್ಮಗಳಾದ ರೋಚನೆಯ ವಿವಾಹವನ್ನು ರುಕ್ಮಿಣಿಯ ಮೊಮ್ಮಗನಾದ ಅನಿರುದ್ಧನೊಂದಿಗೆ ಮಾಡಿಬಿಟ್ಟನು. ಈ ಪ್ರಕಾರದ ವಿವಾಹವು ಧರ್ಮಕ್ಕೆ ಅನುಕೂಲವಿಲ್ಲದಿದ್ದರೂ ಸ್ನೇಹಸಂಬಂಧದಲ್ಲಿ ಬಂಧಿತನಾದ ರುಕ್ಮಿಯು ಹೀಗೆ ಮಾಡಿದ್ದನು. ॥ ೨೫ ॥ ರಾಜೇಂದ್ರನೇ! ಅನಿರುದ್ಧನ ವಿವಾಹ ಮಹೋತ್ಸವದಲ್ಲಿ ಪಾಲ್ಗೊಳ್ಳಲು ಭಗವಾನ್ ಶ್ರೀಕೃಷ್ಣ ಬಲರಾಮ, ರುಕ್ಮಿಣೀ, ಪ್ರದ್ಯುಮ್ನ, ಸಾಂಬ ಮೊದಲಾದ ದ್ವಾರಕಾ ನಿವಾಸಿಗಳು ಭೋಜಕಟ ನಗರಕ್ಕೆ ಬಂದಿದ್ದರು. ॥ ೨೬॥ ವಿವಾಹ ಮಹೋತ್ಸವವು ಸಾಂಗವಾಗಿ ನೆರವೇರಿದ ನಂತರ ಗರ್ವಿಷ್ಠರಾಗಿದ್ದ ಕಳಿಂಗನೇ ಮೊದಲಾದ ರಾಜರು ಪಗಡೆಯಾಟದಲ್ಲಿ ಬಲರಾಮನನ್ನು ಸೋಲಿಸುವಂತೆ ರುಕ್ಮಿಯನ್ನು ಪ್ರಚೋದಿಸಿದರು. ॥ ೨೭ ॥

ಬಲರಾಮನು ಪಗಡೆಯಾಟದಲ್ಲಿ ಚತುರನಾಗಿರಲಿಲ್ಲ. ಆದರೆ ಅವನಿಗೆ ಆಟವಾಡುವುದರಲ್ಲಿ ಆಸಕ್ತಿ ಇತ್ತು. ಕಳಿಂಗರೇ ಮೊದಲಾದ ರಾಜರ ಪ್ರೇರಣೆಯಿಂದ ರುಕ್ಮಿಯು ಬಲರಾಮನನ್ನು ಆಟಕ್ಕೆ ಆಹ್ವಾನಿಸಿ ಬಲರಾಮನೊಂದಿಗೆ ಪಗಡೆಯಾಡತೊಡಗಿದನು. ॥೨೮॥ ಬಲರಾಮನು ಮೊದಲಿಗೆ ನೂರು, ಮತ್ತೆ ಸಾವಿರ, ಬಳಿಕ ಹತ್ತು ಸಾವಿರ ವರಹಗಳನ್ನು ಪಣಕ್ಕೊಡಿದನು. ಅವನ್ನು ರುಕ್ಮಿಯು ಗೆದ್ದುಕೊಂಡನು. ರುಕ್ಮಿಯು ಗೆದ್ದಾಗ ಕಳಿಂಗನರೇಶನು ಹಲ್ಕಿರಿದು ಗಹ-ಗಹಿಸಿ ನಗುತ್ತಾ ಬಲರಾಮನ ಉಪಹಾಸ್ಯ ಮಾಡಿದನು. ಬಲರಾಮನಿಗೆ ಆ ನಗುವು ಸಹಿಸಲಾಗಲಿಲ್ಲ. ಅವನು ಸ್ವಲ್ಪ ಸಿಟ್ಟಾದನು. ॥ ೨೯ ॥ ಅನಂತರ ರುಕ್ಮಿಯು ಒಂದು ಲಕ್ಷ ವರಹ ಪಣಕ್ಕೊಡ್ಡಿದನು. ಅದನ್ನು ಬಲರಾಮನು ಗೆದ್ದುಕೊಂಡನು. ಆದರೆ ಧೂರ್ತನಾದ ರುಕ್ಮಿಯು 'ನಾನೇ ಗೆದ್ದೆ' ಎಂದು ಹೇಳತೊಡಗಿದ ॥ ೩೦ ॥

ಮನ್ಯುನಾ ಕ್ಷುಭಿತಃ ಶ್ರೀಮಾನ್ ಸಮುದ್ರ ಇವ ಪರ್ವಣಿ ।
ಜಾತ್ಯಾರುಣಾಕ್ಷೋಽತಿರುಷಾ ನ್ಯರ್ಬುದಂ ಗ್ಲಹಮಾದದೇ
॥ ೩೧ ॥

ತಂ ಚಾಪಿ ಜಿತವಾನ್ ರಾಮೋ ಧರ್ಮೇಣ ಛಲಮಾಶ್ರಿತಃ ।
ರುಕ್ಮೀ ಜಿತಂ ಮಯಾತ್ರೇಮೇ ವದಂತು ಪ್ರಾಶ್ನಿಕಾ ಇತಿ
॥ ೩೨ ॥

ತದಾಬ್ರವೀನ್ನಭೋವಾಣೀ ಬಲೇನೈವ ಜಿತೋ ಗ್ಲಹಃ ।
ಧರ್ಮತೋ ವಚನೇನೈವ ರುಕ್ಮೀ ವದತಿ ವೈ ಮೃಷಾ
॥ ೩೩ ॥

ತಾಮನಾದೃತ್ಯ ವೈದರ್ಭೋ ದುಷ್ಟರಾಜನ್ಯಚೋದಿತಃ ।
ಸಂಕರ್ಷಣಂ ಪರಿಹಸನ್ ಬಭಾಷೇ ಕಾಲಚೋದಿತಃ
॥ ೩೪ ॥

ನೈವಾಕ್ಷಕೋವಿದಾ ಯೂಯಂ ಗೋಪಾಲಾ ವನಗೋಚರಾಃ ।
ಅಕ್ಷೈರ್ದೀವ್ಯಂತಿ ರಾಜಾನೋ ಬಾಣೈಶ್ಚ ನ ಭವಾದೃಶಾಃ
॥ ೩೫ ॥

ರುಕ್ಮಿಣೈವಮಧಿಕ್ಷಿಪ್ತೋ ರಾಜಭಿಶ್ಚೋಪಹಾಸಿತಃ ।
ಕ್ರುದ್ಧಃ ಪರಿಘಮುದ್ಯಮ್ಯ ಜಘ್ನೇ ತಂ ನೃಮ್ಣಸಂಸದಿ
॥ ೩೬ ॥

ಕಲಿಂಗರಾಜಂ ತರಸಾ ಗೃಹೀತ್ವಾ ದಶಮೇ ಪದೇ ।
ದಂತಾನಪಾತಯತ್ಕ್ರುದ್ಧೋ ಯೋಽಹಸದ್ವಿವೃತೈರ್ದ್ವಿಜೈಃ
॥ ೩೭ ॥

ಅನ್ಯೇ ನಿರ್ಭಿನ್ನಬಾಹೂರುಶಿರಸೋ ರುಧಿರೋಕ್ಷಿತಾಃ ।
ರಾಜಾನೋ ದುದ್ರುವುರ್ಭೀತಾ ಬಲೇನ ಪರಿಘಾರ್ದಿತಾಃ
॥ ೩೮ ॥

ನಿಹತೇ ರುಕ್ಮಿಣಿ ಶ್ಯಾಲೇ ನಾಬ್ರವೀತ್ ಸಾಧ್ವಸಾಧು ವಾ ।
ರುಕ್ಮಿಣೀಬಲಯೋ ರಾಜನ್ ಸ್ನೇಹಭಂಗಭಯಾದ್ಧರಿಃ
॥ ೩೯ ॥

ತತೋಽನಿರುದ್ಧಂ ಸಹ ಸೂರ್ಯಯಾ ವರಂ
ರಥಂ ಸಮಾರೋಪ್ಯ ಯಯುಃ ಕುಶಸ್ಥಲೀಮ್ ।
ರಾಮಾದಯೋ ಭೋಜಕಟಾದ್ದಶಾರ್ಹಾಃ
ಸಿದ್ಧಾಖಿಲಾರ್ಥಾ ಮಧುಸೂದನಾಶ್ರಯಾಃ ॥ ೪೦ ॥

ಇದರಿಂದ ಬಲರಾಮನು ಕೆಂಡಾಮಂಡಲನಾದನು. ಪೂರ್ಣಿಮೆಯ ದಿನ ಸಮುದ್ರಕ್ಕೆ ಭರ್ತಿಬರುವಂತೆ ಅವನು ಕ್ಷೋಭೆಗೊಂಡನು. ಸ್ವಾಭಾವಿಕವಾಗಿಯೇ ಕೆಂಪಾಗಿದ್ದ ಅವನ ಕಣ್ಣುಗಳು ಕ್ರೋಧದಿಂದ ಕಿಡಿಕಾರಿದವು. ಈಗ ಅವನು ಹತ್ತು ಕೋಟಿ ವರಹಗಳನ್ನು ಪಣಕ್ಕೆ ಒಡ್ಡಿದನು. ॥ ೩೧ ॥ ಈ ಬಾರಿಯೂ ದ್ಯೂತದ ನಿಯಮದಂತೆ ಬಲರಾಮನೇ ಗೆದ್ದನು. ಆದರೆ ರುಕ್ಮಿಯು 'ನಾನೇಗೆದ್ದೆ' ಎಂದು ಬೊಬ್ಬೆ ಹಾಕುತ್ತಾ ಈ ವಿಷಯದ ವಿಶೇಷಜ್ಞನಾದ ಕಳಿಂಗರಾಜನೇ ಇದನ್ನು ನಿರ್ಣಯಿಸಲಿ ಎಂದು ಹಟಹಿಡಿದನು. ॥ ೩೨ ॥ ಆ ಸಮಯದಲ್ಲಿ ಆಕಾಶವಾಣಿಯೊಂದು ಮೊಳಗಿತು - ಧರ್ಮಪೂರ್ವಕವಾಗಿ ಹೇಳಬೇಕಾದರೆ ಬಲರಾಮನೇ ಈ ಆಟವನ್ನು ಗೆದ್ದಿರುವನು. ನಾನು ಗೆದ್ದೆ ಎಂದು ಹೇಳುವ ರುಕ್ಮಿಯ ಮಾತು ಪೂರ್ಣವಾಗಿ ಸುಳ್ಳಾಗಿದೆ'. ॥ ೩೩ ॥ ರುಕ್ಮಿಯ ತಲೆಯ ಮೇಲೆ ಮೃತ್ಯು ಕುಣಿಯುತ್ತಿತ್ತು. ಜೊತೆಗೆ ಸಂಗಡಿಗರಾದ ದುಷ್ಟರಾಜರು ಅವನನ್ನು ಎತ್ತಿಕಟ್ಟಿದರು. ಇದರಿಂದ ಅವನು ಆಕಾಶವಾಣಿಯನ್ನು ನಿರ್ಲಕ್ಷಿಸಿ ಬಲರಾಮನನ್ನು ಅಪಹಾಸ್ಯ ಮಾಡುತ್ತಾ ಹೀಗೆ ಹೇಳಿದನು. ॥ ೩೪ ॥ ಎಲೈ ಬಲರಾಮಾ ! ಕಾಡಿನಲ್ಲಿ ಹಸುಗಳನ್ನು ಮೇಯಿಸುತ್ತಾ ಸಂಚರಿಸುವ ನೀವು ಅಕ್ಷವಿದ್ಯೆಯನ್ನು ಬಲ್ಲವರಲ್ಲ. ಪಗಡೆಕಾಯಿಗಳಿಂದ ಮತ್ತು ಬಾಣಗಳಿಂದ ನಮ್ಮಂಥ ರಾಜರೇ ಆಟವಾಡುತ್ತಾ ಇರುತ್ತೇವೆ. ನಿಮ್ಮಂಥ ಗೋಪಾಲಕರಲ್ಲ. ॥ ೩೫ ॥ ರುಕ್ಮಿಯು ಮಾಡಿದ ಆಕ್ಷೇಪದಿಂದ ಮತ್ತು ರಾಜರುಗಳ ಉಪಹಾಸದಿಂದ ಬಲರಾಮನು ಅತ್ಯಂತ ಕ್ರುದ್ಧನಾಗಿ ಒಂದು ಪರಿಘಾಯುಧವನ್ನೆತ್ತಿ ಆ ವಿವಾಹದ ಸಭೆಯಲ್ಲೇ ರುಕ್ಮಿಯನ್ನು ಕೊಂದುಹಾಕಿದನು. ॥ ೩೬ ॥ ಕಳಿಂಗ ರಾಜನು ಮೊದಲು ಹಲ್ಕಿರಿದು ನಕ್ಕಿದ್ದನು. ಬಲರಾಮನ ಸಿಟ್ಟನ್ನು ನೋಡಿ ಅಲ್ಲಿಂದ ಓಡಿದನು ; ಆದರೆ ಬಲರಾಮನು ಹತ್ತೇ ಹೆಜ್ಜೆಗಳಲ್ಲಿ ಅವನನ್ನು ಹಿಡಿದು ಕ್ರೋಧದಿಂದ ಅವನ ಹಲ್ಲುಗಳನ್ನು ಉದುರಿಸಿಬಿಟ್ಟನು. ॥ ೩೭ ॥ ಬಲರಾಮನು ತನ್ನ ಪರಿಘಾಯುಧದ ಏಟುಗಳಿಂದ ಇತರ ರಾಜರ ಭುಜ, ತೊಡೆ, ತಲೆಗಳನ್ನು ಒಡೆದುಹಾಕಿದನು. ಅವರೆಲ್ಲರೂ ರಕ್ತದಿಂದ ತೊಯ್ದುಹೋಗಿ ಭಯದಿಂದ ಅಲ್ಲಿಂದ ಓಡಿಹೋದರು. ॥ ೩೮ ॥ ಪರೀಕ್ಷಿತನೇ ! ಭಗವಾನ್ ಶ್ರೀಕೃಷ್ಣನು - ಬಲರಾಮನನ್ನು ಸಮರ್ಥಿಸಿದರೆ ರುಕ್ಮಿಣಿಗೆ ಅಸಮಾಧಾನವಾಗಬಹುದು. ರುಕ್ಮಿಯ ವಧೆಯು ಸರಿಯಲ್ಲವೆಂದು ಹೇಳಿದರೆ ಬಲರಾಮನು ಸಿಟ್ಟಾಗುವನು. ಎಂದು ಯೋಚಿಸಿ ಭಾವಮೈದುನನ ಮೃತ್ಯುವಿನ ವಿಷಯದಲ್ಲಿ ಏನನ್ನೂ ಹೇಳದೆ ಮೌನವಾಗಿದ್ದನು. ॥ ೩೯ ॥ ಹೀಗೆ ಅನಿರುದ್ಧನ ವಿವಾಹವೂ, ಶತ್ರುವಿನ ವಧೆಯೂ ಆದನಂತರ ಭಗವಂತನ ಆಶ್ರಿತನಾದ ಬಲರಾಮನೇ ಮೊದಲಾದ ಯದುವಂಶೀಯರು ನವವಧುವಾದ ರೋಚನೆಯೊಂದಿಗೆ ಅನಿರುದ್ಧನನ್ನು ರಥದಲ್ಲಿ ಕುಳ್ಳಿರಿಸಿಕೊಂಡು ಭೋಜಕಟನಗರದಿಂದ ದ್ವಾರಕಾಪುರಿಗೆ ಪ್ರಯಾಣ ಮಾಡಿದರು. ॥ ೪೦ ॥

*ಅರವತ್ತೊಂದನೆಯ ಅಧ್ಯಾಯವು ಮುಗಿಯಿತು. ॥ ೬೧ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಉತ್ತರಾರ್ಧೇ
ಅನಿರುದ್ಧವಿವಾಹೇ ರುಕ್ಮಿವಧೋ ನಾಮೈಕಷಷ್ಟಿತಮೋಽಧ್ಯಾಯಃ ॥ ೬೧ ॥

# ಅರವತ್ತೆರಡನೆಯ ಅಧ್ಯಾಯ

## ಉಷಾ - ಅನಿರುದ್ಧರ ಮಿಲನ

*ರಾಜೋವಾಚ*

ಬಾಣಸ್ಯ ತನಯಾಮೂಷಾಮುಪಯೇಮೇ ಯದೂತ್ತಮಃ ।
ತತ್ರ ಯುದ್ಧಮಭೂದ್ಘೋರಂ ಹರಿಶಂಕರಯೋರ್ಮಹತ್ ।
ಏತತ್ಸರ್ವಂ ಮಹಾಯೋಗಿನ್ ಸಮಾಖ್ಯಾತುಂ ತ್ವಮರ್ಹಸಿ
॥ ೧ ॥

*ಶ್ರೀಶುಕ ಉವಾಚ*

ಬಾಣಃ ಪುತ್ರಶತಜ್ಯೇಷ್ಠೋ ಬಲೇರಾಸೀನ್ಮಹಾತ್ಮನಃ ।
ಯೇನ ವಾಮನರೂಪಾಯ ಹರಯೇಽದಾಯಿ ಮೇದಿನೀ
॥ ೨ ॥

ತಸ್ಯೌರಸಃ ಸುತೋ ಬಾಣಃ ಶಿವಭಕ್ತಿರತಃ ಸದಾ ।
ಮಾನ್ಯೋ ವದಾನ್ಯೋ ಧೀಮಾಂಶ್ಚ ಸತ್ಯಸಂಧೋ ದೃಢವ್ರತಃ
॥ ೩ ॥

ಶೋಣಿತಾಖ್ಯೇ ಪುರೇ ರಮ್ಯೇ ಸ ರಾಜ್ಯಮಕರೋತ್ಪುರಾ ।
ತಸ್ಯ ಶಂಭೋಃ ಪ್ರಸಾದೇನ ಕಿಂಕರಾ ಇವ ತೇಽಮರಾಃ ।
ಸಹಸ್ರಬಾಹುರ್ವಾದ್ಯೇನ ತಾಂಡವೇಽತೋಷಯನ್ಮೃಡಮ್
॥ ೪ ॥

ಭಗವಾನ್ ಸರ್ವಭೂತೇಶಃ ಶರಣ್ಯೋ ಭಕ್ತವತ್ಸಲಃ ।
ವರೇಣಚ್ಛಂದಯಾಮಾಸ ಸ ತಂ ವವ್ರೇ ಪುರಾಧಿಪಮ್
॥ ೫ ॥

ಸ ಏಕದಾಽಽಹ ಗಿರಿಶಂ ಪಾರ್ಶ್ವಸ್ಥಂ ವೀರ್ಯದುರ್ಮದಃ ।
ಕಿರೀಟೇನಾರ್ಕವರ್ಣೇನ ಸಂಸ್ಪೃಶಂಸ್ತತ್ಪದಾಂಬುಜಮ್
॥ ೬ ॥

ನಮಸ್ಯೇ ತ್ವಾಂ ಮಹಾದೇವ ಲೋಕಾನಾಂ ಗುರುಮೀಶ್ವರಮ್ ।
ಪುಂಸಾಮಪೂರ್ಣಕಾಮಾನಾಂ ಕಾಮಪೂರಾಮರಾಂಘ್ರಿಪಮ್
॥ ೭ ॥

**ಪರೀಕ್ಷಿದ್ರಾಜನು ಕೇಳಿದನು** – ಮಹಾಯೋಗಿಗಳಾದ ಶುಕಮಹರ್ಷಿಗಳೇ ! ಯದುವಂಶ ಶಿರೋಮಣಿ ಅನಿರುದ್ಧನು ಬಾಣಾಸುರನ ಮಗಳಾದ ಉಷೆಯೊಂದಿಗೆ ವಿವಾಹವಾದನು ಮತ್ತು ಈ ಸಂದರ್ಭದಲ್ಲಿ ಭಗವಾನ್ ಶ್ರೀಕೃಷ್ಣನಿಗೂ ಹಾಗೂ ಶಂಕರನಿಗೂ ಘೋರವಾದ ಯುದ್ಧವು ನಡೆಯಿತೆಂದು ನಾನು ಕೇಳಿದ್ದೇನೆ. ತಾವು ದಯಮಾಡಿ ಈ ವೃತ್ತಾಂತವನ್ನು ವಿಸ್ತಾರವಾಗಿ ಹೇಳಿರಿ. ॥ ೧॥

**ಶ್ರೀಶುಕಮಹಾಮುನಿಗಳು ಹೇಳಿದರು** – ಪರೀಕ್ಷಿತ ಮಹಾರಾಜ ! ಮಹಾತ್ಮನಾದ ಬಲಿಯ ಕಥೆಯನ್ನು ನೀನು ಈಗಾಗಲೇ ಕೇಳಿರುವೆ. ಅವನು ವಾಮನರೂಪನಾದ ಭಗವಂತನಿಗೆ ಇಡೀ ಪೃಥಿವಿಯನ್ನೇ ದಾನಮಾಡಿದ್ದನು. ಬಲಿಚಕ್ರವರ್ತಿಗೆ ನೂರು ಮಂದಿ ಮಕ್ಕಳಿದ್ದರು, ಅವರಲ್ಲಿ ಹಿರಿಯವನೇ ಬಾಣಾಸುರ. ॥ ೨ ॥ ದೈತ್ಯರಾಜನಾದ ಬಲಿಯ ಔರಸ ಪುತ್ರನಾದ ಬಾಣಾಸುರನು ಶಿವನಭಕ್ತಿಯಲ್ಲೇ ಸದಾಕಾಲ ನಿರತನಾಗಿರುತ್ತಿದ್ದನು. ಅವನು ಸಮಸ್ತರಿಗೂ ಮಾನ್ಯನಾಗಿದ್ದನು ; ಉದಾರಿಯಾಗಿದ್ದನು. ಅವನು ಮಹಾಬುದ್ಧಿ ಶಾಲಿಯೂ, ಸತ್ಯಸಂಧನೂ, ದೃಢವಾದ ವ್ರತಾನುಷ್ಠಾನ ಉಳ್ಳವನೂ ಆಗಿದ್ದನು. ॥ ೩ ॥ ಆ ದಿನಗಳಲ್ಲಿ ಬಾಣಾಸುರನು ಪರಮರಮಣೀಯವಾದ ಶೋಣಿತಪುರದಲ್ಲಿ ರಾಜ್ಯವಾಳುತ್ತಿದ್ದನು. ಭಗವಾನ್ ಶಂಕರನ ವರಪ್ರಸಾದದಿಂದ ಇಂದ್ರಾದಿ ದೇವತೆಗಳು ಸೇವಕರಂತೆ ಅವನ ಸೇವೆ ಮಾಡುತ್ತಿದ್ದರು. ಅವನಿಗೆ ಸಾವಿರ ತೋಳುಗಳಿದ್ದವು. ಒಂದು ದಿನ ಭಗವಾನ್ ಶಂಕರನು ತಾಂಡವನೃತ್ಯವನ್ನಾಡುತ್ತಿದ್ದಾಗ ಅವನು ತನ್ನ ಸಾವಿರ ಕೈಗಳಿಂದ ಅನೇಕ ವಿಧವಾದ ವಾದ್ಯಗಳನ್ನು ನುಡಿಸಿ ಮೃಡನನ್ನು ಪ್ರಸನ್ನಗೊಳಿಸಿದನು. ॥ ೪ ॥ ಭಗವಂತನಾದ ಶಂಕರನು ನಿಜವಾಗಿಯೂ ಭಕ್ತವತ್ಸಲನೂ, ಶರಣಾಗತ ರಕ್ಷಕನೂ ಆಗಿದ್ದಾನೆ. ಸಮಸ್ತ ಪ್ರಾಣಿಗಳ ಏಕಮಾತ್ರ ಈಶನಾದ ಪ್ರಭುವು ಬಾಣಾಸುರನಲ್ಲಿ ಹೇಳಿದನು – 'ನಿನಗೆ ಇಚ್ಛಿತವಾದ ವರವನ್ನು ಬೇಡು'. ಆಗ ಬಾಣಾಸುರನು – 'ಭಗವಂತಾ! ನೀನು ನನ್ನ ನಗರವನ್ನು ರಕ್ಷಿಸುತ್ತಾ ಇಲ್ಲೆ ಇರಬೇಕೆಂಬುದು ನನ್ನ ಆಸೆ' ಎಂದು ಪ್ರಾರ್ಥಿಸಿಕೊಂಡನು. ॥ ೫ ॥

ಒಂದು ದಿನ ಬಲ-ಪರಾಕ್ರಮದಿಂದ ಕೊಬ್ಬಿಹೋದ ಬಾಣಾಸುರನು ಪಕ್ಕದಲ್ಲಿಯೇ ಇದ್ದ ಪರಮೇಶ್ವರನ ಪಾದ ಕಮಲಗಳನ್ನು ಸೂರ್ಯನಂತೆ ಹೊಳೆಯುತ್ತಿರುವ ಕಿರೀಟದಿಂದ ಸ್ಪರ್ಶಿಸಿ ನಮಸ್ಕಾರಗೈದು ಹೀಗೆ ಹೇಳಿದನು. ॥ ೬ ॥ ದೇವಾಧಿದೇವಾ ! ನೀನು ಸಮಸ್ತ ಚರಾಚರ ಜಗತ್ತಿಗೆ ಗುರುವೂ, ಸ್ವಾಮಿಯೂ ಆಗಿರುವೆ. ನಾನು ನಿನಗೆ ನಮಸ್ಕರಿಸುತ್ತೇನೆ. ಯಾರ ಮನೋರಥಗಳು ಇದುವರೆಗೆ ಪೂರ್ಣಗೊಂಡಿಲ್ಲವೋ ಅಂತಹವರ ಮನೋರಥಗಳನ್ನು ಈಡೇರಿಸಿಕೊಡುವುದರಲ್ಲಿ ನೀನು ಕಲ್ಪವೃಕ್ಷದಂತೆ ಇರುವೆ. ॥ ೭ ॥

ದೋಸ್ಸಹಸ್ರಂ ತ್ವಯಾ ದತ್ತಂ ಪರಂ ಭಾರಾಯ ಮೇಽಭವತ್ ।
ತ್ರಿಲೋಕ್ಯಾಂ ಪ್ರತಿಯೋದ್ಧಾರಂ ನ ಲಭೇ ತ್ವದೃತೇ ಸಮಮ್
॥ ೮ ॥

ಕಂಡೂತ್ಯಾ ನಿಭೃತೈರ್ದೋರ್ಭಿರ್ಯುಯುತ್ಸುರ್ದಿಗ್ಗಜಾನಹಮ್ ।
ಆದ್ಯಾಯಾಂ ಚೂರ್ಣಯನ್ನದ್ರೀನ್ ಭೀತಾಸ್ತೇಽಪಿ ಪ್ರದುದ್ರುವುಃ
॥ ೯ ॥

ತಚ್ಛ್ರುತ್ವಾ ಭಗವಾನ್ ಕ್ರುದ್ಧಃ ಕೇತುಸ್ತೇ ಭಜ್ಯತೇ ಯದಾ ।
ತ್ವದ್ದರ್ಪಘ್ನಂ ಭವೇನ್ಮೂಢ ಸಂಯುಗಂ ಮತ್ಸಮೇನ ತೇ
॥ ೧೦ ॥

ಇತ್ಯುಕ್ತಃ ಕುಮತಿರ್ಹೃಷ್ಟಃ ಸ್ವಗೃಹಂ ಪ್ರಾವಿಶನ್ನೃಪ ।
ಪ್ರತೀಕ್ಷನ್ ಗಿರಿಶಾದೇಶಂ ಸ್ವವೀರ್ಯನಶನಂ ಕುಧೀಃ
॥ ೧೧ ॥

ತಸ್ಯೋಷಾ ನಾಮ ದುಹಿತಾ ಸ್ವಪ್ನೇ ಪ್ರಾದ್ಯುಮ್ನಿನಾ ರತಿಮ್ ।
ಕನ್ಯಾಲಭತ ಕಾಂತೇನ ಪ್ರಾಗದೃಷ್ಟಶ್ರುತೇನ ಸಾ
॥ ೧೨ ॥

ಸಾ ತತ್ರ ತಮಪಶ್ಯಂತೀ ಕ್ವಾಸಿ ಕಾಂತೇತಿ ವಾದಿನೀ ।
ಸಖೀನಾಂ ಮಧ್ಯ ಉತ್ತಸ್ಥೌ ವಿಹ್ವಲಾ ವ್ರೀಡಿತಾ ಭೃಶಮ್
॥ ೧೩ ॥

ಬಾಣಸ್ಯ ಮಂತ್ರೀ ಕುಂಭಾಂಡಶ್ಚಿತ್ರಲೇಖಾ ಚ ತತ್ಸುತಾ ।
ಸಖ್ಯಪೃಚ್ಛತ್ಸಖೀಮೂಷಾಂ ಕೌತೂಹಲಸಮನ್ವಿತಾ
॥ ೧೪ ॥

ಕಂ ತ್ವಂ ಮೃಗಯಸೇ ಸುಭ್ರೂಃ ಕೀದೃಶಸ್ತೇ ಮನೋರಥಃ ।
ಹಸ್ತಗ್ರಾಹಂ ನ ತೇಽದ್ಯಾಪಿ ರಾಜಪುತ್ರ್ಯುಪಲಕ್ಷಯೇ
॥ ೧೫ ॥

ಉಷೋವಾಚ

ದೃಷ್ಟಃ ಕಶ್ಚಿನ್ನರಃ ಸ್ವಪ್ನೇ ಶ್ಯಾಮಃ ಕಮಲಲೋಚನಃ ।
ಪೀತವಾಸಾ ಬೃಹದ್ಬಾಹುರ್ಯೋಷಿತಾಂ ಹೃದಯಂಗಮಃ
॥ ೧೬ ॥

ತಮಹಂ ಮೃಗಯೇ ಕಾಂತಂ ಪಾಯಯಿತ್ವಾಧರಂ ಮಧು ।
ಕ್ವಾಪಿ ಯಾತಃ ಸ್ಪೃಹಯತೀಂ ಕ್ಷಿಪ್ತ್ವಾ ಮಾಂ ವೃಜಿನಾರ್ಣವೇ
॥ ೧೭ ॥

ಭಗವಂತಾ ! ನೀನು ನನಗೆ ಸಾವಿರ ಬಾಹುಗಳನ್ನು ಕರುಣಿಸಿರುವೆ. ಆದರೆ ಅವು ನನಗೆ ಭಾರವೇ ಆಗುತ್ತಿವೆ. ಏಕೆಂದರೆ, ಮೂರು ಲೋಕಗಳಲ್ಲಿ ನಿನ್ನನ್ನು ಬಿಟ್ಟು ನನಗೆ ಸರಿಸಮಾನವಾಗಿ ನನ್ನೊಡನೆ ಯುದ್ಧಮಾಡುವಂತಹ ಯಾವ ಯೋಧನೂ ನನಗೆ ಸಿಕ್ಕಿಲ್ಲ. ॥ ೮ ॥ ಆದಿದೇವಾ ! ಒಮ್ಮೆ ನನ್ನ ಬಾಹುಗಳಲ್ಲಿ ಯುದ್ಧ ಮಾಡುವ ತೀಟೆಯುಂಟಾಗಿ ಅದನ್ನು ತಡೆಯಲಾರದೆ ದಿಗ್ಗಜರೊಂದಿಗೆ ಯುದ್ಧಮಾಡಲು ಹೊರಟೆ. ಆದರೆ ಅವುಗಳು ಭಯದಿಂದ ಓಡಿಹೋದವು. ಆ ಸಮಯದಲ್ಲಿ ನಾನು ಬಾಹುಗಳ ಆಘಾತದಿಂದ ಅನೇಕ ಪರ್ವತಗಳನ್ನು ಪುಡಿ-ಪುಡಿಮಾಡಿದೆನು. ॥ ೯ ॥ ಬಾಣಾಸುರನ ಈ ಪ್ರಾರ್ಥನೆಯನ್ನು ಕೇಳಿ ಶಿವನು ಸ್ವಲ್ಪ ಬೇಸರದಿಂದಲೇ ಹೇಳಿದನು – ಎಲೈ ಮೂರ್ಖ ! ನಿನ್ನ ರಥದ ಧ್ವಜವು ಮುರಿದುಬಿದ್ದಾಗ ನನಗೆ ಸಮಾನನಾದ ಯೋಧನೊಂದಿಗೆ ನಿನ್ನ ಯುದ್ಧ ನಡೆಯುವುದು ಮತ್ತು ಆ ಯುದ್ಧವು ನಿನ್ನ ದರ್ಪವನ್ನು ನುಚ್ಚು ನೂರಾಗಿಸುವುದು. ॥ ೧೦ ॥ ಪರೀಕ್ಷಿತನೇ ! ಭಗವಾನ್ ಶಂಕರನ ಮಾತುಕೇಳಿ ಬುದ್ಧಿಕೆಟ್ಟು ಹೋಗಿದ್ದ ಅವನಿಗೆ ಹರ್ಷವುಂಟಾಗಿ ಮನೆಗೆ ಮರಳಿದನು. ಈಗ ಆ ಮೂರ್ಖನು ಪರಶಿವನ ಆದೇಶದಂತೆ ಅವನ ಬಲ-ಪರಾಕ್ರಮಗಳ ನಾಶವಾಗುವಂತಹ ಯುದ್ಧವನ್ನು ಇದಿರುನೋಡುತ್ತಿದ್ದನು. ॥ ೧೧ ॥

ಪರೀಕ್ಷಿತ ಮಹಾರಾಜ ! ಬಾಣಸುರನಿಗೆ ಉಷಾ ಎಂಬ ಕನ್ಯೆಯೋರ್ವಳಿದ್ದಳು. ಅವಳು ಇನ್ನೂ ಕುಮಾರಿಯೇ ಆಗಿದ್ದಾಗ ಒಂದು ದಿನ ಸ್ವಪ್ನದಲ್ಲಿ ಪರಮ ಸುಂದರ ಅನಿರುದ್ಧನೊಡನೆ ಅವಳ ಸಮಾಗಮವಾದಂತೆ ಕಂಡಳು. ಆಶ್ಚರ್ಯದ ವಿಷಯವೆಂದರೆ, ಅವಳು ಅದುವರೆಗೂ ಅನಿರುದ್ಧನನ್ನು ನೋಡಿರಲಿಲ್ಲ; ಅವನ ಹೆಸರೂ ಕೇಳಿರಲಿಲ್ಲ. ॥ ೧೨ ॥ ಸ್ವಪ್ನದಲ್ಲಿ ಅನಿರುದ್ಧನನ್ನು ಕಂಡು ಬಳಿಕ ಕಾಣದಿರುವಾಗ 'ಪ್ರಾಣಪ್ರಿಯನೇ ! ನೀನು ಎಲ್ಲಿರುವೇ ?' ಎಂದೆನ್ನುತ್ತಾ ಥಟ್ಟನೆ ಎದ್ದು ಕುಳಿತಳು. ತಾನು ಸಖಿಯರ ಮಧ್ಯದಲ್ಲಿರುವುದನ್ನು ತಿಳಿದು ಆಕೆಯು ಬಹಳವಾಗಿ ನಾಚಿಕೊಂಡಳು. ॥ ೧೩ ॥ ಪರೀಕ್ಷಿತನೇ ! ಬಾಣಾಸುರನಿಗೆ ಕುಂಭಾಂಡನೆಂಬ ಮಂತ್ರಿಯಿದ್ದನು. ಅವನಿಗೆ ಚಿತ್ರಲೇಖಾ ಎಂಬ ಕನ್ಯೆಯೊಬ್ಬಳಿದ್ದಳು. ಉಷಾ ಮತ್ತು ಚಿತ್ರಲೇಖೆಯು ಪರಸ್ಪರ ಸಖಿಯರಾಗಿದ್ದರು. ಚಿತ್ರಲೇಖೆಯು ಕುತೂಹಲದಿಂದ ಉಷೆಯ ಬಳಿ ಕೇಳಿದಳು. ॥ ೧೪ ॥ ಸುಂದರಿಯೇ ! ರಾಜಕುಮಾರಿಯೇ ! ಇದುವರೆಗೂ ಯಾರೂ ನಿನ್ನ ಪಾಣಿಗ್ರಹಣವನ್ನೇ ಮಾಡಲಿಲ್ಲ. ನೀನು ಯಾರನ್ನು ಹುಡುಕುತ್ತಿರುವೆ ? ನಿನ್ನ ಮನೋರಥವೇನು ? ಎಲ್ಲವನ್ನೂ ಮರೆಮಾಚದೆ ನನಗೆ ಹೇಳು. ॥ ೧೫ ॥

**ಉಷೆಯು ಹೇಳಿದಳು** – ಚಿತ್ರಲೇಖೆ ! ನಾನು ಸ್ವಪ್ನದಲ್ಲಿ ಒಬ್ಬ ಅತೀವ ಸುಂದರನಾದ ಪುರುಷನನ್ನು ಕಂಡೆನು. ಅವನು ಶ್ಯಾಮಲ ವರ್ಣದವನಾಗಿದ್ದು, ಕಮಲಾಕ್ಷನಾಗಿದ್ದನು. ಪೀತಾಂಬರವನ್ನು ಉಟ್ಟಿದ್ದನು. ಆಜಾನುಬಾಹುವಾಗಿದ್ದನು. ಸ್ತ್ರೀಯರ ಮನಸ್ಸನ್ನು ಅಪಹರಿಸುವಷ್ಟು ಚೆಲುವನಾಗಿದ್ದನು. ॥ ೧೬ ॥ ಅವನು ಮೊದಲಿಗೆ ಅಧರಗಳ ಮಧುವನ್ನು ನನಗೆ ಕುಡಿಸಿದನು. ನಾನೂ ಅವನ ಅಧರಗಳ ಮಧುವನ್ನು ಕುಡಿಯಬೇಕೆನ್ನುವಷ್ಟರಲ್ಲಿ ನನ್ನನ್ನು ದುಃಖ ಸಾಗರದಲ್ಲಿ ಮುಳುಗಿಸಿ ಮಾಯವಾಗಿಬಿಟ್ಟನು. ಆ ನನ್ನ ಪ್ರಾಣವಲ್ಲಭನನ್ನು ಆಗಿನಿಂದಲೂ ಹುಡುಕುತ್ತಿದ್ದೇನೆ. ॥ ೧೭ ॥

ಚಿತ್ರಲೇಖೋವಾಚ

ವ್ಯಸನಂ ತೇಽಪಕರ್ಷಾಮಿ ತ್ರಿಲೋಕ್ಯಾಂ ಯದಿ ಭಾವ್ಯತೇ ।
ತಮಾನೇಷ್ಯೇ ನರಂ ಯಸ್ತೇ ಮನೋಹರ್ತಾ ತಮಾದಿಶ ॥ ೧೮ ॥

ಇತ್ಯುಕ್ತ್ವಾ ದೇವಗಂಧರ್ವಸಿದ್ಧಚಾರಣಪನ್ನಗಾನ್ ।
ದೈತ್ಯವಿದ್ಯಾಧರಾನ್ ಯಕ್ಷಾನ್ ಮನುಜಾಂಶ್ಚ ಯಥಾಲಿಖತ್ ॥ ೧೯ ॥

ಮನುಜೇಷು ಚ ಸಾ ವೃಷ್ಣೀನ್ ಶೂರಮಾನಕದುಂದುಭಿಮ್ ।
ವ್ಯಲಿಖದ್ರಾಮಕೃಷ್ಣೌ ಚ ಪ್ರದ್ಯುಮ್ನಂ ವೀಕ್ಷ್ಯ ಲಜ್ಜಿತಾ ॥ ೨೦ ॥

ಅನಿರುದ್ಧಂ ವಿಲಿಖಿತಂ ವೀಕ್ಷ್ಯೋಷಾವಾಙ್ಮುಖೀ ಹ್ರಿಯಾ ।
ಸೋಽಸಾವಸಾವಿತಿ ಪ್ರಾಹ ಸ್ಮಯಮಾನಾ ಮಹೀಪತೇ ॥ ೨೧ ॥

ಚಿತ್ರಲೇಖಾ ತಮಾಜ್ಞಾಯ ಪೌತ್ರಂ ಕೃಷ್ಣಸ್ಯ ಯೋಗಿನೀ ।
ಯಯೌ ವಿಹಾಯಸಾ ರಾಜನ್ ದ್ವಾರಕಾಂ ಕೃಷ್ಣಪಾಲಿತಾಮ್ ॥ ೨೨ ॥

ತತ್ರ ಸುಪ್ತಂ ಸುಪರ್ಯಂಕೇ ಪ್ರಾದ್ಯುಮ್ನಿಂ ಯೋಗಮಾಸ್ಥಿತಾ ।
ಗೃಹೀತ್ವಾ ಶೋಣಿತಪುರಂ ಸಖ್ಯೈ ಪ್ರಿಯಮದರ್ಶಯತ್ ॥ ೨೩ ॥

ಸಾ ಚ ತಂ ಸುಂದರವರಂ ವಿಲೋಕ್ಯ ಮುದಿತಾನನಾ ।
ದುಷ್ಪ್ರೇಕ್ಷ್ಯೇ ಸ್ವಗೃಹೇ ಪುಂಭೀ ರೇಮೇ ಪ್ರಾದ್ಯುಮ್ನಿನಾ ಸಮಮ್ ॥ ೨೪ ॥

ಪರಾರ್ಧ್ಯವಾಸಃ ಸ್ರಗ್ಗಂಧಧೂಪದೀಪಾಸನಾದಿಭಿಃ ।
ಪಾನಭೋಜನಭಕ್ಷ್ಯೈಶ್ಚ ವಾಕ್ಯೈಃ ಶುಶ್ರೂಷಯಾರ್ಚಿತಃ ॥ ೨೫ ॥

ಗೂಢಃ ಕನ್ಯಾಪುರೇ ಶಶ್ವತ್ಪ್ರವೃದ್ಧಸ್ನೇಹಯಾ ತಯಾ ।
ನಾಹರ್ಗಣಾನ್ ಸ ಬುಬುಧೇ ಊಷಯಾಪಹೃತೇಂದ್ರಿಯಃ ॥ ೨೬ ॥

**ಚಿತ್ರಲೇಖೆಯು ಹೇಳಿದಳು** – ಸಖಿಯೇ! ನಿನ್ನ ಚಿತ್ತವನ್ನು ಅಪಹರಿಸಿದವನು ಮೂರುಲೋಕಗಳಲ್ಲಿ ಎಲ್ಲೇ ಇದ್ದರೂ, ನೀನು ಗುರುತಿಸುವೆಯಾದರೆ ನಾನು ನಿನ್ನ ವಿರಹವ್ಯಥೆಯನ್ನು ಕಳೆಯ ಬಲ್ಲೆನು. ನಾನು ಚಿತ್ರಗಳನ್ನು ಬರೆಯುತ್ತಾ ಹೋಗುತ್ತೇನೆ. ನೀನು ನಿನ್ನ ಇನಿಯನನ್ನು ಗುರುತಿಸಬೇಕು. ಮತ್ತೆ ಅವನು ಎಲ್ಲೇ ಇದ್ದರೂ ನಾನು ಅವನನ್ನು ನಿನ್ನ ಬಳಿಗೆ ಕರೆತರುವೆನು. ॥ ೧೮ ॥ ಹೀಗೆ ಹೇಳಿ ಚಿತ್ರಲೇಖೆಯು ಮಾತು-ಮಾತಿನಲ್ಲೇ ಬಹಳಷ್ಟು ದೇವತೆಗಳ, ಗಂಧರ್ವರ, ಸಿದ್ಧರ, ಚಾರಣರ, ಪನ್ನಗರ, ದೈತ್ಯರ, ವಿದ್ಯಾಧರರ, ಯಕ್ಷರ ಮತ್ತು ಮನುಷ್ಯರ ಚಿತ್ರಗಳನ್ನು ಬರೆದು ತೋರಿಸಿದಳು. ॥ ೧೯ ॥ ಮನುಷ್ಯರಲ್ಲಿ ಆಕೆಯು ವೃಷ್ಣಿವಂಶದ ಶೂರಸೇನ, ವಸುದೇವ, ಬಲರಾಮ ಮತ್ತು ಭಗವಾನ್ ಶ್ರೀಕೃಷ್ಣ ಇವರ ಚಿತ್ರಗಳನ್ನು ರಚಿಸಿದಳು. ಪ್ರದ್ಯುಮ್ನನ ಚಿತ್ರವನ್ನು ನೋಡುತ್ತಲೇ ಉಷೆಯು ನಾಚಿಕೊಂಡಳು. ॥ ೨೦ ॥ ಪರೀಕ್ಷಿತನೇ! ಆಕೆಯು ಅನಿರುದ್ಧನ ಚಿತ್ರವನ್ನು ನೋಡುತ್ತಲೇ ಲಜ್ಜೆಯಿಂದ ತಲೆತಗ್ಗಿಸಿದಳು. ತಗ್ಗಿಸಿದ ತಲೆ ಎತ್ತಲೇ ಇಲ್ಲ. ಮತ್ತೆ ಮಂದಹಾಸವನ್ನು ಬೀರುತ್ತಾ ಮೆಲ್ಲನೆ ಹೇಳಿದಳು – 'ನನ್ನ ಪ್ರಿಯತಮನು ಇವನೇ ಆಗಿದ್ದಾನೆ, ಇವನೇ.' ॥ ೨೧ ॥

ಪರೀಕ್ಷಿದ್ರಾಜನೇ! ಯೋಗಿನಿಯಾದ ಚಿತ್ರಲೇಖೆಗೆ ಈ ಚಿತ್ರದಲ್ಲಿರುವವನು ಶ್ರೀಕೃಷ್ಣನ ಮೊಮ್ಮಗನೆಂದು ತಿಳಿದು ಹೋಯಿತು. ಆಕೆಯು ರಾತ್ರಿಯಲ್ಲೇ ಆಕಾಶಮಾರ್ಗದಿಂದ ಭಗವಾನ್ ಶ್ರೀಕೃಷ್ಣನಿಂದ ರಕ್ಷಿತವಾದ ದ್ವಾರಕೆಗೆ ಬಂದಳು. ॥ ೨೨ ॥ ಅಲ್ಲಿ ಅನಿರುದ್ಧನು ಅಂತಃಪುರದಲ್ಲಿ ಸುಂದರವಾದ ಮಂಚದಲ್ಲಿ ಪವಡಿಸಿದ್ದನು. ಯೋಗಸಿದ್ಧಿಯ ಪ್ರಭಾವದಿಂದ ಚಿತ್ರಲೇಖೆಯು ಅನಿರುದ್ಧನನ್ನು ಎತ್ತಿಕೊಂಡು ಶೋಣಿತಪುರಕ್ಕೆ ತಂದು ತನ್ನ ಗೆಳತಿಯಾದ ಉಷೆಗೆ ಆಕೆಯ ಪ್ರಿಯಕರನ ದರ್ಶನ ಮಾಡಿಸಿದಳು. ॥ ೨೩ ॥ ತನ್ನ ಪರಮ ಸುಂದರ ಪ್ರಾಣವಲ್ಲಭನನ್ನು ಪಡೆದು ಆನಂದದಿಂದ ಉಷೆಯ ಮುಖವರಳಿತು. ಆಕೆಯು ಅನಿರುದ್ಧನೊಂದಿಗೆ ತನ್ನ ಅಂತಃಪುರದಲ್ಲಿ ವಿಹರಿಸ ತೊಡಗಿದಳು. ಪರೀಕ್ಷಿತನೇ! ಆಕೆಯ ಅಂತಃಪುರವು ಯಾವನೇ ಪುರುಷನು ಇಣಿಕಿನೋಡಲೂ ಕೂಡ ಸಾಧ್ಯವಿಲ್ಲದಷ್ಟು ಸುರಕ್ಷಿತವಾಗಿತ್ತು. ॥ ೨೪ ॥

ಉಷಾ-ಅನಿರುದ್ಧರ ಪರಸ್ಪರ ಪ್ರೀತಿಯು ದಿನ-ದಿನಕ್ಕೂ ವೃದ್ಧಿಹೊಂದುತಿತ್ತು. ಉಷೆಯು ಬಹುಮೂಲ್ಯ ವಸ್ತ್ರಗಳಿಂದಲೂ, ಪುಷ್ಪಹಾರಗಳಿಂದಲೂ, ಗಂಧ-ಧೂಪ-ದೀಪ, ಆಸನಾದಿಗಳಿಂದಲೂ, ಸುಮಧುರ ಪಾನೀಯಗಳಿಂದಲೂ, ಭಕ್ಷ್ಯ-ಭೋಜ್ಯಗಳಿಂದಲೂ, ಮೃದು-ಮಧುರ ಮಾತಿನಿಂದಲೂ, ಸೇವಾಶುಶ್ರೂಷೆಗಳಿಂದಲೂ ಅನಿರುದ್ಧನನ್ನು ಬಹಳವಾಗಿ ಸತ್ಕರಿಸಿದಳು. ಆಕೆಯು ತನ್ನ ಪ್ರೇಮದಿಂದ ಅನಿರುದ್ಧನ ಮನಸ್ಸನ್ನು ವಶಪಡಿಸಿಕೊಂಡಿದ್ದಳು. ಆಕೆಯ ಅಂತಃಪುರದಲ್ಲಿ ನಿಗೂಢನಾಗಿದ್ದ ಅನಿರುದ್ಧನು ತನ್ನನ್ನೇ ತಾನು ಮರೆತು ಬಿಟ್ಟಿದ್ದನು. ನಾನು ಇಲ್ಲಿಗೆ ಬಂದು ಎಷ್ಟು ದಿನಗಳಾದವು ಎಂಬುದನ್ನು ತಿಳಿಯದೆ ಹೋದನು. ॥ ೨೫-೨೬ ॥

ತಾಂ ತಥಾ ಯದುವೀರೇಣ ಭುಜ್ಯಮಾನಾಂ ಹತವ್ರತಾಮ್ ।
ಹೇತುಭಿರ್ಲಕ್ಷಯಾನ್‌ಚಕ್ರುರಾಪ್ರೀತಾಂ ದುರವಚ್ಛದೈಃ ॥ ೨೭ ॥

ಭಟಾ ಆವೇದಯಾನ್‌ಚಕ್ರೂ ರಾಜಂಸ್ತೇ ದುಹಿತುರ್ವಯಮ್ ।
ವಿಚೇಷ್ಟಿತಂ ಲಕ್ಷಯಾಮಃ ಕನ್ಯಾಯಾಃ ಕುಲದೂಷಣಮ್ ॥ ೨೮ ॥

ಅನಪಾಯಿಭಿರಸ್ಮಾಭಿರ್ಗುಪ್ತಾಯಾಶ್ಚ ಗೃಹೇ ಪ್ರಭೋ ।
ಕನ್ಯಾಯಾ ದೂಷಣಂ ಪುಂಭಿರ್ದುಷ್ಪ್ರೇಕ್ಷ್ಯಾಯಾ ನ ವಿದ್ಮಹೇ ॥ ೨೯ ॥

ತತಃ ಪ್ರವ್ಯಥಿತೋ ಬಾಣೋ ದುಹಿತುಃ ಶ್ರುತದೂಷಣಃ ।
ತ್ವರಿತಃ ಕನ್ಯಕಾಗಾರಂ ಪ್ರಾಪ್ತೋಽದ್ರಾಕ್ಷೀದ್ಯದೂದ್ವಹಮ್ ॥ ೩೦ ॥

ಕಾಮಾತ್ಮಜಂ ತಂ ಭುವನೈಕಸುಂದರಂ
ಶ್ಯಾಮಂ ಪಿಶಂಗಾಂಬರಮಂಬುಜೇಕ್ಷಣಮ್ ।
ಬೃಹದ್ಭುಜಂ ಕುಂಡಲಕುಂತಲತ್ವಿಷಾ
ಸ್ಮಿತಾವಲೋಕೇನ ಚ ಮಂಡಿತಾನನಮ್ ॥ ೩೧ ॥

ದೀವ್ಯಂತಮಕ್ಷೈಃ ಪ್ರಿಯಯಾಭಿನೃಮ್ಣಯಾ
ತದಂಗಸಂಗಸ್ತನಕುಂಕುಮಸ್ರಜಮ್ ।
ಬಾಹ್ವೋರ್ದಧಾನಂ ಮಧುಮಲ್ಲಿಕಾಶ್ರಿತಾಂ
ತಸ್ಯಾಗ್ರ ಆಸೀನಮವೇಕ್ಷ್ಯ ವಿಸ್ಮಿತಃ ॥ ೩೨ ॥

ಸ ತಂ ಪ್ರವಿಷ್ಟಂ ವೃತಮಾತತಾಯಿಭಿ-
ರ್ಭಟೈರನೀಕೈರವಲೋಕ್ಯ ಮಾಧವಃ ।
ಉದ್ಯಮ್ಯ ಮೌರ್ವಂ ಪರಿಘಂ ವ್ಯವಸ್ಥಿತೋ
ಯಥಾಂತಕೋ ದಂಡಧರೋ ಜಿಘಾಂಸಯಾ ॥ ೩೩ ॥

ಪರೀಕ್ಷಿತನೇ! ಯದುಕುಮಾರ ಅನಿರುದ್ಧನ ಸಹವಾಸದಿಂದ ಉಷೆಯ ಕನ್ಯತ್ವವು ನಷ್ಟವಾಗಿ ಹೋಗಿತ್ತು. ಆಕೆಯ ಶರೀರದಲ್ಲಿ ಕಾಣುತ್ತಿದ್ದ ಚಿಹ್ನೆಗಳು ಯಾವ ರೀತಿಯಿಂದಲೂ ಅಡಗಿಸಲಾರದಷ್ಟು ಸ್ಪಷ್ಟವಾಗಿ ಎದ್ದು ಕಾಣುತ್ತಿದ್ದವು. ಉಷೆಯು ಬಹಳವಾಗಿ ಪ್ರಸನ್ನವಾಗಿ ಇರುತ್ತಿದ್ದಳು. ಇವಳಿಗೆ ಯಾರೋ ಪುರುಷನೊಂದಿಗೆ ಸಂಬಂಧವು ಖಂಡಿತವಾಗಿ ಉಂಟಾಗಿದೆ ಎಂದು ಕಾವಲುಗಾರರು ತಿಳಿದುಕೊಂಡರು. ಅವರು ಬಾಣಾಸುರನ ಬಳಿಗೆ ಹೋಗಿ ನಿವೇದಿಸಿಕೊಂಡರು – ಮಹಾರಾಜರೇ! ಕುಲಕ್ಕೆ ಕಳಂಕ ತರುವಂತಹ ನಿಮ್ಮ ಅವಿವಾಹಿತಳಾದ ರಾಜಕುಮಾರಿಯ ಚೇಷ್ಟೆಗಳನ್ನು ನಾವು ನೋಡಿದೆವು. ॥ ೨೭-೨೮ ॥ ಪ್ರಭುಗಳೇ! ನಾವು ಕ್ರಮತಪ್ಪದೆ ಹಗಲೂ-ರಾತ್ರಿ ಕಾವಲು ಕಾಯುತ್ತಿದ್ದೇವೆ. ಇದರಲ್ಲಿ ಸಂದೇಹವೇ ಇಲ್ಲ, ನಿಮ್ಮ ಮಗಳನ್ನು ಹೊರಗಿನ ಮನುಷ್ಯರು ನೋಡಲೂ ಕೂಡ ಸಾಧ್ಯವಿಲ್ಲ. ಹೀಗಿದ್ದರೂ ಅವಳು ಕಳಂಕಿತೆ ಹೇಗಾದಳು ? ಇದರ ಕಾರಣ ನಮಗೆ ತಿಳಿಯದಾಗಿದೆ. ॥ ೨೯ ॥

ಪರೀಕ್ಷಿದ್ರಾಜನೇ! ತನ್ನ ಕನ್ಯೆಯ ಚರಿತ್ರವು ದೂಷಿತವಾಗಿದೆ ಎಂಬ ಸಮಾಚಾರವನ್ನು ಕಾವಲುಗಾರರಿಂದ ತಿಳಿದ ಬಾಣಾಸುರನ ಹೃದಯದಲ್ಲಿ ಅತ್ಯಂತ ಪೀಡೆ ಉಂಟಾಯಿತು. ಅವನು ಲಗುಬಗೆಯಿಂದ ಆಕೆಯ ಅಂತಃಪುರಕ್ಕೆ ಹೋಗಿ ನೋಡಿದರೆ ಅಲ್ಲಿ ಅನಿರುದ್ಧನು ಕುಳಿತಿದ್ದನು. ॥ ೩೦ ॥ ಪ್ರಿಯ ಪರೀಕ್ಷಿತನೇ! ಅನಿರುದ್ಧನು ಸಾಕ್ಷಾತ್ ಕಾಮದೇವರ ಅವತಾರನಾಗಿದ್ದ ಪ್ರದ್ಯುಮ್ನನ ಪುತ್ರನಾಗಿದ್ದನು. ಮೂರು ಲೋಕಗಳಲ್ಲಿಯೂ ಅವನಂತಹ ಸುಂದರನು ಯಾರೂ ಇರಲಿಲ್ಲ. ಶ್ಯಾಮಲ ಶರೀರದ ಮೇಲೆ ಪೀತಾಂಬರವು ಹೊಳೆಯುತ್ತಿತ್ತು. ಕಮಲದ ಎಸಳಿನಂತಹ ವಿಶಾಲಕೋಮಲ ಕಣ್ಣುಗಳು. ಅಜಾನುಬಾಹುಗಳು. ಕಪೋಲಗಳ ಮೇಲೆ ಮುಂಗುರುಳು ಮತ್ತು ಕುಂಡಲಗಳು ಝಗ-ಝಗಿಸುವ ಜ್ಯೋತಿ. ತುಟಿಗಳಲ್ಲಿ ಮಂದವಾದ ಮಂದಹಾಸ. ಕಡೆಗಣ್ಣ ನೋಟದಿಂದ ಅವನ ಮುಖದ ಶೋಭೆಯು ವಿಲಕ್ಷಣವಾಗಿತ್ತು. ॥ ೩೧ ॥ ಆಗ ಅನಿರುದ್ಧನು ಸರ್ವಾಲಂಕಾರಗಳಿಂದ ಭೂಷಿತಳಾಗಿ ಕುಳಿತಿರುವ ಪ್ರಿಯತಮ ಉಷೆಯೊಂದಿಗೆ ಪಗಡೆಯಾಡುತ್ತಿದ್ದನು. ಆಕೆಯ ಕೊರಳಲ್ಲಿ ಸುಶೋಭಿತವಾದ ಮಲ್ಲಿಗೆಯ ಹೂವಿನ ಹಾರವು ಸ್ತನಮಂಡಲದ ಕುಂಕುಮದಿಂದ ಕೆಂಪಾಗಿ ಹೋಗಿತ್ತು. ಹೀಗೆ ಉಷೆಯ ಎದುರಿನಲ್ಲೇ ಕುಳಿತು ಆಟವಾಡುತ್ತಿದ್ದ ಅನಿರುದ್ಧನನ್ನು ಕಂಡು ಬಾಣಾಸುರನು ಚಕಿತನಾದನು. ॥ ೩೨ ॥ ತನ್ನನ್ನು ಕೊಲ್ಲುವುದಕ್ಕಾಗಿ ಆಯುಧಪಾಣಿಗಳಾದ ಸಾವಿರಾರು ರಾಜಭಟರೊಡನೆ ಬಾಣಾಸುರನು ಬಂದುದನ್ನು ನೋಡಿದ ಅನಿರುದ್ಧನು. ಒಡನೆಯೇ ಅವರೆಲ್ಲರನ್ನು ಸಂಹರಿಸುವ ಇಚ್ಛೆಯಿಂದ ಲೋಹಮಯವಾದ, ಅತಿಭಯಂಕರವಾಗಿದ್ದ ಪರಿಘಾಯುಧವನ್ನು ಹಿಡಿದು ಕಾಲದಂಡ ವನ್ನೆತ್ತಿಕೊಂಡು ಕಾಲಯಮನೇ ನಿಂತಿರುವನೋ ಎಂಬಂತೆ ಯುದ್ಧಸನ್ನದ್ಧನಾಗಿ ನಿಂತನು. ॥ ೩೩ ॥

ಜಿಘೃಕ್ಷಯಾ ತಾನ್ಪರಿತಃ ಪ್ರಸರ್ಪತಃ
ಶುನೋ ಯಥಾ ಸೂಕರಯೂಥಪೋಽಹನತ್ ।
ತೇ ಹನ್ಯಮಾನಾ ಭವನಾದ್ವಿನಿರ್ಗತಾ
ನಿರ್ಭಿನ್ನಮೂರ್ಧೋರುಭುಜಾಃ ಪ್ರದುದ್ರುವುಃ ॥ ೩೪ ॥

ಬಳಿಕ ನಾಯಿಗಳ ಗುಂಪನ್ನು ಧ್ವಂಸಮಾಡುವ ಕಾಡುಹಂದಿಯಂತೆ ಅನಿರುದ್ಧನು ತನ್ನನ್ನು ಹಿಡಿಯಲು ಮುನ್ನುಗ್ಗಿ ಬರುತ್ತಿದ್ದ ಸೈನಿಕರೆಲ್ಲರನ್ನು ಪರಿಘಾಯುಧದಿಂದ ಧ್ವಂಸಮಾಡಿ ಬಿಟ್ಟನು. ಅನಿರುದ್ಧನ ಪ್ರಹಾರದಿಂದ ಹಲವಾರು ಸೈನಿಕರ ತಲೆಗಳು, ಭುಜಗಳು, ತೊಡೆಗಳು ಮುರಿದು, ಕಳಚಿ ಬೀಳುತ್ತಿದ್ದವು. ಕೆಲವರು ಪ್ರಾಣದ ಆಸೆಯಿಂದ ಅಲ್ಲಿಂದ ಓಡಿ ಹೋದರು. ॥ ೩೪ ॥

ತಂ ನಾಗಪಾಶೈರ್ಬಲಿನಂದನೋ ಬಲೀ
ಘ್ನಂತಂ ಸ್ವಸೈನ್ಯಂ ಕುಪಿತೋ ಬಬಂಧ ಹ ।
ಊಷಾ ಭೃಶಂ ಶೋಕವಿಷಾದವಿಹ್ವಲಾ
ಬದ್ಧಂ ನಿಶಮ್ಯಾಶ್ರುಕಲಾಕ್ಷ್ಯರೌದಿಷೀತ್ ॥ ೩೫ ॥

ಅನಿರುದ್ಧನು ತನ್ನ ಸೈನಿಕರೆಲ್ಲರನ್ನು ಸಂಹಾರ ಮಾಡುತ್ತಿರುವುದನ್ನು ನೋಡಿದ ಬಾಣಾಸುರನು ಕ್ರೋಧೋನ್ಮತ್ತನಾಗಿ ನಾಗಪಾಶದಿಂದ ಅನಿರುದ್ಧನನ್ನು ಬಂಧಿಸಿಬಿಟ್ಟನು. ತನ್ನ ಪ್ರಿಯತಮನನ್ನು ಬಂಧಿಸಿರುವುದನ್ನು ಕೇಳಿದ ಉಷೆಯು ಅತ್ಯಂತ ಶೋಕ, ವಿಷಾದಗಳಿಂದ ವಿಹ್ವಲಳಾದಳು. ಆಕೆಯ ಕಣ್ಣುಗಳಿಂದ ಧಾರಾಕಾರವಾಗಿ ನೀರು ಹರಿಯುತ್ತಾ ಅಳುತ್ತಿದ್ದಳು. ॥ ೩೫ ॥

ಅರವತ್ತೆರಡನೆಯ ಅಧ್ಯಾಯವು ಮುಗಿಯಿತು. ॥ ೬೨ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಉತ್ತರಾರ್ಧೇ
ಅನಿರುದ್ಧಬಂಧೋ ನಾಮ ದ್ವಿಷಷ್ಟಿತಮೋಽಧ್ಯಾಯಃ ॥ ೬೨ ॥

# ಅರವತ್ತಮೂರನೆಯ ಅಧ್ಯಾಯ

## ಭಗವಾನ್ ಶ್ರೀಕೃಷ್ಣನೊಂದಿಗೆ ಬಾಣಾಸುರನ ಯುದ್ಧ

ಶ್ರೀಶುಕ ಉವಾಚ

ಅಪಶ್ಯತಾಂ ಚಾನಿರುದ್ಧಂ ತದ್ಬಂಧೂನಾಂ ಚ ಭಾರತ ।
ಚತ್ವಾರೋ ವಾರ್ಷಿಕಾ ಮಾಸಾ ವ್ಯತೀಯುರನುಶೋಚತಾಮ್ ॥ ೧ ॥

ನಾರದಾತ್ತದುಪಾಕರ್ಣ್ಯ ವಾರ್ತಾಂ ಬದ್ಧಸ್ಯ ಕರ್ಮ ಚ ।
ಪ್ರಯಯುಃ ಶೋಣಿತಪುರಂ ವೃಷ್ಣಯಃ ಕೃಷ್ಣದೇವತಾಃ ॥ ೨ ॥

ಪ್ರದ್ಯುಮ್ನೋ ಯುಯುಧಾನಶ್ಚ ಗದಃ ಸಾಂಬೋಽಥ ಸಾರಣಃ ।
ನಂದೋಪನಂದಭದ್ರಾದ್ಯಾ ರಾಮಕೃಷ್ಣಾನುವರ್ತಿನಃ ॥ ೩ ॥

ಅಕ್ಷೌಹಿಣೀಭಿರ್ದ್ವಾದಶಭಿಃ ಸಮೇತಾಃ ಸರ್ವತೋದಿಶಮ್ ।
ರುರುಧುರ್ಬಾಣನಗರಂ ಸಮಂತಾತ್ ಸಾತ್ವತರ್ಷಭಾಃ ॥ ೪ ॥

ಭಜ್ಯಮಾನಪುರೋದ್ಯಾನಪ್ರಾಕಾರಾಟ್ಟಾಲಗೋಪುರಮ್ ।
ಪ್ರೇಕ್ಷಮಾಣೋ ರುಷಾವಿಷ್ಟಸ್ತುಲ್ಯಸೈನ್ಯೋಽಭಿನಿರ್ಯಯೌ ॥ ೫ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿತ ಮಹಾರಾಜ! ಮಳೆಗಾಲದ ನಾಲ್ಕು ತಿಂಗಳುಗಳು ಕಳೆದು ಹೋದುವು. ಅನಿರುದ್ಧನು ಎಲ್ಲಿಗೆ ಹೋದನು? ಎಲ್ಲಿರುವನೆಂಬುದೇ ಯಾರಿಗೂ ತಿಳಿಯಲಿಲ್ಲ. ಅವನ ಬಂಧುಗಳು ಈ ಘಟನೆಯಿಂದ ಶೋಕಾಕುಲರಾದರು. ॥ ೧ ॥ ಒಂದು ದಿನ ನಾರದ ಮಹರ್ಷಿಗಳು ದ್ವಾರಕೆಗೆ ಬಂದು, ಯೋಗಿನಿಯು ಅನಿರುದ್ಧನನ್ನು ಶೋಣಿತಪುರಕ್ಕೆ ಕೊಂಡು ಹೋದುದು, ಬಾಣಾಸುರನ ಸೈನಿಕರನ್ನು ಧ್ವಂಸಮಾಡಿದುದು, ನಾಗಪಾಶದಿಂದ ಬಂಧಿತನಾದುದು ಎಲ್ಲ ವೃತ್ತಾಂತವನ್ನು ಶ್ರೀಕೃಷ್ಣನಲ್ಲಿ ತಿಳಿಸಿದರು. ಶ್ರೀಕೃಷ್ಣನನ್ನೇ ತಮ್ಮ ಆರಾಧ್ಯದೇವನೆಂದು ಭಾವಿಸಿದ್ದ ಯದುವಂಶೀವೀರರು ಶೋಣಿಪುರಕ್ಕೆ ಪ್ರಯಾಣ ಮಾಡಿದರು. ॥ ೨ ॥ ಬಲರಾಮ-ಶ್ರೀಕೃಷ್ಣರ ಜೊತೆಗೆ ಅವರ ಅನುಯಾಯಿಗಳಾದ ಪ್ರದ್ಯುಮ್ನ, ಸಾತ್ಯಕಿ, ಗದ, ಸಾಂಬ, ಸಾರಣ, ನಂದ, ಉಪನಂದ ಮತ್ತು ಭದ್ರ ಮೊದಲಾದ ಯಾದವರ ಹನ್ನೆರಡು ಅಕ್ಷೌಹಿಣಿ ಸೈನ್ಯ ಸಮೇತರಾಗಿ ಶೋಣಿತಪುರಕ್ಕೆ ಹೋಗಿ, ಆ ಪಟ್ಟಣಕ್ಕೆ ನಾಲ್ಕು ಕಡೆಗಳಿಂದಲೂ ಮುತ್ತಿಗೆ ಹಾಕಿದರು. ॥ ೩-೪ ॥ ಪಟ್ಟಣದ ಉದ್ಯಾನವನಗಳನ್ನೂ, ಕೋಟೆ-ಕೊತ್ತಲುಗಳನ್ನು, ಮಹಾದ್ವಾರಗಳನ್ನು ಯಾದವ ಸೈನಿಕರು ಧ್ವಂಸಮಾಡುತ್ತಿರುವುದನ್ನು ನೋಡಿ ಕುಪಿತನಾದ ಬಾಣಾಸುರನು ಅಷ್ಟೇ ಸಂಖ್ಯೆಯ ಹನ್ನೆರಡು ಅಕ್ಷೌಹಿಣಿ ಸೈನ್ಯದೊಂದಿಗೆ ಪಟ್ಟಣದಿಂದ ಹೊರಬಂದನು. ॥ ೫ ॥

ಬಾಣಾರ್ಥೇ ಭಗವಾನ್ ರುದ್ರಃ ಸಸುತೈಃ ಪ್ರಮಥೈರ್ವೃತಃ ।
ಆರುಹ್ಯ ನಂದಿವೃಷಭಂ ಯುಯುಧೇ ರಾಮಕೃಷ್ಣಯೋಃ
॥ ೬ ॥

ಆಸೀತ್ ಸುತುಮುಲಂ ಯುದ್ಧಮದ್ಭುತಂ ರೋಮಹರ್ಷಣಮ್ ।
ಕೃಷ್ಣಶಂಕರಯೋಃ ರಾಜನ್ ಪ್ರದ್ಯುಮ್ನಗುಹಯೋರಪಿ
॥ ೭ ॥

ಕುಂಭಾಂಡಕೂಪಕರ್ಣಾಭ್ಯಾಂ ಬಲೇನ ಸಹ ಸಂಯುಗಃ ।
ಸಾಂಬಸ್ಯ ಬಾಣಪುತ್ರೇಣ ಬಾಣೇನ ಸಹ ಸಾತ್ಯಕೇಃ
॥ ೮ ॥

ಬ್ರಹ್ಮಾದಯಃ ಸುರಾಧೀಶಾ ಮುನಯಃ ಸಿದ್ಧಚಾರಣಾಃ ।
ಗಂಧರ್ವಾಪ್ಸರಸೋ ಯಕ್ಷಾ ವಿಮಾನೈರ್ದ್ರಷ್ಟುಮಾಗಮನ್
॥ ೯ ॥

ಶಂಕರಾನುಚರಾನ್ ಶೌರಿರ್ಭೂತಪ್ರಮಥಗುಹ್ಯಕಾನ್ ।
ಡಾಕಿನೀರ್ಯಾತುಧಾನಾಂಶ್ಚ ವೇತಾಲಾನ್ಸವಿನಾಯಕಾನ್
॥ ೧೦ ॥

ಪ್ರೇತಮಾತೃಪಿಶಾಚಾಂಶ್ಚ ಕೂಷ್ಮಾಂಡಾನ್ ಬ್ರಹ್ಮರಾಕ್ಷಸಾನ್ ।
ದ್ರಾವಯಾಮಾಸ ತೀಕ್ಷ್ಣಾಗ್ರೈಃ ಶರೈಃ ಶಾರ್ಙ್ಗಧನುಶ್ಚ್ಯುತೈಃ
॥ ೧೧ ॥

ಪೃಥಗ್ವಿಧಾನಿ ಪ್ರಾಯುಂಕ್ತ ಪಿನಾಕ್ಯಸ್ತ್ರಾಣಿ ಶಾರ್ಙ್ಗಿಣೇ ।
ಪ್ರತ್ಯಸ್ತ್ರೈಃ ಶಮಯಾಮಾಸ ಶಾರ್ಙ್ಗಪಾಣಿರವಿಸ್ಮಿತಃ
॥ ೧೨ ॥

ಬ್ರಹ್ಮಾಸ್ತ್ರಸ್ಯ ಚ ಬ್ರಹ್ಮಾಸ್ತ್ರಂ ವಾಯವ್ಯಸ್ಯ ಚ ಪಾರ್ವತಮ್ ।
ಆಗ್ನೇಯಸ್ಯ ಚ ಪಾರ್ಜನ್ಯಂ ನೈಜಂ ಪಾಶುಪತಸ್ಯ ಚ
॥ ೧೩ ॥

ಮೋಹಯಿತ್ವಾ ತು ಗಿರಿಶಂ ಜೃಂಭಣಾಸ್ತ್ರೇಣ ಜೃಂಭಿತಮ್ ।
ಬಾಣಸ್ಯ ಪೃತನಾಂ ಶೌರಿರ್ಜಘಾನಾಸಿಗದೇಷುಭಿಃ
॥ ೧೪ ॥

ಸ್ಕಂದಃ ಪ್ರದ್ಯುಮ್ನಬಾಣೌಘೈರರ್ದ್ಯಮಾನಃ ಸಮಂತತಃ ।
ಅಸೃಗ್ವಿಮುಂಚನ್ ಗಾತ್ರೇಭ್ಯಃ ಶಿಖಿನಾಪಾಕ್ರಮದ್ರಣಾತ್
॥ ೧೫ ॥

ಕುಂಭಾಂಡಃ ಕೂಪಕರ್ಣಶ್ಚ ಪೇತತುರ್ಮುಸಲಾರ್ದಿತೌ ।
ದುದ್ರುವುಸ್ತದನೀಕಾನಿ ಹತನಾಥಾನಿ ಸರ್ವತಃ
॥ ೧೬ ॥

ವಿಶೀರ್ಯಮಾಣಂ ಸ್ವಬಲಂ ದೃಷ್ಟ್ವಾ ಬಾಣೋಽತ್ಯಮರ್ಷಣಃ ।
ಕೃಷ್ಣಮಭ್ಯದ್ರವತ್ ಸಂಖ್ಯೇ ರಥೀ ಹಿತ್ವೈವ ಸಾತ್ಯಕಿಮ್
॥ ೧೭ ॥

ಬಾಣಾಸುರನ ಸಹಾಯಾರ್ಥವಾಗಿ ಸಾಕ್ಷಾತ್ ರುದ್ರದೇವನೇ ವೃಷಭಾರೂಢನಾಗಿ ತನ್ನ ಮಗನಾದ ಕಾರ್ತಿಕೇಯನಿಂದಲೂ, ಪ್ರಮಥಗಣಗಳಿಂದಲೂ ಕೂಡಿಕೊಂಡು ರಣಭೂಮಿಗೆ ಬಂದು ಬಲರಾಮ-ಶ್ರೀಕೃಷ್ಣರೊಡನೆ ಯುದ್ಧದಲ್ಲಿ ತೊಡಗಿದನು. ॥ ೬ ॥ ಪರೀಕ್ಷಿತನೇ! ಶಂಕರನಿಗೂ ಮತ್ತು ಶ್ರೀಕೃಷ್ಣನಿಗೂ, ಕಾರ್ತಿಕೇಯ ಮತ್ತು ಪ್ರದ್ಯುಮ್ನರಿಗೂ, ಅತ್ಯಂತ ಭಯಂಕರವೂ, ಅತ್ಯದ್ಭುತವೂ, ರೋಮಾಂಚಕಾರಿಯೂ ಆದ ಯುದ್ಧವು ನಡೆಯಿತು. ॥ ೭ ॥ ಬಲರಾಮನೊಡನೆ ಕುಂಭಾಂಡ-ಕೂಪಕರ್ಣರು ಯುದ್ಧಮಾಡುತ್ತಿದ್ದರು. ಬಾಣಾಸುರನ ಮಗನೊಡನೆ ಸಾಂಬನೂ, ಬಾಣಾಸುರನೊಡನೆ ಸಾತ್ಯಕಿಯೂ ಯುದ್ಧಮಾಡುತ್ತಿದ್ದರು. ॥ ೮ ॥ ಬ್ರಹ್ಮನೇ ಮೊದಲಾದ ಸುರಾಧೀಶರೂ, ಋಷಿ-ಮುನಿಗಳೂ, ಸಿದ್ಧ-ಚಾರಣರೂ, ಗಂಧರ್ವಾಪ್ಸರೆಯರೂ, ಯಕ್ಷರೂ ಆ ಯುದ್ಧವನ್ನು ನೋಡುವುದಕ್ಕಾಗಿ ವಿಮಾನಗಳಲ್ಲಿ ಕುಳಿತು ಆಗಮಿಸಿದರು. ॥ ೯ ॥ ಭಗವಾನ್ ಶ್ರೀಕೃಷ್ಣನು ತನ್ನ ಶಾರ್ಙ್ಗ ಧನುಸ್ಸಿನಿಂದ ಹರಿತವಾದ ಬಾಣಗಳನ್ನು ಪ್ರಯೋಗಿಸುತ್ತಾ ಶಂಕರನ ಅನುಚರರಾದ ಭೂತ, ಪ್ರೇತ, ಪ್ರಮಥ, ಗುಹ್ಯಕ, ಡಾಕಿನೀ, ಯಾತುಧಾನ, ವೇತಾಲ, ವಿನಾಯಕ, ಪ್ರೇತಗಣ, ಮಾತೃ ಗಣ, ಪಿಶಾಚ, ಕೂಷ್ಮಾಂಡ ಮತ್ತು ಬ್ರಹ್ಮರಾಕ್ಷಸ – ಇವರೆಲ್ಲರನ್ನು ಓಡಿಸಿ ಬಿಟ್ಟನು. ॥ ೧೦-೧೧ ॥ ಪಿನಾಕಪಾಣಿಯಾದ ಶಂಕರನು ಭಗವಾನ್ ಶ್ರೀಕೃಷ್ಣನ ಮೇಲೆ ನಾನಾ ಪ್ರಕಾರದ ಅಸ್ತ್ರ-ಶಸ್ತ್ರಗಳನ್ನು ಪ್ರಯೋಗಿಸಿದನು. ಆದರೆ ಶ್ರೀಕೃಷ್ಣನು ಯಾವುದೇ ವಿಸ್ಮಯವಿಲ್ಲದೆ ಅವುಗಳನ್ನು ವಿರೋಧಿ, ಶಸ್ತ್ರಾಸ್ತ್ರಗಳಿಂದ ಉಪಶಮನ ಮಾಡಿದನು. ॥ ೧೨ ॥ ಭಗವಾನ್ ಶ್ರೀಕೃಷ್ಣನು ಬ್ರಹ್ಮಾಸ್ತ್ರದ ಉಪಶಮನಕ್ಕೆ ಬ್ರಹ್ಮಾಸ್ತ್ರವನ್ನೂ, ವಾಯುವ್ಯಾಸ್ತ್ರಕ್ಕೆ ಪರ್ವತಾಸ್ತ್ರವನ್ನು, ಆಗ್ನೇಯಾಸ್ತ್ರಕ್ಕೆ ಪರ್ಜನ್ಯಾಸ್ತ್ರವನ್ನು, ಪಾಶುಪತಾಸ್ತ್ರಕ್ಕಾಗಿ, ನಾರಾಯಣಾಸ್ತ್ರವನ್ನೂ ಪ್ರಯೋಗ ಮಾಡಿದನು. ॥ ೧೩ ॥ ಇದಾದ ನಂತರ ಭಗವಾನ್ ಶ್ರೀಕೃಷ್ಣನು ಜೃಂಭಣಾಸ್ತ್ರದಿಂದ ಮಹಾದೇವನನ್ನು ಮೋಹಿತಗೊಳಿಸಿದನು. ಅವನು ಯುದ್ಧದಿಂದ ನಿವೃತ್ತನಾಗಿ ಆಕಳಿಸುತ್ತಲೇ ಇರಬೇಕಾಯಿತು. ಆಗ ಶ್ರೀಕೃಷ್ಣನು ಕತ್ತಿ-ಗದೆ-ಬಾಣ ಇವೇ ಮುಂತಾದ ಆಯುಧಗಳಿಂದ ಬಾಣಾಸುರನ ಸೈನ್ಯವನ್ನು ಧ್ವಂಸಮಾಡಿ ಬಿಟ್ಟನು. ॥ ೧೪ ॥ ಇತ್ತ ಪ್ರದ್ಯುಮ್ನನು ಬಾಣಗಳ ಮಳೆಯನ್ನು ಸುರಿಸಿ ಕಾರ್ತಿಕೇಯ ಸ್ವಾಮಿಯನ್ನು ಘಾಸಿಗೊಳಿಸಿದನು. ಅವನು ರಣರಂಗವನ್ನು ಬಿಟ್ಟು ನವಿಲಿನ ಮೇಲೆ ಕುಳಿತು ಓಡಿ ಹೋದನು. ॥ ೧೫ ॥ ಬಲರಾಮನು ತನ್ನ ಹಲಾಯುಧದಿಂದ ಕುಂಭಾಂಡನನ್ನು ಮತ್ತು ಕೂಪಕರ್ಣನನ್ನು ಗಾಯಗೊಳಿಸಿ ರಣರಂಗದಲ್ಲಿ ಕೊಂದುಕೆಡಹಿ ಹಾಕಿದನು. ಹೀಗೆ, ತನ್ನ ಸೇನಾಪತಿಗಳು ಹತರಾಗುವುದನ್ನು ಕಂಡ ಬಾಣಸುರನ ಸಮಸ್ತ ಸೇನೆಯೂ ಚೆಲ್ಲಾ-ಪಿಲ್ಲಿಯಾಗಿ ಹೋಯಿತು. ॥ ೧೬ ॥

ರಥಾರೂಢನಾದ ಬಾಣಸುರನು ಶ್ರೀಕೃಷ್ಣಾದಿಗಳ ಪ್ರಹಾರದಿಂದ ತನ್ನ ಸೇನೆಯು ಚೆಲ್ಲಾಪಿಲ್ಲಿಯಾಗಿ ನಾಶ ಹೊಂದಿರುವುದನ್ನು ನೋಡಿ ಅತ್ಯಂತ ಕ್ರೋಧಗೊಂಡನು. ಅವನು ಕೆರಳಿ ಸಾತ್ಯಕಿಯನ್ನು ಬಿಟ್ಟು ಭಗವಾನ್ ಶ್ರೀಕೃಷ್ಣನನ್ನು ಆಕ್ರಮಿಸಲು ಅವನೆಡೆಗೆ ಧಾವಿಸಿದನು. ॥ ೧೭ ॥

ಧನೂಂಷ್ಯಾಕೃಷ್ಯ ಯುಗಪದ್ಬಾಣಃ ಪಂಚಶತಾನಿ ವೈ ।
ಏಕೈಕಸ್ಮಿನ್ ಶರೌ ದ್ವೌ ದ್ವೌ ಸಂದಧೇ ರಣದುರ್ಮದಃ
॥ ೧೮ ॥

ತಾನಿ ಚಿಚ್ಛೇದ ಭಗವಾನ್ ಧನೂಂಷಿ ಯುಗಪದ್ಧರಿಃ ।
ಸಾರಥಿಂ ರಥಮಶ್ವಾಂಶ್ಚ ಹತ್ವಾ ಶಂಖಮಪೂರಯತ್
॥ ೧೯ ॥

ತನ್ಮಾತಾ ಕೋಟರಾ ನಾಮ ನಗ್ನಾ ಮುಕ್ತಶಿರೋರುಹಾ ।
ಪುರೋಽವತಸ್ಥೇ ಕೃಷ್ಣಸ್ಯ ಪುತ್ರಪ್ರಾಣರಿರಕ್ಷಯಾ
॥ ೨೦ ॥

ತತಸ್ತಿರ್ಯಙ್ಮುಖೋ ನಗ್ನಾಮನಿರೀಕ್ಷನ್ಗದಾಗ್ರಜಃ ।
ಬಾಣಶ್ಚ ತಾವದ್ವಿರಥಶ್ಛಿನ್ನಧನ್ವಾವಿಶತ್ಪುರಮ್
॥ ೨೧ ॥

ವಿದ್ರಾವಿತೇ ಭೂತಗಣೇ ಜ್ವರಸ್ತು ತ್ರಿಶಿರಾಸ್ತ್ರಿಪಾತ್ ।
ಅಭ್ಯಧಾವತ ದಾಶಾರ್ಹಂ ದಹನ್ನಿವ ದಿಶೋ ದಶ
॥ ೨೨ ॥

ಅಥ ನಾರಾಯಣೋ ದೇವಸ್ತಂ ದೃಷ್ಟ್ವಾ ವ್ಯಸೃಜಜ್ಜ್ವರಮ್ ।
ಮಾಹೇಶ್ವರೋ ವೈಷ್ಣವಶ್ಚ ಯುಯುಧಾತೇ ಜ್ವರಾವುಭೌ
॥ ೨೩ ॥

ಮಾಹೇಶ್ವರಃ ಸಮಾಕ್ರಂದನ್ ವೈಷ್ಣವೇನ ಬಲಾರ್ದಿತಃ ।
ಅಲಬ್ಧ್ವಾಭಯಮನ್ಯತ್ರ ಭೀತೋ ಮಾಹೇಶ್ವರೋ ಜ್ವರಃ ।
ಶರಣಾರ್ಥೀ ಹೃಷೀಕೇಶಂ ತುಷ್ಟಾವ ಪ್ರಯತಾಂಜಲಿಃ
॥ ೨೪ ॥

ಜ್ವರ ಉವಾಚ

ನಮಾಮಿ ತ್ವಾನಂತಶಕ್ತಿಂ ಪರೇಶಂ
ಸರ್ವಾತ್ಮಾನಂ ಕೇವಲಂ ಜ್ಞಪ್ತಿಮಾತ್ರಮ್ ।
ವಿಶ್ವೋತ್ಪತ್ತಿಸ್ಥಾನಸಂರೋಧಹೇತುಂ
ಯತ್ತದ್ಬ್ರಹ್ಮ ಬ್ರಹ್ಮಲಿಂಗಂ ಪ್ರಶಾಂತಮ್ ॥ ೨೫ ॥

ಕಾಲೋ ದೈವಂ ಕರ್ಮ ಜೀವಃ ಸ್ವಭಾವೋ
ದ್ರವ್ಯಂ ಕ್ಷೇತ್ರಂ ಪ್ರಾಣ ಆತ್ಮಾ ವಿಕಾರಃ ।
ತತ್ಸಂಘಾತೋ ಬೀಜರೋಹಪ್ರವಾಹ-
ಸ್ತ್ವನ್ಮಾಯೈಷಾ ತನ್ನಿಷೇಧಂ ಪ್ರಪದ್ಯೇ ॥ ೨೬ ॥

ಪರೀಕ್ಷಿತನೇ ! ರಣೋನ್ಮತ್ತನಾದ ಬಾಣಾಸುರನು ತನ್ನ ಒಂದು ಸಾವಿರ ಕೈಗಳಿಂದ ಒಂದೇ ಬಾರಿಗೆ ಐದುನೂರು ಧನಸ್ಸುಗಳಿಂದ ಪ್ರತಿಯೊಬ್ಬ ಸೈನಿಕರ ಮೇಲೂ ಎರಡೆರಡು ಬಾಣಗಳನ್ನು ಪ್ರಯೋಗಿಸಿದನು. ॥ ೧೮ ॥ ಆದರೆ ಭಗವಾನ್ ಶ್ರೀಕೃಷ್ಣನು ಒಂದೇ ಬಾರಿಗೆ ಬಾಣಾಸುರನ ಐದುನೂರು ಧನಸ್ಸುಗಳನ್ನು ಕತ್ತರಿಸಿ, ಸಾರಥಿ, ರಥ, ಕುದುರೆಗಳನ್ನು ನೆಲಸಮಾಡಿದನು ಹಾಗೂ ಪಾಂಚಜನ್ಯ ಶಂಖವನ್ನೂದಿದನು. ॥ ೧೯ ॥ ಕೋಟರಾ ಎಂಬ ಹೆಸರಿನ ದೇವತಾ ಸ್ತ್ರೀಯು ಬಾಣಸುರನಿಗೆ ಧರ್ಮಮಾತೆಯಾಗಿದ್ದಳು. ಅವಳು ತನ್ನ ಉಪಾಸಕ ಪುತ್ರನ ಪ್ರಾಣಗಳ ರಕ್ಷಣೆಗಾಗಿ ಕೂದಲು ಕೆದರಿಕೊಂಡು ಬೆತ್ತಲೆಯಾಗಿ ಶ್ರೀಕೃಷ್ಣನ ಮುಂದೆ ಬಂದು ನಿಂತಳು. ॥ ೨೦ ॥ ಆಗ ಗದಾಗ್ರಜನಾದ ಶ್ರೀಕೃಷ್ಣ ಬೆತ್ತಲೆಯಾದ ಆಕೆಯನ್ನು ನೋಡಬಾರದೆಂದು ಮುಖತಿರುಗಿಸಿ ನಿಂತನು. ಅಷ್ಟರಲ್ಲಿ ಧನಸ್ಸುಗಳನ್ನೂ, ರಥವನ್ನೂ, ಕಳೆದುಕೊಂಡು ಬಾಣಾಸುರನು ಪಟ್ಟಣಕ್ಕೆ ಹಿಂದಿರುಗಿದನು. ॥ ೨೧ ॥

ಇತ್ತಲಾಗಿ ಶಂಕರನ ಭೂತಗಣಗಳೆಲ್ಲವೂ ಪಲಾಯನ ಮಾಡಿದ ನಂತರ ಮೂರು ತಲೆಗಳನ್ನೂ, ಮೂರು ಕಾಲುಗಳನ್ನು ಹೊಂದಿದ್ದ ಮಾಹೇಶ್ವರ ಜ್ವರವು ಹತ್ತು ದಿಕ್ಕುಗಳನ್ನು ದಹಿಸಿ ಬಿಡುವುದೋ ಎಂಬಂತೆ ಆರ್ಭಟಿಸುತ್ತಾ ಭಗವಾನ್ ಶ್ರೀಕೃಷ್ಣನ ಬಳಿಗೆ ಬಂದಿತು. ॥ ೨೨ ॥ ಭಗವಾನ್ ಶ್ರೀಕೃಷ್ಣನು ತನ್ನ ಕಡೆಗೆ ಧಾವಿಸಿ ಬರುತ್ತಿರುವ ಮಾಹೇಶ್ವರ ಜ್ವರವನ್ನು ನೋಡಿ ಅದನ್ನು ಎದುರಿಸಲಿಕ್ಕಾಗಿ ತನ್ನ ವೈಷ್ಣವಜ್ವರವನ್ನು ಬಿಟ್ಟನು. ಈಗ ವೈಷ್ಣವಜ್ವರ ಮತ್ತು ಮಾಹೇಶ್ವರ ಜ್ವರಗಳು ಪರಸ್ಪರ ಕಾದಾಡತೊಡಗಿದವು. ॥ ೨೩ ॥ ಕೊನೆಗೆ ವೈಷ್ಣವ ಜ್ವರದ ತೇಜಸ್ಸಿನಿಂದ ಮಾಹೇಶ್ವರ ಜ್ವರವು ಪೀಡಿಸಲ್ಪಟ್ಟು ಕೂಗಿಕೊಳ್ಳಲು ಪ್ರಾರಂಭಿಸಿತು. ಭಯಗೊಂಡಿದ್ದ ಅದಕ್ಕೆ ಎಲ್ಲಿಯೂ ಅಭಯ ದೊರೆಯಲಿಲ್ಲ. ಆಗ ಅದು ಕೈ ಜೋಡಿಸಿಕೊಂಡು ಶ್ರೀಕೃಷ್ಣನನ್ನೇ ಶರಣುಹೊಂದಿ ಪ್ರಾರ್ಥಿಸಿತು. ॥ ೨೪ ॥

**ಮಾಹೇಶ್ವರ ಜ್ವರವು ಹೇಳಿತು** - ಪ್ರಭುವೇ ! ನಿನ್ನ ಶಕ್ತಿಯು ಅನಂತವಾಗಿದೆ. ನೀನು ಬ್ರಹ್ಮೇಶ್ವರರಿಗಿಂತಲೂ ಶ್ರೇಷ್ಠನಾದ ಈಶ್ವರನಾಗಿರುವೆ. ಸಮಸ್ತರ ಆತ್ಮನೂ ನೀನೇ. ಅದ್ವಿತೀಯನೂ ಕೇವಲ ಜ್ಞಾನಸ್ವರೂಪನೂ ನೀನೇ ಆಗಿರುವೆ. ಪ್ರಪಂಚದ ಸೃಷ್ಟಿ-ಸ್ಥಿತಿ-ಲಯಗಳಿಗೆ ಕಾರಣನು ನೀನೇ. ಶ್ರುತಿಗಳ ಮೂಲಕ ನಿನ್ನನ್ನು ಸ್ತುತಿಸಿ, ಅನುಮಾನಿಸಲಾಗುತ್ತದೆ. ಸಮಸ್ತ ವಿಕಾರಗಳಿಂದಲೂ ರಹಿತವಾದ ಶುದ್ಧಬ್ರಹ್ಮವೂ ನೀನೇ ಆಗಿರುವೆ. ಅಂತಹ ನಿನಗೆ ನಾನು ನಮಸ್ಕರಿಸುತ್ತೇನೆ. ॥ ೨೫ ॥ ಕಾಲ, ಅದೃಷ್ಟ ಕರ್ಮ, ಜೀವ, ಸ್ವಭಾವ, ಸೂಕ್ಷ್ಮಭೂತ, ಶರೀರ, ಸೂತ್ರಾತ್ಮಾ ಪ್ರಾಣ, ಅಹಂಕಾರ, ಏಕಾದಶ ಇಂದ್ರಿಯಗಳು ಮತ್ತು ಪಂಚಭೂತಗಳು ಇವುಗಳ ಸಂಘಾತದಿಂದ ಉಂಟಾದ ಲಿಂಗಶರೀರ, ಬೀಜಾಂಕುರ ನ್ಯಾಯದಂತೆ ಅದರ ಕರ್ಮ ಮತ್ತು ಕರ್ಮದಿಂದ ಪುನಃ ಲಿಂಗಶರೀರದ ಉತ್ಪತ್ತಿ - ಇವೆಲ್ಲವೂ ನಿನ್ನ ಮಾಯೆಯೇ ಆಗಿದೆ. ಈ ಮಾಯೆಗೆ ದೂರನಾಗಿ ಅದನ್ನು ನಿವಾರಣೆ ಮಾಡುವ ನಿನಗೆ ಶರಣಾಗಿದ್ದೇನೆ. ॥ ೨೬ ॥

ನಾನಾಭಾವೈರ್ಲೀಲಯೈವೋಪಪನ್ನೈ-
ರ್ದೇವಾನ್ಸಾಧೂನ್ ಲೋಕಸೇತೂನ್ಬಿಭರ್ಷಿ ।
ಹಂಸ್ಯುನ್ಮಾರ್ಗಾನ್ ಹಿಂಸಯಾ ವರ್ತಮಾನಾನ್
ಜನ್ಮೈತತ್ತೇ ಭಾರಹಾರಾಯ ಭೂಮೇಃ ॥ ೨೭ ॥

ತಪ್ತೋಽಹಂ ತೇ ತೇಜಸಾ ದುಸ್ಸಹೇನ
ಶಾಂತೋಗ್ರೇಣಾತ್ಯುಲ್ಬಣೇನ ಜ್ವರೇಣ ।
ತಾವತ್ತಾಪೋ ದೇಹಿನಾಂ ತೇಽಂಘ್ರಿಮೂಲಂ
ನೋ ಸೇವೇರನ್ಯಾವದಾಶಾನುಬದ್ಧಾಃ ॥ ೨೮ ॥

*ಶ್ರೀಭಗವಾನುವಾಚ*

ತ್ರಿಶಿರಸ್ತೇ ಪ್ರಸನ್ನೋಽಸ್ಮಿ ವ್ಯೇತು ತೇ ಮಜ್ಜ್ವರಾದ್ಭಯಮ್ ।
ಯೋ ನೌ ಸ್ಮರತಿ ಸಂವಾದಂ ತಸ್ಯ ತ್ವನ್ನ ಭವೇದ್ಭಯಮ್
॥ ೨೯ ॥

ಇತ್ಯುಕ್ತೋಽಚ್ಯುತಮಾನಮ್ಯ ಗತೋ ಮಾಹೇಶ್ವರೋ ಜ್ವರಃ ।
ಬಾಣಸ್ತು ರಥಮಾರೂಢಃ ಪ್ರಾಗಾದ್ಯೋತ್ಸ್ಯನ್ ಜನಾರ್ದನಮ್
॥ ೩೦ ॥

ತತೋ ಬಾಹುಸಹಸ್ರೇಣ ನಾನಾಯುಧಧರೋಽಸುರಃ ।
ಮುಮೋಚ ಪರಮಕ್ರುದ್ಧೋ ಬಾಣಾಂಶ್ಚಕ್ರಾಯುಧೇ ನೃಪ
॥ ೩೧ ॥

ತಸ್ಯಾಸ್ಯತೋಽಸ್ತ್ರಾಣ್ಯಸಕೃಚ್ಚಕ್ರೇಣ ಕ್ಷುರನೇಮಿನಾ ।
ಚಿಚ್ಛೇದ ಭಗವಾನ್ಬಾಹೂನ್ ಶಾಖಾ ಇವ ವನಸ್ಪತೇಃ
॥ ೩೨ ॥

ಬಾಹುಷುಚ್ಛಿದ್ಯಮಾನೇಷು ಬಾಣಸ್ಯ ಭಗವಾನ್ ಭವಃ ।
ಭಕ್ತಾನುಕಂಪ್ಯುಪವ್ರಜ್ಯ ಚಕ್ರಾಯುಧಮಭಾಷತ
॥ ೩೩ ॥

*ಶ್ರೀರುದ್ರ ಉವಾಚ*

ತ್ವಂ ಹಿ ಬ್ರಹ್ಮ ಪರಂ ಜ್ಯೋತಿರ್ಗೂಢಂ ಬ್ರಹ್ಮಣಿ ವಾಙ್ಮಯೇ ।
ಯಂ ಪಶ್ಯಂತ್ಯಮಲಾತ್ಮಾನ ಆಕಾಶಮಿವ ಕೇವಲಮ್
॥ ೩೪ ॥

ನಾಭಿರ್ನಭೋಽಗ್ನಿರ್ಮುಖಮಂಬು ರೇತೋ
ದ್ಯೌಃ ಶೀರ್ಷಮಾಶಾ ಶ್ರುತಿರಂಘ್ರಿರುರ್ವೀ ।
ಚಂದ್ರೋ ಮನೋ ಯಸ್ಯ ದೃಗರ್ಕ ಆತ್ಮಾ
ಅಹಂ ಸಮುದ್ರೋ ಜಠರಂ ಭುಜೇಂದ್ರಃ ॥ ೩೫ ॥

ರೋಮಾಣಿ ಯಸ್ಯೌಷಧಯೋಽಂಬುವಾಹಾಃ
ಕೇಶಾ ವಿರಿಂಚೋ ಧಿಷಣಾ ವಿಸರ್ಗಃ ।
ಪ್ರಜಾಪತಿರ್ಹೃದಯಂ ಯಸ್ಯ ಧರ್ಮಃ
ಸ ವೈ ಭವಾನ್ಪುರುಷೋ ಲೋಕಕಲ್ಪಃ ॥ ೩೬ ॥

ಪ್ರಭೋ! ನೀನು ಲೀಲೆಯಿಂದಲೇ ಅನೇಕ ರೂಪಗಳನ್ನು ಧರಿಸಿ, ದೇವತೆಗಳ, ಸಾಧುಗಳ ಮತ್ತು ಲೋಕಮರ್ಯಾದೆಯ ಪಾಲನೆ-ಪೋಷಣೆ ಮಾಡುತ್ತಿರುವೆ. ಲೋಕಕಂಟಕರಾದ ದುರ್ಮಾರ್ಗಿಗಳನ್ನು ಸಂಹರಿಸುವೆ. ಆದುದರಿಂದ ನಿನ್ನ ಅವತಾರಗಳೆಲ್ಲವೂ ಭೂಭಾರಹರಣಕ್ಕಾಗಿ ಆಗಿವೆ. ॥ ೨೭ ॥ ಪ್ರಭುವೇ! ಶಾಂತವಾದಂತೆ ಕಂಡರೂ ಉಗ್ರವಾಗಿರುವ ನಿನ್ನ ಅತ್ಯಂತ ಭಯಾನಕವಾದ ಮತ್ತು ದುಸ್ಸಹವಾದ ಜ್ವರದಿಂದ ನಾನು ಪರಿತಪಿಸುತ್ತಿದ್ದೇನೆ. ದೇಹಧಾರಿಗಳಾದ ಜೀವರು ಆಸೆಯಿಂದ ಬಂಧಿತರಾಗಿ ನಿನ್ನ ಪಾದ ಕಮಲವನ್ನು ಸೇವಿಸುವವರೆಗೂ ತಾಪ-ಸಂತಾಪದಲ್ಲಿ ಬೇಯುತ್ತಿರುತ್ತಾರೆ. ॥ ೨೮ ॥

**ಭಗವಾನ್ ಶ್ರೀಕೃಷ್ಣನು ಹೇಳಿದನು** – ತ್ರಿಶಿರಸನೇ! ನಾನು ನಿನ್ನ ಮೇಲೆ ಪ್ರಸನ್ನನಾಗಿರುವೆನು. ಈಗ ನೀನು ನನ್ನ ಜ್ವರದಿಂದ ನಿರ್ಭಯನಾಗು. ಜಗತ್ತಿನಲ್ಲಿ ನಮ್ಮಿಬ್ಬರ ಈ ಸಂವಾದವನ್ನು ಸ್ಮರಿಸುವವರಿಗೆ ನಿನ್ನಿಂದ ಯಾವುದೇ ಭಯ ಇರಲಾರದು. ॥ ೨೯ ॥ ಭಗವಾನ್ ಶ್ರೀಕೃಷ್ಣನು ಹೀಗೆ ಹೇಳಿದಾಗ ಮಾಹೇಶ್ವರಜ್ವರವು ಅವನಿಗೆ ನಮಸ್ಕರಿಸಿ ಹೊರಟುಹೋಯಿತು. ಅಷ್ಟರಲ್ಲಿ ಬಾಣಾಸುರನು ರಥಾರೂಢನಾಗಿ ಶ್ರೀಕೃಷ್ಣನೊಡನೆ ಯುದ್ಧಮಾಡಲು ಆಗಮಿಸಿದನು. ॥ ೩೦ ॥ ಪರೀಕ್ಷಿತನೇ! ಬಾಣಾಸುರನು ತನ್ನ ಸಾವಿರ ಕೈಗಳಲ್ಲಿ ನಾನಾ ವಿಧವಾದ ಆಯುಧಗಳನ್ನು ಧರಿಸಿದ್ದನು. ಅತ್ಯಂತ ಕೋಪಾವಿಷ್ಟನಾದ ಅವನು ಚಕ್ರಪಾಣಿ ಭಗವಂತನ ಮೇಲೆ ಬಾಣಗಳ ಮಳೆಯನ್ನೇ ಸುರಿಸಿದನು. ॥ ೩೧ ॥ ಬಾಣಾಸುರನ ಬಾಣಗಳ ಮಳೆಯನ್ನು ನೋಡಿದಾಗ ಭಗವಾನ್ ಶ್ರೀಕೃಷ್ಣನು ವೃಕ್ಷಗಳ ಕೊಂಬೆಗಳನ್ನು ಕತ್ತರಿಸುವಂತೆ ಅತ್ಯಂತ ತೀಕ್ಷ್ಣವಾದ ಅಲಗಿನಿಂದ ಕೂಡಿದ ಸುದರ್ಶನ ಚಕ್ರದಿಂದ ಬಾಣಾಸುರನ ಬಾಹುಗಳು ಕತ್ತರಿಸಲ್ಪಡುವುದನ್ನು ಕಂಡು ಭಕ್ತವತ್ಸಲನಾದ ಭಗವಾನ್ ಶಂಕರನು ಚಕ್ರಧಾರಿ ಶ್ರೀಕೃಷ್ಣನ ಬಳಿಗೆ ಬಂದು ಅವನನ್ನು ಸ್ತುತಿಸ ತೊಡಗಿದನು. ॥ ೩೨-೩೩ ॥

**ಭಗವಾನ್ ಶಂಕರನು ಹೇಳಿದನು** – ಪ್ರಭೋ! ನೀನು ವೇದಮಂತ್ರಗಳಲ್ಲಿ ತಾತ್ಪರ್ಯರೂಪದಿಂದ ಅಡಗಿರುವ ಪರಮ ಜ್ಯೋತಿಸ್ಸ್ವರೂಪ ಪರಬ್ರಹ್ಮನಾಗಿರುವೆ. ಶುದ್ಧಹೃದಯಗಳ ಮಹಾತ್ಮರು ನಿನ್ನ ಆಕಾಶದಂತೆ ಸರ್ವವ್ಯಾಪಕ ಮತ್ತು ನಿರ್ವಿಕಾರ ಸ್ವರೂಪವನ್ನು ಸಾಕ್ಷಾತ್ಕರಿಸಿಕೊಳ್ಳುತ್ತಾರೆ. ॥ ೩೪ ॥ ಆಕಾಶವು ನಿನ್ನ ನಾಭಿಯಾಗಿದೆ. ಅಗ್ನಿಯು ಮುಖ ಮತ್ತು ಜಲವು ವೀರ್ಯವಾಗಿದೆ. ಸ್ವರ್ಗವು ತಲೆಯು, ದಿಕ್ಕುಗಳೇ ಕಿವಿಗಳು, ಪೃಥಿವಿಯೇ ಚರಣಗಳಾಗಿವೆ. ಚಂದ್ರನೇ ಮನಸ್ಸು ಸೂರ್ಯನೇ ಕಣ್ಣುಗಳು, ಶಿವನಾದ ನಾನು ನಿನ್ನ ಅಹಂಕಾರನಾಗಿರುವೆನು. ಸಮುದ್ರವೇ ನಿನ್ನ ಹೊಟ್ಟೆಯು ಮತ್ತು ಇಂದ್ರನು ನಿನ್ನ ಭುಜವಾಗಿದ್ದಾನೆ. ॥ ೩೫ ॥ ಧಾನ್ಯಾದಿ ಔಷಧಿಗಳು ನಿನ್ನ ರೋಮಗಳು, ಮೇಘಗಳೇ ತಲೆಕೂದಲು, ಬ್ರಹ್ಮನೇ ಬುದ್ಧಿಯಾಗಿದ್ದಾನೆ. ಪ್ರಜಾಪತಿಯೇ ನಿನ್ನ ಲಿಂಗವು, ಧರ್ಮವು ಹೃದಯವಾಗಿದೆ. ಹೀಗೆ ಸಮಸ್ತ ಲೋಕ-ಲೋಕಾಂತರಗಳ ಜೊತೆಗೆ ಯಾರ ಶರೀರದ ತುಲನೆ ಮಾಡಲಾಗುತ್ತದೋ ಆ ಪರಮಪುರುಷನು ನೀನೇ ಆಗಿರುವೆ. ॥ ೩೬ ॥

ತವಾವತಾರೋಽಯಮಕುಂಠಧಾಮನ್
ಧರ್ಮಸ್ಯ ಗುಪ್ತ್ಯೈ ಜಗತೋ ಭವಾಯ ।
ವಯಂ ಚ ಸರ್ವೇ ಭವತಾನುಭಾವಿತಾ
ವಿಭಾವಯಾಮೋ ಭುವನಾನಿ ಸಪ್ತ ॥ ೩೭ ॥

ತ್ವಮೇಕ ಆದ್ಯಃ ಪುರುಷೋಽದ್ವಿತೀಯ-
ಸ್ತುರ್ಯಃ ಸ್ವದೃಗ್ಘೇತುರಹೇತುರೀಶಃ ।
ಪ್ರತೀಯಸೇಽಥಾಪಿ ಯಥಾವಿಕಾರಂ
ಸ್ವಮಾಯಯಾ ಸರ್ವಗುಣಪ್ರಸಿದ್ಧ್ಯೈ ॥ ೩೮ ॥

ಯಥೈವ ಸೂರ್ಯಃ ಪಿಹಿತಶ್ಛಾಯಯಾ ಸ್ವಯಾ
ಛಾಯಾಂ ಚ ರೂಪಾಣಿ ಚ ಸಂಚಕಾಸ್ತಿ ।
ಏವಂ ಗುಣೇನಾಪಿಹಿತೋ ಗುಣಾಂಸ್ತ್ವ-
ಮಾತ್ಮಪ್ರದೀಪೋ ಗುಣಿನಶ್ಚ ಭೂಮನ್ ॥ ೩೯ ॥

ಯನ್ಮಾಯಾಮೋಹಿತಧಿಯಃ ಪುತ್ರದಾರಗೃಹಾದಿಷು ।
ಉನ್ಮಜ್ಜಂತಿ ನಿಮಜ್ಜಂತಿ ಪ್ರಸಕ್ತಾ ವೃಜಿನಾರ್ಣವೇ
॥ ೪೦ ॥

ದೇವದತ್ತಮಿಮಂ ಲಬ್ಧ್ವಾ ನೃಲೋಕಮಜಿತೇಂದ್ರಿಯಃ ।
ಯೋ ನಾದ್ರಿಯೇತ ತ್ವತ್ಪಾದೌ ಸ ಶೋಚ್ಯೋ ಹ್ಯಾತ್ಮವಂಚಕಃ
॥ ೪೧ ॥

ಯಸ್ತ್ವಾಂ ವಿಸೃಜತೇ ಮರ್ತ್ಯ ಆತ್ಮಾನಂ ಪ್ರಿಯಮೀಶ್ವರಮ್ ।
ವಿಪರ್ಯಯೇಂದ್ರಿಯಾರ್ಥಾರ್ಥಂ ವಿಷಮತ್ತ್ಯಮೃತಂ ತ್ಯಜನ್
॥ ೪೨ ॥

ಅಹಂ ಬ್ರಹ್ಮಾಥ ವಿಬುಧಾ ಮುನಯಶ್ಚಾಮಲಾಶಯಾಃ ।
ಸರ್ವಾತ್ಮನಾ ಪ್ರಪನ್ನಾಸ್ತ್ವಾಮಾತ್ಮಾನಂ ಪ್ರೇಷ್ಠಮೀಶ್ವರಮ್
॥ ೪೩ ॥

ತಂ ತ್ವಾ ಜಗತ್ಸ್ಥಿತ್ಯುದಯಾಂತಹೇತುಂ
ಸಮಂ ಪ್ರಶಾಂತಂ ಸುಹೃದಾತ್ಮದೈವಮ್ ।
ಅನನ್ಯಮೇಕಂ ಜಗದಾತ್ಮಕೇತಂ
ಭವಾಪವರ್ಗಾಯ ಭಜಾಮ ದೇವಮ್ ॥ ೪೪ ॥

ಅಖಂಡ ಜ್ಯೋತಿಸ್ವರೂಪನಾದ ಪರಮಾತ್ಮನೇ! ನಿನ್ನ ಈ ಅವತಾರವು ಧರ್ಮರಕ್ಷಣೆಗಾಗಿ ಮತ್ತು ಪ್ರಪಂಚದ ಅಭ್ಯುದಯ ಅಭಿವೃದ್ಧಿಗಾಗಿಯೇ ಆಗಿರುವುದು. ನಾವೆಲ್ಲರೂ ನಿನ್ನ ಪ್ರಭಾವ ದಿಂದಲೇ ಪ್ರಭಾವಿತರಾಗಿ ಏಳು ಭುವನಗಳನ್ನು ಪಾಲಿಸುತ್ತಿದ್ದೇವೆ. ॥ ೩೭ ॥ ಪ್ರಭೋ! ನೀನು ಸಜಾತೀಯ, ವಿಜಾತೀಯ ಮತ್ತು ಸ್ವಗತಭೇದ ರಹಿತನಾದ ಅದ್ವಿತೀಯ – ಆದಿಪುರುಷ ನಾಗಿರುವೆ. ಮಾಯಾಕೃತವಾದ ಜಾಗ್ರತ್, ಸ್ವಪ್ನ ಸುಷುಪ್ತಿ ಎಂಬ ಮೂರು ಅವಸ್ಥೆಗಳಲ್ಲಿ ಅನುಗತವಾದ ಮತ್ತು ಅವುಗಳಿಂದ ಅತೀತ ತುರೀಯ ತತ್ತ್ವವೂ ನೀನೇ ಆಗಿರುವೆ. ನೀನು ಬೇರೆ ಯಾವುದೇ ವಸ್ತುವಿನಿಂದ ಪ್ರಕಾಶಿತನಾಗದೆ ಸ್ವಯಂ ಪ್ರಕಾಶನಾಗಿರುವೆ. ನೀನು ಎಲ್ಲದರ ಕಾರಣನಾಗಿದ್ದರೂ ನಿನಗೆ ಯಾವ ಕಾರಣವೂ ಇಲ್ಲ. ಭಗವಂತನೇ! ಹೀಗಿದ್ದರೂ ಕೂಡ ತ್ರಿಗುಣಗಳ ವಿಭಿನ್ನ ವಿಷಮತೆ ಗಳನ್ನು ಪ್ರಕಾಶಿತಗೊಳಿಸಲು ನಿನ್ನ ಮಾಯೆಯಿಂದಲೇ ದೇವತೆ, ಪಶು-ಪಕ್ಷಿ, ಮನುಷ್ಯ ಮುಂತಾದ ಶರೀರಗಳಿಗೆ ಅನುಸಾರವಾಗಿ ಬೇರೆ-ಬೇರೆ ರೂಪಗಳನ್ನು ಹೊಂದಿ ವಿಶ್ವರೂಪನಾಗಿ ಕಂಡು ಬರುವೆ. ॥ ೩೮ ॥ ಪ್ರಭುವೇ! ಸೂರ್ಯನು ತನ್ನ ನೆರಳಾದ ಮೇಘಗಳಿಂದ ಮುಚ್ಚಿಹೋಗುತ್ತಾನೆ ಮತ್ತು ಆ ಮೋಡಗಳನ್ನು ಹಾಗೂ ಬೇರೆ-ಬೇರೆ ರೂಪಗಳನ್ನು ಪ್ರಕಾಶಿಸುವಂತೆಯೇ ನೀನಾದರೋ ಸ್ವಯಂಪ್ರಕಾಶನಾಗಿದ್ದರೂ ಗುಣಗಳ ಮೂಲಕ ಮುಚ್ಚಿಹೋಗುವೆ ಮತ್ತು ಸಮಸ್ತ ಗುಣಗಳನ್ನು ಗುಣಾಭಿ ಮಾನಿಗಳಾದ ಜೀವರನ್ನು ಪ್ರಕಾಶಿಸುತ್ತಿರುವೆ. ವಾಸ್ತವದಲ್ಲಿ ನೀನು ಅನಂತನಾಗಿರುವೆ. ॥ ೩೯ ॥

ಭಗವಂತಾ! ನಿನ್ನ ಮಾಯೆಯಿಂದ ಮೋಹಿತರಾದ ಜನರು ಪತ್ನಿ-ಪುತ್ರ, ದೇಹ-ಗೇಹ ಮುಂತಾದವುಗಳಲ್ಲಿ ಆಸಕ್ತರಾಗಿ, ಮತ್ತೆ ದುಃಖದ ಅಪಾರ ಸಮುದ್ರದಲ್ಲಿ ಮುಳುಗಿರುತ್ತಾರೆ. ॥ ೪೦ ॥ ಜಗತ್ತಿನ ಮಾನವರಿಗೆ ಈ ಮನುಷ್ಯ ಶರೀರವನ್ನು ನೀನು ಮಹತ್ತರ ಕೃಪೆಮಾಡಿಕೊಟ್ಟಿರುವೆ. ಇದನ್ನು ಪಡೆದರೂ ಕೂಡ ತನ್ನ ಇಂದ್ರಿಯ ಗಳನ್ನು ಯಾವನು ವಶಪಡಿಸಿಕೊಳ್ಳುವುದಿಲ್ಲವೋ, ನಿನ್ನ ಚರಣ ಕಮಲಗಳನ್ನು ಆಶ್ರಯಿಸುವುದಿಲ್ಲವೋ, ಅವನ್ನು ಸೇವಿಸುವು ದಿಲ್ಲವೋ ಅಂತಹ ಮನುಷ್ಯನ ಜೀವನವು ಅತ್ಯಂತ ಶೋಚನೀಯ ವಾಗಿದೆ. ಅವನು ಸ್ವತಃ ತನ್ನನ್ನು ವಂಚಿಸಿ ಕೊಳ್ಳುತ್ತಿದ್ದಾನೆ. ॥ ೪೧ ॥ ಪ್ರಭುವೇ! ನೀನು ಸಮಸ್ತ ಪ್ರಾಣಿಗಳ ಆತ್ಮನೂ, ಪ್ರಿಯತಮನೂ, ಈಶ್ವರನೂ ಆಗಿರುವೆ. ಮೃತ್ಯುಧರ್ಮವುಳ್ಳ ಮನುಷ್ಯನು ನಿನ್ನನ್ನು ಬಿಟ್ಟು, ಅನಾತ್ಮವೂ, ದುಃಖರೂಪವೂ, ತುಚ್ಛವೂ ಆದ ವಿಷಯ ಗಳಲ್ಲಿ ಬುದ್ಧಿಯುಳ್ಳ ಮೂರ್ಖನು ಅಮೃತವನ್ನು ಬಿಟ್ಟು ವಿಷವನ್ನು ಕುಡಿದಂತೆಯೇ ಆಗಿದೆ. ॥ ೪೨ ॥ ಸರ್ವೇಶ್ವರನೇ! ನಾನು, ಬ್ರಹ್ಮಾ ಸಮಸ್ತ ದೇವತೆಗಳು ಮತ್ತು ಶುದ್ಧಾತ್ಮರಾದ ಋಷಿ-ಮುನಿಗಳು ಸರ್ವಾತ್ಮಭಾವದಿಂದ ನಿನಗೆ ಶರಣಾಗಿದ್ದೇವೆ. ಏಕೆಂದರೆ, ನೀನೇ ನಮ್ಮೆಲ್ಲರ ಆತ್ಮನೂ, ಪ್ರಿಯತಮನೂ, ಈಶ್ವರನೂ ಆಗಿರುವೆ.॥೪೩॥ ನೀನು ಜಗತ್ತಿನ ಉತ್ಪತ್ತಿ-ಸ್ಥಿತಿ ಪ್ರಳಯಗಳಿಗೆ ಕಾರಣನಾಗಿರುವೆ. ನೀನು ಎಲ್ಲದರಲ್ಲಿ ಸಮನೂ, ಪರಮಶಾಂತನೂ, ಎಲ್ಲರ ಸುಹೃದನೂ, ಆತ್ಮನೂ, ಇಷ್ಟದೇವನೂ ಆಗಿರುವೆ. ನೀನು ಅನನ್ಯನೂ, ಅದ್ವಿತೀಯನೂ, ಜಗದಾಧಾರನೂ, ಅಧಿಷ್ಠಾನನೂ ಆಗಿರುವೆ. ಪ್ರಭೋ! ನಾವೆಲ್ಲರೂ ಪ್ರಪಂಚದಿಂದ ಮುಕ್ತರಾಗಲಿಕ್ಕಾಗಿ ನಿನ್ನನ್ನು ಭಜಿಸುತ್ತೇವೆ. ॥ ೪೪ ॥

ಅಯಂ ಮಮೇಷ್ಟೋ ದಯಿತೋಽನುವರ್ತೀ
ಮಯಾಭಯಂ ದತ್ತಮಮುಷ್ಯ ದೇವ ।
ಸಂಪಾದ್ಯತಾಂ ತದ್ಭವತಃ ಪ್ರಸಾದೋ
ಯಥಾ ಹಿ ತೇ ದೈತ್ಯಪತೌ ಪ್ರಸಾದಃ ॥ ೪೫ ॥

*ಶ್ರೀಭಗವಾನುವಾಚ*

ಯದಾತ್ಥ ಭಗವಂಸ್ತ್ವಂ ನಃ ಕರವಾಮ ಪ್ರಿಯಂ ತವ ।
ಭವತೋ ಯದ್ವ್ಯವಸಿತಂ ತನ್ಮೇ ಸಾಧ್ವನುಮೋದಿತಮ್ ॥ ೪೬ ॥

ಅವಧ್ಯೋಽಯಂ ಮಮಾಪ್ಯೇಷ
ವೈರೋಚನಿಸುತೋಽಸುರಃ ।
ಪ್ರಹ್ಲಾದಾಯ ವರೋ ದತ್ತೋ
ನ ವಧ್ಯೋ ಮೇ ತವಾನ್ವಯಃ ॥ ೪೭ ॥

ದರ್ಪೋಪಶಮನಾಯಾಸ್ಯ ಪ್ರವೃಕ್ಣಾ ಬಾಹವೋ ಮಯಾ ।
ಸೂದಿತಂ ಚ ಬಲಂ ಭೂರಿ ಯಚ್ಚ ಭಾರಾಯಿತಂ ಭುವಃ ॥ ೪೮ ॥

ಚತ್ವಾರೋಽಸ್ಯ ಭುಜಾಃ ಶಿಷ್ಟಾ ಭವಿಷ್ಯಂತ್ಯಜರಾಮರಾಃ ।
ಪಾರ್ಷದಮುಖ್ಯೋ ಭವತೋ ನ ಕುತಶ್ಚಿದ್ಭಯೋಽಸುರಃ ॥ ೪೯ ॥

ಇತಿ ಲಬ್ಧ್ವಾಽಭಯಂ ಕೃಷ್ಣಂ ಪ್ರಣಮ್ಯ ಶಿರಸಾಸುರಃ ।
ಪ್ರಾದ್ಯುಮ್ನಿಂ ರಥಮಾರೋಪ್ಯ ಸವಧ್ವಾ ಸಮುಪಾನಯತ್ ॥ ೫೦ ॥

ಅಕ್ಷೌಹಿಣ್ಯಾ ಪರಿವೃತಂ ಸುವಾಸಃಸಮಲಂಕೃತಮ್ ।
ಸಪತ್ನೀಕಂ ಪುರಸ್ಕೃತ್ಯ ಯಯೌ ರುದ್ರಾನುಮೋದಿತಃ ॥ ೫೧ ॥

ಸ್ವರಾಜಧಾನೀಂ ಸಮಲಂಕೃತಾಂ ಧ್ವಜೈಃ
ಸತೋರಣೈರುಕ್ಷಿತಮಾರ್ಗಚತ್ವರಾಮ್ ।
ವಿವೇಶ ಶಂಖಾನಕದುಂದುಭಿಸ್ವನೈ-
ರಭ್ಯುದ್ಯತಃ ಪೌರಸುಹೃದ್ದ್ವಿಜಾತಿಭಿಃ ॥ ೫೨ ॥

ಯ ಏವಂ ಕೃಷ್ಣವಿಜಯಂ ಶಂಕರೇಣ ಚ ಸಂಯುಗಮ್ ।
ಸಂಸ್ಮರೇತ್ಪ್ರಾತರುತ್ಥಾಯ ನ ತಸ್ಯ ಸ್ಯಾತ್ ಪರಾಜಯಃ ॥ ೫೩ ॥

ದೇವಾ ! ಈ ಬಾಣಾಸುರನು ನನಗೆ ಪರಮಪ್ರಿಯನೂ, ಕೃಪಾಪಾತ್ರನೂ, ಸೇವಕನೂ ಆಗಿರುವನು. ನಾನು ಇವನಿಗೆ ಅಭಯದಾನವನ್ನು ಕೊಟ್ಟಿರುವೆನು. ಪ್ರಭೋ ! ಇವನ ಮುತ್ತಾತನಾದ ಪ್ರಹ್ಲಾದನ ಮೇಲೆ ಹೇಗೆ ನೀನು ಕೃಪೆಯನ್ನು ತೋರಿದೆಯೋ ಹಾಗೆಯೇ ಇವನ ಮೇಲೆಯೂ ನೀನು ಕೃಪೆಯನ್ನು ತೋರು. ॥ ೪೫ ॥

**ಭಗವಾನ್ ಶ್ರೀಕೃಷ್ಣನು ಹೇಳಿದನು** – ಭಗವಂತನಾದ ರುದ್ರನೇ ! ನಿನ್ನ ಮಾತಿನಂತೆ ನಾನು ಇವನನ್ನು ನಿರ್ಭಯನನ್ನಾಗಿಸುತ್ತೇನೆ. ನೀನು ಹಿಂದೆ ಇವನ ವಿಷಯದಲ್ಲಿ ನಿಶ್ಚಯಿಸಿರುವುದನ್ನೇ ನಾನು ಇವನ ಭುಜಗಳನ್ನು ಕತ್ತರಿಸಿ ಅನುಮೋದಿಸಿದ್ದೇನೆ. ॥ ೪೬ ॥ ಬಾಣಾಸುರನು ದೈತ್ಯರಾಜ ಬಲಿಯ ಮಗನಾಗಿರುವುದನ್ನು ನಾನು ಬಲ್ಲೆನು. ಅದಕ್ಕಾಗಿ ನಾನು ಇವನನ್ನು ವಧಿಸಲಾರೆ ; ಏಕೆಂದರೆ, ನಾನು ಪ್ರಹ್ಲಾದನಿಗೆ – 'ನಿನ್ನ ವಂಶದಲ್ಲಿ ಹುಟ್ಟಿದ ಯಾವ ದೈತ್ಯನನ್ನೂ ನಾನು ವಧಿಸುವುದಿಲ್ಲ' ಎಂಬ ವರವನ್ನು ಕೊಟ್ಟಿರುವೆನು. ॥ ೪೭ ॥ ಇವನ ದರ್ಪವನ್ನು ಮುರಿಯುವ ಸಲುವಾಗಿ ನಾನು ಇವನ ತೋಳುಗಳನ್ನು ಕತ್ತರಿಸಿ ಹಾಕಿದೆನು. ಇವನ ಬಹಳ ದೊಡ್ಡ ಸೈನ್ಯವು ಭೂಮಿಗೆ ಭಾರವಾಗಿತ್ತು. ಅದಕ್ಕಾಗಿ ನಾನು ಅದನ್ನು ಸಂಹರಿಸಿ ಬಿಟ್ಟಿರುವೆನು. ॥ ೪೮ ॥ ಈಗ ಇವನಿಗೆ ನಾಲ್ಕು ಭುಜಗಳು ಉಳಿದಿವೆ. ಅವು ಅಜರಾಮರವಾಗಿರುವವು. ಈ ಬಾಣಾಸುರನು ನಿನ್ನ ಪಾರ್ಷದರಲ್ಲಿ ಮುಖ್ಯನಾಗಿರುವನು. ಇನ್ನು ಇವನಿಗೆ ಯಾರಿಂದಲೂ, ಯಾವುದೇ ರೀತಿಯ ಭಯವು ಇರುವುದಿಲ್ಲ. ॥ ೪೯ ॥

ಶ್ರೀಕೃಷ್ಣನಿಂದ ಹೀಗೆ ಅಭಯದಾನವನ್ನು ಪಡೆದು ಬಾಣಾಸುರನು ಆವನ ಬಳಿಗೆ ಬಂದು ಶಿರಸಾಷ್ಟಾಂಗ ನಮಸ್ಕಾರಮಾಡಿ, ಅನಿರುದ್ಧನನ್ನು, ತನ್ನ ಪುತ್ರಿಯಾದ ಉಷೆಯನ್ನು ರಥದಲ್ಲಿ ಕುಳ್ಳಿರಿಸಿಕೊಂಡು ಭಗವಂತನ ಬಳಿಗೆ ಕರೆದುಕೊಂಡು ಬಂದನು.॥೫೦॥ ಅನಂತರ ಭಗವಾನ್ ಶ್ರೀಕೃಷ್ಣನು ಮಹಾದೇವನಿಂದ ಅನುಮತಿಯನ್ನು ಪಡೆದು ಒಂದು ಅಕ್ಷೌಹಿಣಿ ಸೈನ್ಯದೊಂದಿಗೆ ವಸ್ತ್ರಾಲಂಕಾರ ಭೂಷಿತರಾದ ಉಷೆ – ಅನಿರುದ್ಧರನ್ನು ಮುಂದಿಟ್ಟುಕೊಂಡು ದ್ವಾರಕೆಗೆ ಪ್ರಯಾಣ ಮಾಡಿದನು. ॥ ೫೧ ॥ ಇತ್ತ ದ್ವಾರಕೆಯಲ್ಲಿ ಭಗವಾನ್ ಶ್ರೀಕೃಷ್ಣರೇ ಮೊದಲಾದವರ ಶುಭಾಗಮನದ ಸಮಾಚಾರವನ್ನು ಕೇಳಿ ನಗರವಾಸಿಗಳು ತಳಿರು–ತೋರಣಗಳಿಂದ ನಗರದ ಮೂಲೆ–ಮೂಲೆಗಳನ್ನು ಸಿಂಗರಿಸಿದರು. ರಾಜಬೀದಿಗಳನ್ನು ಚೌಕಗಳನ್ನೂ ಗುಡಿಸಿ–ಸಾರಿಸಿ ಸುಗಂಧಿತ ನೀರನ್ನು ಸಿಂಪಡಿಸಿದರು. ನಗರದ ನಾಗರೀಕರೂ, ಬಂಧು–ಬಾಂಧವರೂ, ಬ್ರಾಹ್ಮಣರೂ ಮುಂದೆ ಬಂದು ವೈಭವದಿಂದ ಸ್ವಾಗತಿಸಿದರು. ಆಗ ಶಂಖ, ಮೃದಂಗ, ನಗಾರಿ, ಕಹಳೆ ಮೊದಲಾದ ವಾದ್ಯಗಳು ಮೊಳಗುತ್ತಿರಲು ಶ್ರೀಕೃಷ್ಣನು ನಗರವನ್ನು ಪ್ರವೇಶಿಸಿದನು. ॥ ೫೨ ॥ ಪರೀಕ್ಷಿತನೇ ! ಶ್ರೀಕೃಷ್ಣ – ಶಂಕರರ ಈ ಯುದ್ಧ ಪ್ರಸಂಗವನ್ನು ಮತ್ತು ಶ್ರೀಕೃಷ್ಣನ ವಿಜಯದ ಕಥೆಯನ್ನು ಬೆಳಗೆದ್ದೊಡನೆ ಸ್ಮರಿಸುವ ಮನುಷ್ಯನಿಗೆ ಯಾವ ಕಾರ್ಯದಲ್ಲೂ ಪರಾಜಯವಾಗುವುದಿಲ್ಲ. ॥ ೫೩ ॥

*ಅರವತ್ತಮೂರನೆಯ ಅಧ್ಯಾಯವು ಮುಗಿಯಿತು. ॥ ೬೩ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಉತ್ತರಾರ್ಧೇ
ಅನಿರುದ್ಧಾನಯನಂ ನಾಮ ತ್ರಿಷಷ್ಟಿತಮೋಽಧ್ಯಾಯಃ ॥ ೬೩ ॥

# ಅರವತ್ತನಾಲ್ಕನೆಯ ಅಧ್ಯಾಯ

## ನೃಗರಾಜನ ಕಥೆ

*ಶ್ರೀಶುಕ ಉವಾಚ*

ಏಕದೋಪವನಂ ರಾಜನ್ ಜಗ್ಮುರ್ಯದುಕುಮಾರಕಾಃ ।
ವಿಹರ್ತುಂ ಸಾಂಬಪ್ರದ್ಯುಮ್ನಚಾರುಭಾನುಗದಾದಯಃ ॥ ೧ ॥

ಕ್ರೀಡಿತ್ವಾ ಸುಚಿರಂ ತತ್ರ ವಿಚಿನ್ವಂತಃ ಪಿಪಾಸಿತಾಃ ।
ಜಲಂ ನಿರುದಕೇ ಕೂಪೇ ದದೃಶುಃ ಸತ್ತ್ವಮದ್ಭುತಮ್ ॥ ೨ ॥

ಕೃಕಲಾಸಂ ಗಿರಿನಿಭಂ ವೀಕ್ಷ್ಯ ವಿಸ್ಮಿತಮಾನಸಾಃ ।
ತಸ್ಯ ಚೋದ್ಧರಣೇ ಯತ್ನಂ ಚಕ್ರುಸ್ತೇ ಕೃಪಯಾನ್ವಿತಾಃ ॥ ೩ ॥

ಚರ್ಮಜೈಸ್ತಾಂತವೈಃ ಪಾಶೈರ್ಬದ್ಧ್ವಾ ಪತಿತಮರ್ಭಕಾಃ ।
ನಾಶಕ್ನುವನ್ ಸಮುದ್ಧರ್ತುಂ ಕೃಷ್ಣಾಯಾಚಖ್ಯುರುತ್ಸುಕಾಃ ॥ ೪ ॥

ತತ್ರಾಗತ್ಯಾರವಿಂದಾಕ್ಷೋ ಭಗವಾನ್ ವಿಶ್ವಭಾವನಃ ।
ವೀಕ್ಷ್ಯೋಜ್ಜಹಾರ ವಾಮೇನ ತಂ ಕರೇಣ ಸ ಲೀಲಯಾ ॥ ೫ ॥

ಸ ಉತ್ತಮಶ್ಲೋಕಕರಾಭಿಮೃಷ್ಟೋ
ವಿಹಾಯ ಸದ್ಯಃ ಕೃಕಲಾಸರೂಪಮ್ ।
ಸಂತಪ್ತಚಾಮೀಕರಚಾರುವರ್ಣಃ
ಸ್ವರ್ಗ್ಯದ್ಭುತಾಲಂಕರಣಾಂಬರಸ್ರಕ್ ॥ ೬ ॥

ಪಪ್ರಚ್ಛ ವಿದ್ವಾನಪಿ ತನ್ನಿದಾನಂ
ಜನೇಷು ವಿಖ್ಯಾಪಯಿತುಂ ಮುಕುಂದಃ ।
ಕಸ್ತ್ವಂ ಮಹಾಭಾಗ ವರೇಣ್ಯರೂಪೋ
ದೇವೋತ್ತಮಂ ತ್ವಾಂ ಗಣಯಾಮಿ ನೂನಮ್ ॥ ೭ ॥

ದಶಾಮಿಮಾಂ ವಾ ಕತಮೇನ ಕರ್ಮಣಾ
ಸಂಪ್ರಾಪಿತೋಽಸ್ಯತದರ್ಹಃ ಸುಭದ್ರ ।
ಆತ್ಮಾನಮಾಖ್ಯಾಹಿ ವಿವಿತ್ಸತಾಂ ನೋ
ಯನ್ಮನ್ಯಸೇ ನಃ ಕ್ಷಮಮತ್ರ ವಕ್ತುಮ್ ॥ ೮ ॥

*ಶ್ರೀಶುಕ ಉವಾಚ*

ಇತಿ ಸ್ಮ ರಾಜಾ ಸಂಪೃಷ್ಟಃ ಕೃಷ್ಣೇನಾನಂತಮೂರ್ತಿನಾ ।
ಮಾಧವಂ ಪ್ರಣಿಪತ್ಯಾಹ ಕಿರೀಟೇನಾರ್ಕವರ್ಚಸಾ ॥ ೯ ॥

ಶ್ರೀಶುಕಮುನಿಗಳು ಹೇಳುತ್ತಾರೆ - ಪರೀಕ್ಷಿತ ಮಹಾರಾಜ! ಒಂದು ದಿನ ಸಾಂಬ, ಪ್ರದ್ಯುಮ್ನ, ಚಾರುಭಾನು ಮತ್ತು ಗದ ಮೊದಲಾದ ಯದುವಂಶೀಯ ರಾಜಕುಮಾರರು ವಿಹಾರಾರ್ಥವಾಗಿ ಉಪವನಕ್ಕೆ ಹೋದರು. ॥ ೧ ॥ ಅವರು ಅಲ್ಲಿ ಬಹಳ ಹೊತ್ತಿನವರೆಗೆ ಆಟವಾಡುತ್ತಾ ಬಳಲಿ, ಬಾಯಾರಿಕೆ ಉಂಟಾಗಿ, ನೀರನ್ನು ಹುಡುಕಿಕೊಂಡು ಹೊರಟರು. ಅವರು ಒಂದು ಬಾವಿಯ ಬಳಿಗೆ ಹೋಗಿ ನೋಡಿದಾಗ ಅದರಲ್ಲಿ ನೀರಿರಲಿಲ್ಲ, ಒಂದು ದೊಡ್ಡದಾದ ವಿಚಿತ್ರವಾದ ಜೀವವು ಕಂಡುಬಂತು. ॥ ೨ ॥ ಆ ಜೀವಿಯು ಪರ್ವತಾಕಾರದ ಒಂದು ಓತಿಕೇತವಾಗಿತ್ತು. ಅದನ್ನು ನೋಡಿ ಆಶ್ಚರ್ಯಚಕಿತರಾಗಿ ಮರುಕಗೊಂಡು ಅವರು ಆ ಪ್ರಾಣಿಯನ್ನು ಮೇಲಕ್ಕೆತ್ತಲು ಪ್ರಯತ್ನಿಸಿದರು. ॥ ೩ ॥ ರಾಜಕುಮಾರರು ತೊಗಲು ಮಿಣಿಗಳಿಂದ, ನೂಲು ಹಗ್ಗಗಳಿಂದ ಆ ಪ್ರಾಣಿಯನ್ನು ಕಟ್ಟಿ ಮೇಲಕ್ಕೆ ಎತ್ತಲಾರದೆ ಹೋದರು. ಆಗ ಕುತೂಹಲದಿಂದ ಅವರು ಈ ಆಶ್ಚರ್ಯಕರ ಸಂಗತಿಯನ್ನು ಶ್ರೀಕೃಷ್ಣನ ಬಳಿಗೆ ಬಂದು ನಿವೇದಿಸಿಕೊಂಡರು. ॥ ೪ ॥ ವಿಶ್ವಭಾವನನಾದ, ಕಮಲಾಕ್ಷನಾದ ಶ್ರೀಕೃಷ್ಣನು ಬಾವಿಯ ಬಳಿಗೆ ಬಂದು ಆ ಮಹಾಪ್ರಾಣಿಯನ್ನು ಎಡಗೈಯಿಂದ ಲೀಲಾಜಾಲವಾಗಿ ಮೇಲಕ್ಕೆತ್ತಿದನು. ॥ ೫ ॥ ಭಗವಾನ್ ಶ್ರೀಕೃಷ್ಣನ ಕರಕಮಲಗಳ ಸ್ಪರ್ಶವಾಗುತ್ತಲೇ ಅದರ ಓತಿಕ್ಯಾತದ ರೂಪವು ಹೊರಟುಹೋಗಿ ಒಬ್ಬ ಸ್ವರ್ಗೀಯ ದೇವತೆಯಂತೆ ರೂಪವಂತನಾದನು. ಅವನ ಶರೀರದ ಬಣ್ಣವು ಕಾದ ಚಿನ್ನದಂತೆ ಹೊಳೆಯುತ್ತಿತ್ತು. ಶರೀರದ ಮೇಲೆ ಅದ್ಭುತವಾದ ವಸ್ತ್ರಗಳು, ಆಭೂಷಣಗಳು ಮತ್ತು ಪುಷ್ಪಹಾರಗಳು ಶೋಭಿಸುತ್ತಿದ್ದವು. ॥ ೬ ॥ ಅಂತಹ ದಿವ್ಯಪುರುಷನಿಗೆ ಓತಿಕ್ಯಾತ ಜನ್ಮವು ಏಕೆ ಬಂತು ಎಂಬುದು ಭಗವಾನ್ ಶ್ರೀಕೃಷ್ಣನಿಗೆ ತಿಳಿದಿತ್ತಾದರೂ ಸಮಸ್ತರಿಗೂ ಈ ವಿಷಯವು ತಿಳಿಯಲೆಂಬ ಆಶಯದಿಂದ ಶ್ರೀಕೃಷ್ಣನು ಆ ದಿವ್ಯ ಪುರುಷನನ್ನು ಪ್ರಶ್ನಿಸಿದನು - ಮಹಾಭಾಗನೇ! ನೀನು ಯಾರು? ನಿನ್ನ ರೂಪವಾದರೋ ಬಹಳ ಸುಂದರವಾಗಿದೆ. ನೀನು ಶ್ರೇಷ್ಠದೇವತೆಯಾಗಿರಬಹುದೆಂದು ನಾನು ಭಾವಿಸುತ್ತೇನೆ. ॥ ೭ ॥ ಕಲ್ಯಾಣಮೂರ್ತಿಯೇ! ನೀನು ಯಾವ ಕರ್ಮವಿಪಾಕದಿಂದ ಇಂತಹ ಜನ್ಮವನ್ನು ಹೊಂದಿದೆ? ವಾಸ್ತವವಾಗಿ ನೀನು ಇಂತಹ ಯೋನಿಯಲ್ಲಿ ಹುಟ್ಟಬಾರದಿತ್ತು. ನಿನ್ನ ಜನ್ಮ ವೃತ್ತಾಂತವನ್ನು ತಿಳಿಸಲು ನಿನಗೆ ಉಚಿತವೆನಿಸಿದರೆ ನಮಗೆ ಅದನ್ನು ತಿಳಿಸು. ನಾವು ಅದನ್ನು ಕೇಳ ಬಯಸುತ್ತೇವೆ. ॥ ೮ ॥

ಶ್ರೀಶುಕಮಹಾಮುನಿಗಳು ಹೇಳುತ್ತಾರೆ - ಪರೀಕ್ಷಿತನೇ! ಅನಂತಮೂರ್ತಿ ಭಗವಾನ್ ಶ್ರೀಕೃಷ್ಣನು ನೃಗನಲ್ಲಿ (ಏಕೆಂದರೆ ಅವನು ಅದೇ ರೂಪದಲ್ಲಿ ಪ್ರಕಟನಾಗಿದ್ದನು) ಹೀಗೆ ಪ್ರಶ್ನಿಸಿದಾಗ ಸೂರ್ಯತೇಜಸ್ಸಿನಂತೆ ಜಗ-ಜಗಿಸುತ್ತಿರುವ ಕಿರೀಟದೊಡನೆ ಶ್ರೀಕೃಷ್ಣನಿಗೆ ನಮಸ್ಕರಿಸಿ ದೇವಸದೃಶನಾದ ಅವನು ಇಂತೆಂದನು. ॥ ೯ ॥

*ನೃಗ ಉವಾಚ*

ನೃಗೋ ನಾಮ ನರೇಂದ್ರೋಽಹಮಿಕ್ಷ್ವಾಕುತನಯಃ ಪ್ರಭೋ ।
ದಾನಿಷ್ವಾಖ್ಯಾಯಮಾನೇಷು ಯದಿ ತೇ ಕರ್ಣಮಸ್ಪೃಶಮ್ ॥ ೧೦ ॥

ಕಿಂ ನು ತೇಽವಿದಿತಂ ನಾಥ ಸರ್ವಭೂತಾತ್ಮಸಾಕ್ಷಿಣಃ ।
ಕಾಲೇನಾವ್ಯಾಹತದೃಶೋ ವಕ್ಷ್ಯೇಽಥಾಪಿ ತವಾಜ್ಞಯಾ ॥ ೧೧ ॥

ಯಾವತ್ಯಃ ಸಿಕತಾ ಭೂಮೇರ್ಯಾವತ್ಯೋ ದಿವಿ ತಾರಕಾಃ ।
ಯಾವತ್ಯೋ ವರ್ಷಧಾರಾಶ್ಚ ತಾವತೀರದದಾಂ ಸ್ಮ ಗಾಃ ॥ ೧೨ ॥

ಪಯಸ್ವಿನೀಸ್ತರುಣೀಃ ಶೀಲರೂಪ-
ಗುಣೋಪಪನ್ನಾಃ ಕಪಿಲಾ ಹೇಮಶೃಂಗೀಃ ।
ನ್ಯಾಯಾರ್ಜಿತಾ ರೂಪ್ಯಖುರಾಃ ಸವತ್ಸಾ
ದುಕೂಲಮಾಲಾಭರಣಾ ದದಾವಹಮ್ ॥ ೧೩ ॥

ಸ್ವಲಂಕೃತೇಭ್ಯೋ ಗುಣಶೀಲವದ್ಭ್ಯಃ
ಸೀದತ್ಕುಟುಂಬೇಭ್ಯ ಋತವ್ರತೇಭ್ಯಃ ।
ತಪಃಶ್ರುತಬ್ರಹ್ಮವದಾನ್ಯಸದ್ಭ್ಯಃ
ಪ್ರಾದಾಂ ಯುವಭ್ಯೋ ದ್ವಿಜಪುಂಗವೇಭ್ಯಃ ॥ ೧೪ ॥

ಗೋಭೂಹಿರಣ್ಯಾಯತನಾಶ್ವಹಸ್ತಿನಃ
ಕನ್ಯಾಃ ಸದಾಸೀಸ್ತಿಲರೂಪ್ಯಶಯ್ಯಾಃ ।
ವಾಸಾಂಸಿ ರತ್ನಾನಿ ಪರಿಚ್ಛದಾನ್ರಥಾ-
ನಿಷ್ಟಂ ಚ ಯಜ್ಞೈಶ್ಚರಿತಂ ಚ ಪೂರ್ತಮ್ ॥ ೧೫ ॥

ಕಸ್ಯಚಿದ್ದ್ವಿಜಮುಖ್ಯಸ್ಯ ಭ್ರಷ್ಟಾ ಗೌರ್ಮಮ ಗೋಧನೇ ।
ಸಂಪೃಕ್ತಾಽವಿದುಷಾ ಸಾ ಚ ಮಯಾ ದತ್ತಾ ದ್ವಿಜಾತಯೇ ॥ ೧೬ ॥

ತಾಂ ನೀಯಮಾನಾಂ ತತ್ಸ್ವಾಮೀ
ದೃಷ್ಟ್ವೋವಾಚ ಮಮೇತಿ ತಮ್ ।
ಮಮೇತಿ ಪ್ರತಿಗ್ರಾಹ್ಯಾಹ
ನೃಗೋ ಮೇ ದತ್ತವಾನಿತಿ ॥ ೧೭ ॥

ವಿಪ್ರೌ ವಿವದಮಾನೌ ಮಾಮೂಚತುಃ ಸ್ವಾರ್ಥಸಾಧಕೌ ।
ಭವಾನ್ ದಾತಾಪಹರ್ತೇತಿ ತಚ್ಛ್ರುತ್ವಾ ಮೇಽಭವದ್ಭ್ರಮಃ ॥ ೧೮ ॥

**ನೃಗರಾಜನು ಹೇಳಿದನು** – ಪ್ರಭೋ ! ನಾನು ಇಕ್ಷ್ವಾಕು ಮಹಾರಾಜನ ಪುತ್ರನಾದ ನೃಗನಾಗಿರುವೆನು. ವಿಶ್ವವಿಖ್ಯಾತರಾದ ದಾನಿಗಳ ಹೆಸರುಗಳನ್ನು ಹೇಳುವಾಗ ನನ್ನ ಹೆಸರನ್ನು ನೀನು ಕೇಳಿರಬಹುದು. ॥ ೧೦ ॥ ಪ್ರಭೋ ! ಸಮಸ್ತ ಪ್ರಾಣಿಗಳಿಗೂ ಆತ್ಮಸಾಕ್ಷಿಯಾಗಿರುವ ನಿನಗೆ ತಿಳಿಯದಿರುವ ವಿಷಯವು ಯಾವುದು ತಾನೇ ಇರುವುದು ? ನಿನ್ನ ಜ್ಞಾನಕ್ಕೆ ಕಾಲದ ತಡೆಯಿಲ್ಲ, ಆದರೂ ನಿನ್ನ ಆಜ್ಞಾನುಸಾರವಾಗಿ ನನ್ನ ವೃತ್ತಾಂತವನ್ನು ಹೇಳುತ್ತೇನೆ. ॥ ೧೧ ॥ ಭಗವಂತಾ ! ಪೃಥಿವಿಯಲ್ಲಿ ಇರುವ ಧೂಳಿನ ಕಣಗಳಷ್ಟು, ಆಕಾಶದಲ್ಲಿರುವ ತಾರೆಗಳಷ್ಟು, ಮಳೆಯಲ್ಲಿ ಬೀಳುವ ನೀರಧಾರೆಗಳಷ್ಟು ಸಂಖ್ಯೆಯ ಗೋವುಗಳನ್ನು ನಾನು ದಾನಮಾಡಿದ್ದೆನು. ॥ ೧೨ ॥ ಅವೆಲ್ಲ ಗೋವುಗಳೂ ಹಾಲು ಕರೆಯುತ್ತಿದ್ದು, ಎಳೆಪ್ರಾಯದ, ಶೀಲ, ರೂಪ ಗುಣಗಳಿಂದ ಸಂಪನ್ನವಾದ ಕಪಿಲಾ ಗೋವುಗಳಾಗಿದ್ದವು. ಅವೆಲ್ಲವನ್ನು ನಾನು ನ್ಯಾಯದಿಂದಲೇ ಸಂಪಾದಿಸಿದ್ದೆನು. ಎಲ್ಲವೂ ಕರುಗಳಿಂದ ಕೂಡಿದ್ದವು. ಅವುಗಳ ಕೊಂಬುಗಳಿಗೆ ಚಿನ್ನದ ಕಲಶಗಳಿದ್ದು, ಗೊರಸುಗಳಿಗೆ ಬೆಳ್ಳಿಯ ಕವಚಗಳಿರುತ್ತಿದ್ದವು. ಅವನ್ನು ವಸ್ತ್ರಾಭರಣಗಳಿಂದಲೂ, ಹೂವಿನ ಹಾರಗಳಿಂದಲೂ ಅಲಂಕರಿಸಲಾಗಿತ್ತು. ಅಂತಹ ಗೋವುಗಳನ್ನು ನಾನು ದಾನಮಾಡಿದ್ದೆನು. ॥ ೧೩ ॥ ಭಗವಂತಾ ! ಯುವಕರಾದ, ಸದ್ಗುಣಿಗಳಾದ, ಶೀಲಸಂಪನ್ನರಾದ, ಸಂಸಾರವನ್ನು ನಿರ್ವಹಿಸಲಾರದೆ ಕಷ್ಟಪಡುತ್ತಿದ್ದ, ಅದಾಂಭಿಕರಾದ, ತಪಸ್ವಿಗಳಾದ, ವೇದಾಧ್ಯಯನಶೀಲರಾದ, ಶಿಷ್ಯರಿಗೆ ವಿದ್ಯಾದಾನವನ್ನು ಮಾಡುತ್ತಿದ್ದ ಸತ್ಪುರುಷರಿಗೆ ಅವರನ್ನು ವಸ್ತ್ರಾಭರಣ ಮಾಲೆಗಳಿಂದ ಅಲಂಕರಿಸಿ ದಾನಮಾಡುತ್ತಿದ್ದೆನು. ॥ ೧೪ ॥ ಗೋದಾನ ಮಾತ್ರವಲ್ಲದೆ ಭೂಮಿ, ಚಿನ್ನ, ಮನೆ, ಕುದುರೆ, ಆನೆ, ಕನ್ಯೆ, ಎಳ್ಳು, ಬೆಳ್ಳಿ, ಹಾಸಿಗೆ, ವಸ್ತ್ರ ರತ್ನಗಳಿಂದ ಸಮಲಂಕೃತವಾದ ರಥ – ಇವೇ ಮೊದಲಾದುವನ್ನು ಆಯಾಯ ಕಾಲಗಳಲ್ಲಿ ದಾನಮಾಡುತ್ತಿದ್ದೆನು. ಯಜ್ಞಯಾಗಾದಿಗಳನ್ನು, ಇಷ್ಟಾಪೂರ್ತ ಕರ್ಮಗಳನ್ನು ಮಾಡುತ್ತಿದ್ದೆನು. ॥ ೧೫ ॥

ಒಂದು ದಿನ ಯಾರೋ ಬ್ರಾಹ್ಮಣ ಶ್ರೇಷ್ಠನೊಬ್ಬನ ಒಂದು ಹಸುವು ತಪ್ಪಿಸಿಕೊಂಡು ನನ್ನ ಹಸುಗಳಲ್ಲಿ ಬಂದು ಸೇರಿಕೊಂಡಿತು. ಇದನ್ನು ತಿಳಿಯದ ನಾನು ಆ ಗೋವನ್ನು ಮತ್ತೊಬ್ಬ ಬ್ರಾಹ್ಮಣನಿಗೆ ದಾನಮಾಡಿಬಿಟ್ಟೆ. ॥ ೧೬ ॥ ನನ್ನಿಂದ ದಾನ ಪಡೆದ ಆ ಬ್ರಾಹ್ಮಣನು ಹಸುವನ್ನು ಹೊಡೆದುಕೊಂಡು ಹೋಗುತ್ತಿದ್ದಾಗ, ಆ ಗೋವಿನ ಹಿಂದಿನ ಒಡೆಯನು 'ಇದು ನನ್ನ ಹಸು' ಎಂದು ಹೇಳಿದನು. ದಾನಪಡೆದವನು – ಇದು ನನ್ನದೇ ಹಸು ಆಗಿದೆ. ಏಕೆಂದರೆ, ನೃಗರಾಜನು ನನಗೆ ಇದನ್ನು ದಾನಮಾಡಿರುವನು. ॥ ೧೭ ॥ ಅವರು ಇಬ್ಬರೂ ಬ್ರಾಹ್ಮಣರು ಪರಸ್ಪರ ಜಗಳಾಡುತ್ತಾ ತಮ್ಮ-ತಮ್ಮ ವಾದವನ್ನು ಸಮರ್ಥಿಸಿಕೊಳ್ಳುತ್ತಾ ನನ್ನ ಬಳಿಗೆ ಬಂದರು. ನನ್ನಿಂದ ದಾನ ಪಡೆದ ಬ್ರಾಹ್ಮಣನು ತನ್ನ ವಾದವನ್ನು ಮುಂದಿಡುತ್ತಾ – ಈ ಹಸುವನ್ನು ಈಗಾಗಲೇ ನೀನು ದಾನ ಮಾಡಿರುವೆ. ಇದು ನನಗೆ ಸೇರಿದ್ದಾಗಿದೆ. ಇನ್ನೊಬ್ಬನು ಹೇಳಿದನು. – ಬ್ರಾಹ್ಮಣನು ಹೇಳುತ್ತಿರುವುದು ನಿಶ್ಚಯವಾದರೆ ನೀನು ನನ್ನ ಹಸುವನ್ನು ಕದ್ದಿರುವೆ. ಭಗವಂತಾ ! ಆ ಬ್ರಾಹ್ಮಣರಿಬ್ಬರ ಮಾತು ಕೇಳಿ ನನ್ನ ಚಿತ್ತವು ಭ್ರಮಿಸಿಹೋಯಿತು. ॥ ೧೮ ॥

ಅನುನೀತಾವುಭೌ ವಿಪ್ರೌ ಧರ್ಮಕೃಚ್ಛ್ರಗತೇನ ವೈ ।
ಗವಾಂ ಲಕ್ಷಂ ಪ್ರಕೃಷ್ಟಾನಾಂ ದಾಸ್ಯಾಮ್ಯೇಷಾ ಪ್ರದೀಯತಾಮ್
॥ ೧೯ ॥

ಭವಂತಾವನುಗೃಹ್ಣೀತಾಂ ಕಿಂಕರಸ್ಯಾವಿಜಾನತಃ ।
ಸಮುದ್ಧರತ ಮಾಂ ಕೃಚ್ಛ್ರಾತ್ಪತಂತಂ ನಿರಯೇಽಶುಚೌ
॥ ೨೦ ॥

ನಾಹಂ ಪ್ರತೀಚ್ಛೇ ವೈ ರಾಜನ್ನಿತ್ಯುಕ್ತ್ವಾ ಸ್ವಾಮ್ಯಪಾಕ್ರಮತ್ ।
ನಾನ್ಯದ್ಗವಾಮಪ್ಯಯುತಮಿಚ್ಛಾಮೀತ್ಯಪರೋ ಯಯೌ
॥ ೨೧ ॥

ಏತಸ್ಮಿನ್ನಂತರೇ ಯಾಮ್ಯೈರ್ದೂತೈರ್ನೀತೋ ಯಮಕ್ಷಯಮ್ ।
ಯಮೇನ ಪೃಷ್ಟಸ್ತತ್ರಾಹಂ ದೇವದೇವ ಜಗತ್ಪತೇ
॥ ೨೨ ॥

ಪೂರ್ವಂ ತ್ವಮಶುಭಂ ಭುಂಕ್ಷೇ ಉತಾಹೋ ನೃಪತೇ ಶುಭಮ್ ।
ನಾಂತಂ ದಾನಸ್ಯ ಧರ್ಮಸ್ಯ ಪಶ್ಯೇ ಲೋಕಸ್ಯ ಭಾಸ್ವತಃ
॥ ೨೩ ॥

ಪೂರ್ವಂ ದೇವಾಶುಭಂ ಭುಂಜ ಇತಿ ಪ್ರಾಹ ಪತೇತಿ ಸಃ ।
ತಾವದದ್ರಾಕ್ಷಮಾತ್ಮಾನಂ ಕೃಕಲಾಸಂ ಪತನ್ಪ್ರಭೋ
॥ ೨೪ ॥

ಬ್ರಹ್ಮಣ್ಯಸ್ಯ ವದಾನ್ಯಸ್ಯ ತವ ದಾಸಸ್ಯ ಕೇಶವ ।
ಸ್ಮೃತಿರ್ನಾದ್ಯಾಪಿ ವಿಧ್ವಸ್ತಾ ಭವತ್ಸಂದರ್ಶನಾರ್ಥಿನಃ
॥ ೨೫ ॥

ಸ ತ್ವಂ ಕಥಂ ಮಮ ವಿಭೋಽಕ್ಷಿಪಥಃ ಪರಾತ್ಮಾ
ಯೋಗೇಶ್ವರೈಃ ಶ್ರುತಿದೃಶಾಮಲಹೃದ್ವಿಭಾವ್ಯಃ ।
ಸಾಕ್ಷಾದಧೋಕ್ಷಜ ಉರುವ್ಯಸನಾಂಧಬುದ್ಧೇಃ
ಸ್ಯಾನ್ಮೇಽನುದೃಶ್ಯ ಇಹ ಯಸ್ಯ ಭವಾಪವರ್ಗಃ ॥ ೨೬ ॥

ದೇವದೇವ ಜಗನ್ನಾಥ ಗೋವಿಂದ ಪುರುಷೋತ್ತಮ ।
ನಾರಾಯಣ ಹೃಷೀಕೇಶ ಪುಣ್ಯಶ್ಲೋಕಾಚ್ಯುತಾವ್ಯಯ
॥ ೨೭ ॥

ಅನುಜಾನೀಹಿ ಮಾಂ ಕೃಷ್ಣ ಯಾಂತಂ ದೇವಗತಿಂ ಪ್ರಭೋ ।
ಯತ್ರ ಕ್ವಾಪಿ ಸತಶ್ಚೇತೋ ಭೂಯಾನ್ಮೇ ತ್ವತ್ಪದಾಸ್ಪದಮ್
॥ ೨೮ ॥

ನಾನು ಧರ್ಮಸಂಕಟದಲ್ಲಿ ಬಿದ್ದು ಅವರಿಬ್ಬರಲ್ಲಿ ತುಂಬಾ ಅನುನಯಗಳಿಂದ ಬೇಡಿಕೊಂಡೆನು – 'ನಾನು ಇದರ ಬದಲಿಗೆ ಒಂದು ಲಕ್ಷ ಉತ್ತಮ ಗೋವುಗಳನ್ನು ಕೊಡುತ್ತೇನೆ. ತಾವು ಆ ಹಸುವನ್ನು ನನಗೆ ಕೊಟ್ಟುಬಿಡಿರಿ. ॥ ೧೯ ॥ ನಾನು ನಿಮ್ಮ ಸೇವಕ ನಾಗಿದ್ದೇನೆ. ಅಜ್ಞಾನದಿಂದ ಈ ಅಪರಾಧವು ನನ್ನಿಂದ ನಡೆದು ಹೋಯಿತು. ನನ್ನ ಮೇಲೆ ಕೃಪೆದೋರಿ, ಈ ಘೋರ ಕಷ್ಟದಿಂದ ಮತ್ತು ನರಕದಿಂದ ನನ್ನನ್ನು ಕಾಪಾಡಿರಿ. ॥ ೨೦ ॥ ರಾಜನೇ! ನಾನು ಇದರ ಬದಲಿಗೆ ಬೇರೆ ಏನನ್ನೂ ತೆಗೆದುಕೊಳ್ಳುವುದಿಲ್ಲ ಎಂದು ಹಸುವಿನ ಒಡೆಯ ಹೊರಟುಹೋದ. ದಾನಪಡೆದ ಬ್ರಾಹ್ಮಣನೂ – 'ನೀನು ಇದರ ಬದಲಿಗೆ ಒಂದು ಲಕ್ಷವಲ್ಲ ಅದರ ಮೇಲೆ ಹತ್ತು ಸಾವಿರ ಗೋವುಗಳನ್ನು ಕೊಟ್ಟರೂ ನನಗೆ ಬೇಡ' ಎಂದು ಹೇಳಿ ಅವನೂ ಹೋಗಿಬಿಟ್ಟನು. ॥ ೨೧ ॥ ದೇವಾಧಿ ದೇವ! ಜಗದೀಶ್ವರನೇ! ಇದಾದ ಬಳಿಕ ನನ್ನ ಆಯುಸ್ಸು ಮುಗಿದಾಗ ಯಮದೂತರು ಬಂದು ನನ್ನನ್ನು ಯಮಪುರಿಗೆ ಕೊಂಡುಹೋದರು. ಅಲ್ಲಿ ಯಮನು ನನ್ನಲ್ಲಿ ಕೇಳಿದನು. ॥ ೨೨ ॥ ರಾಜನೇ! ನೀನು ಮೊದಲಿಗೆ ನಿನ್ನ ಪಾಪದ ಫಲವನ್ನು ಅನುಭವಿ ಸುವೆಯಾ? ಅಥವಾ ಪುಣ್ಯದ್ದೋ? ನೀನು ಮಾಡಿದ ದಾನ ಧರ್ಮದ ಫಲವಾಗಿ ನಿನಗೆ ಅಸೀಮವಾದ ತೇಜೋಮಯವಾದ ಲೋಕಗಳು ಪ್ರಾಪ್ತವಾಗುವವು. ॥ ೨೩ ॥ ಭಗವಂತಾ! ಅದಕ್ಕೆ ನಾನು ಮೊದಲಿಗೆ ಪಾಪದ ಫಲವನ್ನು ಅನುಭವಿಸುವೆ ಎಂದು ಯಮರಾಜನಿಗೆ ಹೇಳಿದೆನು. ಯಮರಾಜನು – ನಿನ್ನ ಪಾಪದ ಫಲವಾಗಿ 'ನೀನು ನೀಚ ಯೋನಿಯಲ್ಲಿ ಬೀಳು' ಎಂದು ಹೇಳಿ ದೊಡನೆಯೇ ನಾನು ಓತಿಕ್ಯಾತನಾಗಿ ಈ ಬಾವಿಯಲ್ಲಿ ಬಿದ್ದೆನು. ॥ ೨೪ ॥ ಪ್ರಭೋ! ನಾನು ಬ್ರಾಹ್ಮಣರ ಸೇವಕನೂ, ಉದಾರದಾನಿಯೂ, ನಿನ್ನ ಭಕ್ತನೂ ಆಗಿದ್ದೆ. ನಿನ್ನ ದರ್ಶನವಾಗ ಬೇಕೆಂಬ ಉತ್ಕಟ ಅಭಿಲಾಷೆಯಿತ್ತು. ಹೀಗೆ ನಿನ್ನ ಕೃಪೆಯಿಂದ ನನ್ನ ಹಿಂದಿನ ಜನ್ಮದ ಸ್ಮೃತಿಯು ನಾಶವಾಗಲಿಲ್ಲ. ॥ ೨೫ ॥ ಪ್ರಭುವೇ! ನೀನು ಪರಮಾತ್ಮನೇ ಆಗಿರುವೆ. ಶುದ್ಧ ಹೃದಯರಾದ ಮಹಾ ಯೋಗಿಗಳು ವೇದಾಂತಜ್ಞಾನವೆಂಬ ಕಣ್ಣಿನಿಂದ ತಮ್ಮ ಹೃದಯ ದಲ್ಲಿ ನಿನ್ನನ್ನು ಧ್ಯಾನಿಸುತ್ತಾ ಇರುತ್ತಾರೆ. ಇಂದ್ರಿಯಾತೀತನಾದ ಪರಮಾತ್ಮನೇ! ನೀನು ಸಾಕ್ಷಾತ್ತಾಗಿ ನನಗೆ ಹೇಗೆ ಕಾಣಿಸಿಕೊಂಡೆ? ನಾನಾದರೋ ಅನೇಕ ಪ್ರಕಾರದ ವ್ಯಸನಗಳಿಂದ ಕುರುಡನಾಗಿ ಬಿಟ್ಟಿದ್ದೆನು. ಸಂಸಾರಸಾಗರದಿಂದ ಬಿಡುಗಡೆಯ ಸಮಯವು ಸನ್ನಿಹಿತವಾದಾಗಲೇ ನಿನ್ನ ದರ್ಶನವಾಗುವುದು. ॥ ೨೬ ॥ ದೇವತೆ ಗಳ ಆರಾಧ್ಯನಾದ ದೇವಾ ದೇವನೇ! ಜಗನ್ನಾಥನೇ, ಗೋವಿಂದನೇ, ಪುರುಷೋತ್ತಮನೇ! ನಾರಾಯಣನೇ! ಹೃಷಿಕೇಶನೇ! ಪುಣ್ಯ ಶ್ಲೋಕನೇ! ಅಚ್ಯುತನೇ! ಅವ್ಯಯನೇ! ನೀನೇ ಸಮಸ್ತ ಇಂದ್ರಿಯ ಗಳಿಗೆ ಸ್ವಾಮಿಯಾಗಿರುವೆ. ॥ ೨೭ ॥ ಶ್ರೀಕೃಷ್ಣನೇ! ನಾನು ಈಗ ದೇವತೆಗಳ ಲೋಕಕ್ಕೆ ಹೋಗುತ್ತಿದ್ದೇನೆ. ನೀನು ಅನುಮತಿಯನ್ನು ನೀಡು. ನಾನು ಎಲ್ಲಿಯೇ ಇದ್ದರೂ, ಯಾವುದೇ ಯೋನಿಯಲ್ಲಿ ಇದ್ದರೂ ನನ್ನ ಮನಸ್ಸು ಸದಾಕಾಲವೂ ನಿನ್ನ ಚರಣಕಮಲಗಳಲ್ಲೇ ಲೀನವಾಗುವಂತೆ ಅನುಗ್ರಹಿಸು. ॥ ೨೮ ॥

ನಮಸ್ತೇ ಸರ್ವಭಾವಾಯ ಬ್ರಹ್ಮಣೇಽನಂತಶಕ್ತಯೇ ।
ಕೃಷ್ಣಾಯ ವಾಸುದೇವಾಯ ಯೋಗಾನಾಂ ಪತಯೇ ನಮಃ
॥ ೨೯ ॥

ಇತ್ಯುಕ್ತ್ವಾ ತಂ ಪರಿಕ್ರಮ್ಯ ಪಾದೌ ಸ್ಪೃಷ್ಟ್ವಾ ಸ್ವಮೌಲಿನಾ ।
ಅನುಜ್ಞಾತೋ ವಿಮಾನಾಗ್ರ್ಯಮಾರುಹತ್ ಪಶ್ಯತಾಂ ನೃಣಾಮ್
॥ ೩೦ ॥

ಕೃಷ್ಣಃ ಪರಿಜನಂ ಪ್ರಾಹ ಭಗವಾನ್ ದೇವಕೀಸುತಃ ।
ಬ್ರಹ್ಮಣ್ಯದೇವೋ ಧರ್ಮಾತ್ಮಾ ರಾಜನ್ಯಾನನುಶಿಕ್ಷಯನ್
॥ ೩೧ ॥

ದುರ್ಜರಂ ಬತ ಬ್ರಹ್ಮಸ್ವಂ ಭುಕ್ತಮಗ್ನೇರ್ಮನಾಗಪಿ ।
ತೇಜೀಯಸೋಽಪಿ ಕಿಮುತ ರಾಜ್ಞಾಮೀಶ್ವರಮಾನಿನಾಮ್
॥ ೩೨ ॥

ನಾಹಂ ಹಾಲಾಹಲಂ ಮನ್ಯೇ ವಿಷಂ ಯಸ್ಯ ಪ್ರತಿಕ್ರಿಯಾ ।
ಬ್ರಹ್ಮಸ್ವಂ ಹಿ ವಿಷಂ ಪ್ರೋಕ್ತಂ ನಾಸ್ಯ ಪ್ರತಿವಿಧಿರ್ಭುವಿ
॥ ೩೩ ॥

ಹಿನಸ್ತಿ ವಿಷಮತ್ತಾರಂ ವಹ್ನಿರದ್ಭಿಃ ಪ್ರಶಾಮ್ಯತಿ ।
ಕುಲಂ ಸಮೂಲಂ ದಹತಿ ಬ್ರಹ್ಮಸ್ವಾರಣಿಪಾವಕಃ
॥ ೩೪ ॥

ಬ್ರಹ್ಮಸ್ವಂ ದುರನುಜ್ಞಾತಂ ಭುಕ್ತಂ ಹಂತಿ ತ್ರಿಪೂರುಷಮ್ ।
ಪ್ರಸಹ್ಯತು ಬಲಾದ್ಭುಕ್ತಂ ದಶ ಪೂರ್ವಾನ್ ದಶಾಪರಾನ್
॥ ೩೫ ॥

ರಾಜಾನೋ ರಾಜಲಕ್ಷ್ಮ್ಯಾಂಧಾ ನಾತ್ಮಪಾತಂ ವಿಚಕ್ಷತೇ ।
ನಿರಯಂ ಯೇಽಭಿಮನ್ಯಂತೇ ಬ್ರಹ್ಮಸ್ವಂ ಸಾಧು ಬಾಲಿಶಾಃ
॥ ೩೬ ॥

ಗೃಹ್ಣಂತಿ ಯಾವತಃ ಪಾಂಸೂನ್ಕ್ರಂದತಾಮಶ್ರುಬಿಂದವಃ ।
ವಿಪ್ರಾಣಾಂ ಹೃತವೃತ್ತೀನಾಂ ವದಾನ್ಯಾನಾಂ ಕುಟುಂಬಿನಾಮ್
॥ ೩೭ ॥

ರಾಜಾನೋ ರಾಜಕುಲ್ಯಾಶ್ಚ ತಾವತೋಽಬ್ದಾನ್ನಿರಂಕುಶಾಃ ।
ಕುಂಭೀಪಾಕೇಷು ಪಚ್ಯಂತೇ ಬ್ರಹ್ಮದಾಯಾಪಹಾರಿಣಃ
॥ ೩೮ ॥

ಸರ್ವಸ್ವರೂಪನೇ! ಬ್ರಹ್ಮಸ್ವರೂಪನೇ! ಅನಂತವಾದ ಶಕ್ತಿಯುಳ್ಳವನೇ! ನಿನಗೆ ನಮಸ್ಕರಿಸುತ್ತೇನೆ. ಸಚ್ಚಿದಾನಂದ ಸ್ವರೂಪನಾದ ಸರ್ವಾಂತರ್ಯಾಮಿ ವಾಸುದೇವ ಶ್ರೀಕೃಷ್ಣನೇ! ಸಮಸ್ತ ಯೋಗಿಗಳಿಗೂ ಸ್ವಾಮಿಯಾದ ಯೋಗೇಶ್ವರನೇ! ನಾನು ನಿನಗೆ ಪುನಃ ಪುನಃ ನಮಸ್ಕರಿಸುತ್ತೇನೆ. ॥ ೨೯ ॥

ನೃಗರಾಜನು ಹೀಗೆ ಭಗವಂತನಿಗೆ ಪ್ರದಕ್ಷಿಣೆಮಾಡಿ ತನ್ನ ಕಿರೀಟದಿಂದ ಅವನ ಚರಣಗಳನ್ನು ಸ್ಪರ್ಶಿಸಿ ನಮಸ್ಕರಿಸಿದನು. ಮತ್ತೆ ಶ್ರೀಕೃಷ್ಣನಿಂದ ಅನುಮತಿಯನ್ನು ಪಡೆದು ಎಲ್ಲರೂ ನೋಡುತ್ತಿರುವಂತೆಯೇ ಶ್ರೇಷ್ಠವಾದ ವಿಮಾನದಲ್ಲಿ ಕುಳಿತು ದೇವಲೋಕಕ್ಕೆ ಹೊರಟು ಹೋದನು. ॥ ೩೦ ॥

ಪರೀಕ್ಷಿತನೇ! ನೃಗರಾಜನು ಹೊರಟುಹೋದ ಬಳಿಕ ಬ್ರಾಹ್ಮಣರಿಗೆ ಪರಮಪ್ರಿಯನಾದ, ಧರ್ಮಾತ್ಮನಾದ ದೇವಕಿನಂದನ ಭಗವಾನ್ ಶ್ರೀಕೃಷ್ಣನು ಕ್ಷತ್ರಿಯರಿಗೆ ಉಪದೇಶವನ್ನು ಕೊಡುವ ಸಲುವಾಗಿ ಅಲ್ಲಿ ನೆರೆದಿದ್ದ ತನ್ನ ಕುಟುಂಬ ವರ್ಗದ ಜನರಲ್ಲಿ ಹೇಳಿದನು. ॥ ೩೧ ॥ ಬಂಧುಗಳೇ! ಅಗ್ನಿಯಂತಹ ತೇಜಸ್ವಿಗಳೂ ಕೂಡ ಬ್ರಾಹ್ಮಣರ ಅತ್ಯಲ್ಪವಾದ ಧನವನ್ನೂ ಅರಗಿಸಿಕೊಳ್ಳಲಾರರು. ಹೀಗಿರುವಾಗ ತಾವೇ ಈಶ್ವರರೆಂದು ಭಾವಿಸಿಕೊಂಡಿರುವ ದುರಭಿಮಾನಿಗಳಾದ ರಾಜರೇ ಆಗಿದ್ದರೂ ಅವರ ವಿಷಯದಲ್ಲಿ ಹೇಳುವುದೇನಿದೆ? ॥ ೩೨ ॥ ನಾನು ಹಾಲಾಹಲ ವಿಷವನ್ನೂ ವಿಷವೆಂದು ಭಾವಿಸುವುದಿಲ್ಲ, ಏಕೆಂದರೆ, ಅದರ ಚಿಕಿತ್ಸೆಯೂ ಆಗುತ್ತದೆ. ವಾಸ್ತವವಾಗಿ ಬ್ರಾಹ್ಮಣರ ಧನವೇ ಪರಮ ವಿಷವಾಗಿದೆ. ಅದನ್ನು ಅರಗಿಸಿಕೊಳ್ಳುವಂತಹ ಯಾವುದೇ ಔಷಧವೂ, ಉಪಾಯೂ ಭೂಮಿಯಲ್ಲಿಲ್ಲ. ॥ ೩೩ ॥ ಹಾಲಾಹಲ ವಿಷವು ಕೇವಲ ತಿಂದವನನ್ನೇ ಕೊಲ್ಲುತ್ತದೆ ಮತ್ತು ಬೆಂಕಿಯನ್ನು ನೀರಿನಿಂದ ಆರಿಸಲಾಗುತ್ತದೆ. ಆದರೆ ಬ್ರಾಹ್ಮಣ ಧನರೂಪವಾದ ಅರಣಿಯಿಂದ ಉಂಟಾದ ಅಗ್ನಿಯು ಇಡೀ ಕುಲವನ್ನೇ ಸಮೂಲವಾಗಿ ಸುಟ್ಟುಬಿಡುತ್ತದೆ. ॥ ೩೪ ॥ ಬ್ರಾಹ್ಮಣನ ಅನುಮತಿಯನ್ನು ಪಡೆಯದೆ ಅವನ ಧನವನ್ನು ಉಪಭೋಗಿಸಿದವರು ಮಕ್ಕಳು, ಮೊಮ್ಮಕ್ಕಳು ಹೀಗೆ ಮೂರು ತಲೆಮಾರುಗಳು ವಿನಾಶಹೊಂದುವರು. ಇನ್ನು ಬಲಾತ್ಕಾರವಾಗಿ ಕಿತ್ತುಕೊಂಡು ಅದನ್ನು ಭೋಗಿಸಿದರೆ ಹಿಂದಿನ ಹತ್ತು ತಲೆಮಾರಿನವರು, ಮುಂದಿನ ಹತ್ತು ತಲೆಮಾರಿನವರು ನರಕಕ್ಕೆ ಹೋಗುತ್ತಾರೆ. ॥ ೩೫ ॥ ಮೂರ್ಖನಾದ ರಾಜನು ತನ್ನ ರಾಜ್ಯಲಕ್ಷ್ಮಿಯ ಮದದಿಂದ ಕುರುಡನಾಗಿ ಬ್ರಾಹ್ಮಣರ ಧನವನ್ನು ಕಬಳಿಸಲು ಬಯಸುವವನು ನರಕದ ದಾರಿಯನ್ನು ಕಂಡುಕೊಂಡನೆಂದೇ ತಿಳಿಯಬೇಕು. ಅವರು ಎಂತಹ ಅಧಃಪತನದ ಹೊಂಡದಲ್ಲಿ ಬೀಳಲಿದ್ದೇವೆ ಎಂಬುದನ್ನೂ ನೋಡುವುದಿಲ್ಲ. ॥ ೩೬ ॥ ಉದಾರಹೃದಯರಾದ, ಕುಟುಂಬಿಗಳಾದ ಬ್ರಾಹ್ಮಣರ ವೃತ್ತಿಯನ್ನು ಕಿತ್ತುಕೊಂಡಾಗ, ಆ ಬ್ರಾಹ್ಮಣರು ಅಳುವಾಗ ಕಣ್ಣಿನಿಂದ ಬಿದ್ದ ಕಣ್ಣೀರಿನಿಂದ ಭೂಮಿಯ ಎಷ್ಟು ಕಣಗಳು ನೆನೆಯುವುವೋ ಅಷ್ಟು ವರ್ಷಗಳಕಾಲ ಬ್ರಾಹ್ಮಣನ ಸ್ವತ್ತನ್ನು ಅಪಹರಿಸಿದ ಉಚ್ಛೃಂಖಲ ರಾಜನು ಮತ್ತು ಅವನ ವಂಶಜರು ಕುಂಭೀಪಾಕ ನರಕದಲ್ಲಿ ದುಃಖವನ್ನು ಅನುಭವಿಸಬೇಕಾಗುತ್ತದೆ. ॥ ೩೭-೩೮ ॥

ಸ್ವದತ್ತಾಂ ಪರದತ್ತಾಂ ವಾ ಬ್ರಹ್ಮವೃತ್ತಿಂ ಹರೇಚ್ಚ ಯಃ ।
ಷಷ್ಟಿವರ್ಷಸಹಸ್ರಾಣಿ ವಿಷ್ಠಾಯಾಂ ಜಾಯತೇ ಕೃಮಿಃ
॥ ೩೯ ॥

ನ ಮೇ ಬ್ರಹ್ಮಧನಂ ಭೂಯಾ-
ದ್ಯದ್ಗೃಧ್ವಾಲ್ಪಾಯುಷೋ ನೃಪಾಃ ।
ಪರಾಜಿತಾಶ್ಚ್ಯುತಾ ರಾಜ್ಯಾದ್
ಭವಂತ್ಯುದ್ವೇಜಿನೋಽಹಯಃ ॥ ೪೦ ॥

ವಿಪ್ರಂ ಕೃತಾಗಸಮಪಿ ನೈವ ದ್ರುಹ್ಯತ ಮಾಮಕಾಃ ।
ಘ್ನಂತಂ ಬಹು ಶಪಂತಂ ವಾ ನಮಸ್ಕುರುತ ನಿತ್ಯಶಃ
॥ ೪೧ ॥

ಯಥಾಹಂ ಪ್ರಣಮೇ ವಿಪ್ರಾನನುಕಾಲಂ ಸಮಾಹಿತಃ ।
ತಥಾ ನಮತ ಯೂಯಂ ಚ ಯೋಽನ್ಯಥಾ ಮೇ ಸ ದಂಡಭಾಕ್
॥ ೪೨ ॥

ಬ್ರಾಹ್ಮಣಾರ್ಥೋ ಹ್ಯಪಹೃತೋ ಹರ್ತಾರಂ ಪಾತಯತ್ಯಧಃ ।
ಅಜಾನಂತಮಪಿ ಹ್ಯೇನಂ ನೃಗಂ ಬ್ರಾಹ್ಮಣಗೌರಿವ
॥ ೪೩ ॥

ಏವಂ ವಿಶ್ರಾವ್ಯ ಭಗವಾನ್ ಮುಕುಂದೋ ದ್ವಾರಕೌಕಸಃ ।
ಪಾವನಃ ಸರ್ವಲೋಕಾನಾಂ ವಿವೇಶ ನಿಜಮಂದಿರಮ್
॥ ೪೪ ॥

ಬ್ರಾಹ್ಮಣರಿಗೆ ತಾನು ಕೊಟ್ಟದ್ದಾಗಲೀ, ಬೇರೆಯವರು ಕೊಟ್ಟದ್ದಾಗಲಿ ಜೀವನಾಧಾರವಾದ ವೃತ್ತಿಯನ್ನು (ಧನವನ್ನು) ಕಿತ್ತುಕೊಳ್ಳುವ ರಾಜನು ಅರವತ್ತು ಸಾವಿರ ವರ್ಷಗಳವರೆಗೆ ಮಲದ ಕ್ರಿಮಿಯಾಗುತ್ತಾನೆ. ॥ ೩೯ ॥ ಬ್ರಾಹ್ಮಣನ ಸ್ವತ್ತಿಗೆ ಆಸೆಪಡುವುದರಿಂದಲೇ ರಾಜನು ಅಲ್ಪಾಯುವಾಗುತ್ತಾನೆ. ಶತ್ರುಗಳಿಂದ ಪರಾಜಿತನಾಗುತ್ತಾನೆ. ರಾಜ್ಯಭ್ರಷ್ಟನಾಗುತ್ತಾನೆ. ಸತ್ತನಂತರವೂ ಬೇರೆಯವರಿಗೆ ಕಷ್ಟಕೊಡುವಂತಹ ಹಾವಾಗುತ್ತಾನೆ. ಆದುದರಿಂದ ಯಾವುದೇ ಕಾರಣದಿಂದಲೂ ನನಗೆ ಬ್ರಾಹ್ಮಣರ ಸ್ವತ್ತು ಬೇಡ. ॥ ೪೦ ॥ ಆದ್ದರಿಂದ ನನ್ನ ಆತ್ಮೀಯರೇ! ಬ್ರಾಹ್ಮಣನು ಅಪರಾಧವನ್ನು ಮಾಡಿದರೂ ಅವನನ್ನು ದ್ವೇಷಿಸಬೇಡಿರಿ. ಅವನು ಹೊಡೆದರೂ, ಬಹಳವಾಗಿ ಬೈದರೂ, ಶಪಿಸಿದರೂ ನೀವು ಅವನಿಗೆ ನಮಸ್ಕಾರವನ್ನೇ ಮಾಡುತ್ತಾ ಇರಿ. ॥ ೪೧ ॥ ನಾನು ಬಹಳ ಎಚ್ಚರಿಕೆಯಿಂದ ಮೂರು ಹೊತ್ತು ಬ್ರಾಹ್ಮಣರನ್ನು ನಮಸ್ಕರಿಸುವಂತೆಯೇ ನೀವೂ ಮಾಡುತ್ತಾ ಇರಿ. ನನ್ನ ಈ ಆಜ್ಞೆಯನ್ನು ಉಲ್ಲಂಘಿಸುವವನನ್ನು ನಾನು ಕ್ಷಮಿಸದೆ, ಶಿಕ್ಷಿಸಿಬಿಡುತ್ತೇನೆ. ॥ ೪೨ ॥ ಅಪಹರಿಸಲ್ಪಟ್ಟ ಬ್ರಾಹ್ಮಣನ ಐಶ್ವರ್ಯವು ಅಪಹಾರಿಯನ್ನು ಬ್ರಾಹ್ಮಣನ ಸ್ವತ್ತೆಂಬುದನ್ನು ತಿಳಿಯದೆ ಆವನು ಆ ಅಪರಾಧವನ್ನು ಮಾಡಿದ್ದರೂ ಬ್ರಾಹ್ಮಣನ ಹಸುವು ನೃಗಮಹಾರಾಜನನ್ನು ನರಕಕ್ಕೆ ತಳ್ಳಿದಂತೆ ಅಧಃಪತನಗೊಳಿಸುತ್ತದೆ. ॥ ೪೩ ॥ ಪರೀಕ್ಷಿತನೇ! ಸಮಸ್ತ ಲೋಕಗಳನ್ನು ಪವಿತ್ರಗೊಳಿಸುವಂತಹ ಭಗವಾನ್ ಶ್ರೀಕೃಷ್ಣನು ದ್ವಾರಕಾವಾಸಿಗಳಿಗೆ ಹೀಗೆ ಉಪದೇಶಮಾಡಿ ತನ್ನ ಅರಮನೆಗೆ ಹೊರಟುಹೋದನು. ॥ ೪೪ ॥

ಅರವತ್ತನಾಲ್ಕನೆಯ ಅಧ್ಯಾಯವು ಮುಗಿಯಿತು. ॥ ೬೪ ॥
ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಉತ್ತರಾರ್ಧೇ
ನೃಗೋಪಾಖ್ಯಾನಂ ನಾಮ ಚತುಃಷಷ್ಟಿತಮೋಽಧ್ಯಾಯಃ ॥ ೬೪ ॥

# ಅರವತ್ತೈದನೆಯ ಅಧ್ಯಾಯ

## ಬಲರಾಮನು ವ್ರಜಕ್ಕೆ ಆಗಮಿಸಿದುದು

*ಶ್ರೀಶುಕ ಉವಾಚ*

ಬಲಭದ್ರಃ ಕುರುಶ್ರೇಷ್ಠ ಭಗವಾನ್ ರಥಮಾಸ್ಥಿತಃ ।
ಸುಹೃದ್ದಿದೃಕ್ಷುರುತ್ಕಂಠಃ ಪ್ರಯಯೌ ನಂದಗೋಕುಲಮ್
॥ ೧ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಕುರುಶ್ರೇಷ್ಠನಾದ ಪರೀಕ್ಷಿತನೇ! ಭಗವಾನ್ ಬಲಭದ್ರನು ನಂದಗೋಪನೇ ಮೊದಲಾದ ಸುಹೃದರನ್ನು ನೋಡುವ ತವಕದಿಂದ ರಥದಲ್ಲಿ ಕುಳಿತು ದ್ವಾರಕೆಯಿಂದ ನಂದಗೋಕುಲಕ್ಕೆ ಪ್ರಯಾಣ ಮಾಡಿದನು. ॥ ೧ ॥ ಇತ್ತ ಬಲರಾಮ – ಶ್ರೀಕೃಷ್ಣನನ್ನು ನೋಡಬೇಕೆಂದು ವ್ರಜವಾಸಿಗಳಾದ ಗೋಪ-ಗೋಪಿಯರೂ ಬಹಳ ದಿವಸಗಳಿಂದ ಉತ್ಕಂಠಿತರಾಗಿದ್ದರು. ಅವರೆಲ್ಲರೂ ಬಲರಾಮನನ್ನು ನೋಡುತ್ತಲೇ ಆನಂದತುಂದಿಲರಾಗಿ ಬಲರಾಮನನ್ನು ಗಾಢವಾಗಿ ಆಲಿಂಗಿಸಿಕೊಂಡರು.

ಪರಿಷ್ವಕ್ತಶ್ಚಿರೋತ್ಕಂಠೈರ್ಗೋಪೈರ್ಗೋಪೀಭಿರೇವ ಚ ।
ರಾಮೋಽಭಿವಾದ್ಯ ಪಿತರಾವಾಶೀರ್ಭಿರಭಿನಂದಿತಃ
॥ ೨ ॥

ಬಲರಾಮನೂ ಕೂಡ ತಾಯಿಯಾದ ಯಶೋದೆಗೂ, ನಂದರಾಜನಿಗೂ ನಮಸ್ಕಾರಮಾಡಿದನು. ಅವರು ಆಶೀರ್ವದಿಸುತ್ತಾ ಅವನನ್ನು ಅಭಿನಂದಿಸಿದರು. ॥ ೨ ॥

ಚಿರಂ ನಃ ಪಾಹಿ ದಾಶಾರ್ಹ ಸಾನುಜೋ ಜಗದೀಶ್ವರಃ ।
ಇತ್ಯಾರೋಪ್ಯಾಂಕಮಾಲಿಂಗ್ಯ ನೇತ್ರೈಃ ಸಿಷಿಚತುರ್ಜಲೈಃ
॥ ೩ ॥

ಗೋಪವೃದ್ಧಾಂಶ್ಚ ವಿಧಿವದ್ಯವಿಷ್ಠೈರಭಿವಂದಿತಃ ।
ಯಥಾವಯೋ ಯಥಾಸಖ್ಯಂ ಯಥಾಸಂಬಂಧಮಾತ್ಮನಃ
॥ ೪ ॥

ಸಮುಪೇತ್ಯಾಥ ಗೋಪಾಲಾನ್ಹಾಸ್ಯಹಸ್ತಗ್ರಹಾದಿಭಿಃ ।
ವಿಶ್ರಾಂತಂ ಸುಖಮಾಸೀನಂ ಪಪ್ರಚ್ಛುಃ ಪರ್ಯುಪಾಗತಾಃ
॥ ೫ ॥

ಪೃಷ್ಟಾಶ್ಚಾನಾಮಯಂ ಸ್ವೇಷು ಪ್ರೇಮಗದ್ಗದಯಾ ಗಿರಾ ।
ಕೃಷ್ಣೇ ಕಮಲಪತ್ರಾಕ್ಷೇ ಸಂನ್ಯಸ್ತಾಖಿಲರಾಧಸಃ
॥ ೬ ॥

ಕಚ್ಚಿನ್ನೋ ಬಾಂಧವಾ ರಾಮ ಸರ್ವೇ ಕುಶಲಮಾಸತೇ ।
ಕಚ್ಚಿತ್ಸ್ಮರಥ ನೋ ರಾಮ ಯೂಯಂ ದಾರಸುತಾನ್ವಿತಾಃ
॥ ೭ ॥

ದಿಷ್ಟ್ಯಾ ಕಂಸೋ ಹತಃ ಪಾಪೋ ದಿಷ್ಟ್ಯಾ ಮುಕ್ತಾಃ ಸುಹೃಜ್ಜನಾಃ ।
ನಿಹತ್ಯ ನಿರ್ಜಿತ್ಯ ರಿಪೂನ್ ದಿಷ್ಟ್ಯಾ ದುರ್ಗಂ ಸಮಾಶ್ರಿತಾಃ
॥ ೮ ॥

ಗೋಪ್ಯೋ ಹಸಂತ್ಯಃ ಪಪ್ರಚ್ಛೂ ರಾಮಸಂದರ್ಶನಾದೃತಾಃ ।
ಕಚ್ಚಿದಾಸ್ತೇ ಸುಖಂ ಕೃಷ್ಣಃ ಪುರಸ್ತ್ರೀಜನವಲ್ಲಭಃ
॥ ೯ ॥

ಕಚ್ಚಿತ್ಸ್ಮರತಿ ವಾ ಬಂಧೂನ್ಪಿತರಂ ಮಾತರಂ ಚ ಸಃ ।
ಅಪ್ಯಸೌ ಮಾತರಂ ದ್ರಷ್ಟುಂ ಸಕೃದಪ್ಯಾಗಮಿಷ್ಯತಿ ।
ಅಪಿ ವಾ ಸ್ಮರತೇಽಸ್ಮಾಕಮನುಸೇವಾಂ ಮಹಾಭುಜಃ
॥ ೧೦ ॥

'ದಾಶಾರ್ಹನೇ! ನೀನು ಜಗದೀಶ್ವರನಾಗಿರುವೆ. ನಿನ್ನ ತಮ್ಮನಾದ ಶ್ರೀಕೃಷ್ಣನೊಡನೆ ಸದಾ ನೀನು ನಮ್ಮನ್ನು ರಕ್ಷಿಸುತ್ತಿರು' ಎಂದು ಹೇಳುತ್ತಾ ಅವನನ್ನು ತೊಡೆಯಲ್ಲಿ ಕುಳ್ಳಿಸಿಕೊಂಡು ಆನಂದ ಬಾಷ್ಪದಿಂದ ಅವನಿಗೆ ಅಭಿಷೇಕ ಮಾಡಿದರು. ॥ ೩ ॥ ಬಳಿಕ ಬಲರಾಮನು ಹಿರಿಯ ಗೋಪರಿಗೆ ನಮಸ್ಕರಿಸಿದನು. ಕಿರಿಯರು ಅವನಿಗೆ ನಮಸ್ಕಾರ ಮಾಡಿದರು. ಹೀಗೆ ಬಲರಾಮನು ಗೋಪಾಲಕರ ವಯಸ್ಸಿಗೆ ಅನುಸಾರವಾಗಿ, ಅವರೊಡನೆ ತನಗಿದ್ದ ಮೈತ್ರಿಗೆ ಅನುಸಾರವಾಗಿ ನೆಂಟಸ್ತಿಕೆಗೆ ತಕ್ಕಂತೆ ಎಲ್ಲರನ್ನು ಸಮಾದರಿಸಿದನು. ॥ ೪ ॥ ಬಲರಾಮನು ಗೋಪಾಲಕರ ಬಳಿಗೆ ಹೋಗಿ ಕೆಲವರನ್ನು ಕೈಕುಲುಕಿದನು. ಕೆಲವರಲ್ಲಿ ವಿನೋದದ ಮಾತುಗಳನ್ನಾಡಿದನು. ಕೆಲವರನ್ನು ನಗು-ನಗುತ್ತಾ ಅಪ್ಪಿಕೊಂಡನು. ಇದಾದ ಬಳಿಕ ಬಲರಾಮನು ಬಳಲಿಕೆಯನ್ನು ಕಳೆದುಕೊಂಡು ಸುಖಾಸನದಲ್ಲಿ ಕುಳಿತಿರುವಾಗ, ಕಮಲನಯನ ಭಗವಾನ್ ಶ್ರೀಕೃಷ್ಣನಿಗಾಗಿ ಸಮಸ್ತ ಭೋಗಗಳನ್ನೂ, ಸ್ವರ್ಗ, ಮೋಕ್ಷವನ್ನೂ ತ್ಯಜಿಸಿದ ಗೋಪಾಲಕರು ಬಲರಾಮನ ಬಳಿಗೆ ಬಂದರು. ಬಲರಾಮನು ಅವರ ಮನೆಯವರ ಕುರಿತು ಕುಶಲ ಪ್ರಶ್ನೆಗಳನ್ನು ಕೇಳಿದಾಗ ಅವರು ಪ್ರೇಮದಿಂದ ಉಕ್ಕಿಬರುತ್ತಿದ್ದ ಕಣ್ಣೀರಿನಿಂದಾಗಿ, ಗದ್ಗದವಾಗಿದ್ದ ಸ್ವರದಿಂದ ಅವನಲ್ಲಿ ಪ್ರಶ್ನಿಸಿದರು. ॥ ೫-೬ ॥ ಬಲರಾಮನೇ! ವಸುದೇವನೇ ಮೊದಲಾದ ನಮ್ಮ ಬಂಧುಗಳೆಲ್ಲರೂ ಕ್ಷೇಮವಾಗಿರುವರೇ ? ಈಗ ನೀವು ಪತ್ನೀ-ಪುತ್ರರೊಂದಿಗೆ ಆನಂದದಿಂದ ಸಂಸಾರವನ್ನು ನಿರ್ವಹಿಸುತ್ತಿರುವಿರಿ. ಎಂದಾದರೂ ನಿಮಗೆ ನಮ್ಮಗಳ ಸ್ಮರಣೆಯುಂಟಾಗುವುದೇ ? ॥ ೭ ॥ ಪಾಪಿಯಾದ ಕಂಸನನ್ನು ನೀವು ಸಂಹಾರಮಾಡಿದಿರಿ. ಇದು ದೊಡ್ಡ ಸೌಭಾಗ್ಯದ ಮಾತಾಗಿದೆ. ನಿಮ್ಮ ಸುಹೃದ್ - ಸಂಬಂಧಿಗಳನ್ನು ಕಷ್ಟ-ಕಾರ್ಪಣ್ಯಗಳಿಂದ ಕಾಪಾಡಿದಿರಿ. ನೀವು ಇನ್ನೂ ಅನೇಕ ಶತ್ರುಗಳನ್ನು ಕೊಂದು ಹಾಕಿದಿರಿ, ಗೆದ್ದುಕೊಂಡಿರಿ ಇದು ಬಹು ದೊಡ್ಡ ಆನಂದದ ವಿಷಯವೇ ಆಗಿದೆ. ಈಗ ನೀವುಗಳು ಅತ್ಯಂತ ಸುರಕ್ಷಿತವಾದ ಸಮುದ್ರ ಮಧ್ಯದ ದ್ವಾರಕೆಯಲ್ಲಿ ವಾಸಿಸುತ್ತಿರುವಿರಿ. ॥ ೮ ॥

ಪರೀಕ್ಷಿತನೇ! ಭಗವಾನ್ ಬಲರಾಮನ ದರ್ಶನದಿಂದ, ಅವನ ಪ್ರೇಮಪೂರ್ಣ ನೋಟದಿಂದ ಗೋಪಿಯರು ಮಾರುಹೋದರು. ಅವರು ನಗುತ್ತಾ ಕೇಳುತ್ತಾರೆ - ಬಲರಾಮನೇ! ನಗರದ ನಾರಿಯರಿಗೆ ಪ್ರಾಣವಲ್ಲಭನಾದ ಶ್ರೀಕೃಷ್ಣನು ಕುಶಲಿಯಾಗಿರುವನಲ್ಲ? ॥ ೯ ॥ ಎಂದಾದರೂ ಅವನಿಗೆ ತನ್ನ ಬಂಧುಗಳ, ತಂದೆ-ತಾಯಿಯರ ನೆನಪು ಬರುತ್ತದೆಯೇ ? ಅವನು ತನ್ನ ತಾಯಿಯ ದರ್ಶನಕ್ಕಾಗಿ ಒಮ್ಮೆಯಾದರೂ ಇಲ್ಲಿಗೆ ಬರಬಲ್ಲನೇ ? ಮಹಾಬಾಹುವಾದ ಶ್ರೀಕೃಷ್ಣನು ಎಂದಾದರೂ ನಾವೆಲ್ಲರೂ ಮಾಡಿದ ಸೇವೆಯನ್ನು ಸ್ಮರಿಸುತ್ತಿರುವನೇ ? ॥ ೧೦ ॥ ಬಲಭದ್ರನೇ! ಸ್ವಜನರನ್ನು ಪರಿತ್ಯಜಿಸುವುದು ಎಷ್ಟು ದುಸ್ತರವಾದುದು ಎಂಬುದು ನಿನಗೆ ತಿಳಿದೆ ಇದೆ. ಆದರೂ ನಾವು ನಮ್ಮ ಪ್ರಿಯತಮನಾದ ಶ್ರೀಕೃಷ್ಣನಿಗಾಗಿ ತಂದೆ-ತಾಯಿಯರನ್ನೂ, ಅಣ್ಣ ತಮ್ಮಂದಿರನ್ನೂ, ಪತಿ-ಪುತ್ರ ಮತ್ತು ಸಹೋದರಿಯರನ್ನು, ಪುತ್ರಿ

ಮಾತರಂ ಪಿತರಂ ಭ್ರಾತೄನ್ಪತೀನ್ ಪುತ್ರಾನ್ ಸ್ವಸ್ೠರಪಿ ।
ಯದರ್ಥೇ ಜಹಿಮ ದಾಶಾರ್ಹ ದುಸ್ತ್ಯಜಾನ್ಸ್ವಜನಾನ್ ಪ್ರಭೋ
॥ ೧೧ ॥

ತಾ ನಃ ಸದ್ಯಃ ಪರಿತ್ಯಜ್ಯ ಗತಃ ಸಂಛಿನ್ನಸೌಹೃದಃ ।
ಕಥಂ ನು ತಾದೃಶಂ ಸ್ತ್ರೀಭಿರ್ನ ಶ್ರದ್ಧೀಯೇತ ಭಾಷಿತಮ್
॥ ೧೨ ॥

ಕಥಂ ನು ಗೃಹ್ಣಂತ್ಯನವಸ್ಥಿತಾತ್ಮನೋ
ವಚಃ ಕೃತಘ್ನಸ್ಯ ಬುಧಾಃ ಪುರಸ್ತ್ರಿಯಃ ।
ಗೃಹ್ಣಂತಿ ವೈ ಚಿತ್ರಕಥಸ್ಯ ಸುಂದರ-
ಸ್ಮಿತಾವಲೋಕೋಚ್ಛ್ವಸಿತಸ್ಮರಾತುರಾಃ ॥ ೧೩ ॥

ಕಿಂ ನಸ್ತತ್ಕಥಯಾ ಗೋಪ್ಯಃ ಕಥಾಃ ಕಥಯತಾಪರಾಃ ।
ಯಾತ್ಯಸ್ಮಾಭಿರ್ವಿನಾ ಕಾಲೋ ಯದಿ ತಸ್ಯ ತಥೈವ ನಃ
॥ ೧೪ ॥

ಇತಿ ಪ್ರಹಸಿತಂ ಶೌರೇರ್ಜಲ್ಪಿತಂ ಚಾರುವೀಕ್ಷಿತಮ್ ।
ಗತಿಂ ಪ್ರೇಮಪರಿಷ್ವಂಗಂ ಸ್ಮರಂತ್ಯೋ ರುರುದುಃ ಸ್ತ್ರಿಯಃ
॥ ೧೫ ॥

ಸಂಕರ್ಷಣಸ್ತಾಃ ಕೃಷ್ಣಸ್ಯ ಸಂದೇಶೈರ್ಹೃದಯಂಗಮೈಃ ।
ಸಾಂತ್ವಯಾಮಾಸ ಭಗವಾನ್ ನಾನಾನುನಯಕೋವಿದಃ
॥ ೧೬ ॥

ದ್ವೌ ಮಾಸೌ ತತ್ರ ಚಾವಾತ್ಸೀನ್ಮಧುಂ ಮಾಧವಮೇವ ಚ ।
ರಾಮಃ ಕ್ಷಪಾಸು ಭಗವಾನ್ ಗೋಪೀನಾಂ ರತಿಮಾವಹನ್
॥ ೧೭ ॥

ಪೂರ್ಣಚಂದ್ರಕಲಾಮೃಷ್ಟೇ ಕೌಮುದೀಗಂಧವಾಯುನಾ ।
ಯಮುನೋಪವನೇ ರೇಮೇ ಸೇವಿತೇ ಸ್ತ್ರೀಗಣೈರ್ವೃತಃ
॥ ೧೮ ॥

ವರುಣಪ್ರೇಷಿತಾ ದೇವೀ ವಾರುಣೀ ವೃಕ್ಷಕೋಟರಾತ್ ।
ಪತಂತೀ ತದ್ವನಂ ಸರ್ವಂ ಸ್ವಗಂಧೇನಾಧ್ಯವಾಸಯತ್
॥ ೧೯ ॥

ಯರನ್ನು ತ್ಯಜಿಸಿ ಬಿಟ್ಟೆವು. ಆದರೆ ಪ್ರಭೋ ! ಅವನು ನಮ್ಮೆಲ್ಲರನ್ನೂ ಕ್ಷಣಮಾತ್ರದಲ್ಲಿ ಪರಿತ್ಯಜಿಸಿ, ನಮ್ಮ ಸೌಹಾರ್ದವನ್ನೂ, ಪ್ರೇಮ ಬಂಧನವನ್ನೂ ಕತ್ತರಿಸಿಹಾಕಿ ಹೊರಟೇ ಹೋದನು. ಆ ಸಮಯ ದಲ್ಲಿ ನಾವು ಬಯಸಿದ್ದರೆ ತಡೆಯುತ್ತಿದ್ದೆವು. ಆದರೆ ಅವನು 'ನಾನು ನಿಮ್ಮ ಋಣಿಯಾಗಿದ್ದೇನೆ. ನಿಮ್ಮ ಉಪಕಾರವನ್ನು ಎಂದಿಗೂ ತೀರಿಸಲಾರೆನು. ಬೇಗನೇ ನಿಮ್ಮ ಬಳಿಗೆ ಬರುವೆನು' ಎಂದು ಹೇಳಿದ ಬಿನ್ನಾಣದ ಮಾತುಗಳನ್ನು ಕೇಳಿದ ಯಾವ ಸ್ತ್ರೀಯು ತಾನೇ ವಿಶ್ವಾಸವನ್ನಿಡದೇ ಇದ್ದಾಳು ? ॥ ೧೧-೧೨ ॥ ಆಗ ಒಬ್ಬ ಗೋಪಿಯು ಹೇಳಿದಳು – ಬಲರಾಮನೇ ನಾವೇನೋ ಹಳ್ಳಿಗರು. ಏನೂ ತಿಳಿಯದವರು. ಅವನ ಮೃದು ಮಧುರವಾದ ಮಾತನ್ನು ನಂಬಿಬಿಡಬಹುದು. ಆದರೆ ಚತುರರಾದ ನಗರದ ಸ್ತ್ರೀಯರು ಚಂಚಲನೂ, ಕೃತಘ್ನನೂ ಆದ ಶ್ರೀಕೃಷ್ಣನ ಮಾತುಗಳನ್ನು ಏಕೆ ನಂಬುತ್ತಾರೆ ? ಅವರನ್ನು ಇವನು ಮೋಸಗೊಳಿಸಲಾರನು. ಮತ್ತೊಬ್ಬ ಗೋಪಿಯು ಹೇಳಿದಳು – ಸಖೀಯರೇ ! ಯಾರಾದರೇನು ? ನಮ್ಮ ಪ್ರಿಯತಮನು ಕಿರುನಗೆಯನ್ನು ಬೀರುತ್ತಾ, ಕಡೆಗಣ್ಣನೋಟದಿಂದ ನೋಡಿದಾಕ್ಷಣ ನಗರದ ಸ್ತ್ರೀಯರೂ ಕೂಡ ಪ್ರೇಮವಶರಾಗಿ ವ್ಯಾಕುಲರಾಗುವರು. ಅವರು ಖಂಡಿತವಾಗಿ ಅವನ ಮಾತನ್ನು ನಂಬಿ ತಮ್ಮನ್ನು ಅರ್ಪಿಸಿಕೊಳ್ಳುವರು. ॥ ೧೩ ॥ ಮೂರನೆಯ ಗೋಪಿಯು ಹೇಳಿದಳು – ಗೋಪಿಯರೇ ! ಅವನ ಕಥೆಯಿಂದ ನಮಗೇನು ಆಗಬೇಕಾಗಿದೇ ? ಬೇರೆ ಯಾವುದಾದರೂ ಪ್ರಸಂಗವಿದ್ದರೆ ಹೇಳಿರಿ. ನಾವಿಲ್ಲದೆ ಅವನು ಕಾಲವನ್ನು ಕಳೆಯಬಹುದಾದರೆ ಅವನಿಲ್ಲದೆ ನಾವೂ ಕಾಲವನ್ನು ಕಳೆಯೋಣ. ॥ ೧೪ ॥ ಹೀಗೆ ಹೇಳುತ್ತಿದ್ದ ಗೋಪಿಯರು ಪ್ರಿಯತಮನಾದ ಶ್ರೀಕೃಷ್ಣನ ನಗು, ಸವಿನುಡಿಗಳು, ಚೇತೋಹಾರಿಯಾದ ಸುಂದರನೋಟ, ಅಂದವಾದ ನಡಿಗೆ, ಪ್ರೇಮಾಲಿಂಗನ ಇವುಗಳನ್ನು ಸ್ಮರಿಸಿಕೊಂಡು ಬಿಕ್ಕಿ-ಬಿಕ್ಕಿ ಅತ್ತುಬಿಟ್ಟರು. ॥ ೧೫ ॥

ಪರೀಕ್ಷಿತನೇ ! ಬಗೆ-ಬಗೆಯ ಸಾಂತ್ವನದ ಮಾತುಗಳನ್ನು ಹೇಳಿ ಸಮಾಧಾನಗೊಳಿಸುವುದರಲ್ಲಿ ಚತುರನಾದ ಬಲರಾಮನು ಶ್ರೀಕೃಷ್ಣನು ಕಳುಹಿಸಿದ್ದ ಹೃದಯಂಗಮವಾದ ಸಂದೇಶಗಳಿಂದ ಆ ಗೋಪಿಕೆಯರನ್ನು ಸಮಾಧಾನಪಡಿಸಿದನು. ॥ ೧೬ ॥ ಹೀಗೆ ವಸಂತ ಋತುವಿನ ಚೈತ್ರ-ವೈಶಾಖ ಈ ತಿಂಗಳು ಪೂರ್ತಿಯಾಗಿ ಬಲರಾಮನು ರಾತ್ರಿಯಲ್ಲಿ ಗೋಪಿಯರಿಗೆ ಸಂತೋಷವನ್ನುಂಟುಮಾಡುತ್ತಾ ಗೋಕುಲದಲ್ಲಿದ್ದನು. ॥ ೧೭ ॥ ಆಗ ಕುಮುದ ಪುಷ್ಪದ ಸುಗಂಧವನ್ನು ಹೊತ್ತು ತಂಗಾಳಿಯು ಮೆಲ್ಲ-ಮೆಲ್ಲನೆ ಬೀಸುತ್ತಿರಲಾಗಿ, ಪೂರ್ಣಚಂದ್ರನ ಬೆಳದಿಂಗಳಿನಿಂದ ಜಾಜ್ವಲ್ಯಮಾನಾಗಿ ಕಾಣುತ್ತಿದ್ದ ಯಮುನಾ ತಟದ ಉಪವನದಲ್ಲಿ ಭಗವಾನ್ ಬಲರಾಮನು ಗೋಪಿಯರೊಂದಿಗೆ ವಿಹರಿಸುತ್ತಿದ್ದನು. ॥ ೧೮ ॥ ವರುಣದೇವನು ಕಳಿಸಿದ ವಾರುಣಿಯು ಒಂದು ಮರದ ಪೊಟರೆಯಿಂದ ಹರಿದುಕೊಂಡು ಬರುತ್ತಾ ಆ ಉಪವನವೆಲ್ಲವನ್ನು ಸುಗಂಧದಿಂದ ಸುವಾಸಿತಗೊಳಿಸಿದಳು. ॥ ೧೯ ॥

ತಂ ಗಂಧಂ ಮಧುಧಾರಾಯಾ ವಾಯುನೋಪಹೃತಂ ಬಲಃ ।
ಆಘ್ರಾಯೋಪಗತಸ್ತತ್ರ ಲಲನಾಭಿಃ ಸಮಂ ಪಪೌ
॥ ೨೦ ॥

ಉಪಗೀಯಮಾನಚರಿತೋ ವನಿತಾಭಿರ್ಹಲಾಯುಧಃ ।
ವನೇಷು ವ್ಯಚರತ್ ಕ್ಷೀಬೋ ಮದವಿಹ್ವಲಲೋಚನಃ
॥ ೨೧ ॥

ಸ್ರಗ್ವ್ಯೇಕಕುಂಡಲೋ ಮತ್ತೋ
ವೈಜಯಂತ್ಯಾ ಚ ಮಾಲಯಾ ।
ಬಿಭ್ರತ್ ಸ್ಮಿತಮುಖಾಂಭೋಜಂ
ಸ್ವೇದಪ್ರಾಲೇಯಭೂಷಿತಮ್ ॥ ೨೨ ॥

ಸ ಆಜುಹಾವ ಯಮುನಾಂ ಜಲಕ್ರೀಡಾರ್ಥಮೀಶ್ವರಃ ।
ನಿಜಂ ವಾಕ್ಯಮನಾದೃತ್ಯ ಮತ್ತ ಇತ್ಯಾಪಗಾಂ ಬಲಃ ।
ಅನಾಗತಾಂ ಹಲಾಗ್ರೇಣ ಕುಪಿತೋ ವಿಚಕರ್ಷ ಹ
॥ ೨೩ ॥

ಪಾಪೇ ತ್ವಂ ಮಾಮವಜ್ಞಾಯ ಯನ್ನಾಯಾಸಿ ಮಯಾಽಽಹುತಾ ।
ನೇಷ್ಯೇ ತ್ವಾಂ ಲಾಂಗಲಾಗ್ರೇಣ ಶತಧಾ ಕಾಮಚಾರಿಣೀಮ್
॥ ೨೪ ॥

ಏವಂ ನಿರ್ಭರ್ತ್ಸಿತಾ ಭೀತಾ ಯಮುನಾ ಯದುನಂದನಮ್ ।
ಉವಾಚ ಚಕಿತಾ ವಾಚಂ ಪತಿತಾ ಪಾದಯೋರ್ನೃಪ
॥ ೨೫ ॥

ಯಮುನೋವಾಚ

ರಾಮ ರಾಮ ಮಹಾಬಾಹೋ ನ ಜಾನೇ ತವ ವಿಕ್ರಮಮ್ ।
ಯಸ್ಯೈಕಾಂಶೇನ ವಿಧೃತಾ ಜಗತೀ ಜಗತಃ ಪತೇ
॥ ೨೬ ॥

ಪರಂ ಭಾವಂ ಭಗವತೋ ಭಗವನ್ ಮಾಮಜಾನತೀಮ್ ।
ಮೋಕ್ತುಮರ್ಹಸಿ ವಿಶ್ವಾತ್ಮನ್ ಪ್ರಪನ್ನಾಂ ಭಕ್ತವತ್ಸಲ
॥ ೨೭ ॥

ತತೋ ವ್ಯಮುಂಚದ್ಯಮುನಾಂ ಯಾಚಿತೋ ಭಗವಾನ್ಬಲಃ ।
ವಿಜಗಾಹ ಜಲಂ ಸ್ತ್ರೀಭಿಃ ಕರೇಣುಭಿರಿವೇಭರಾಟ್
॥ ೨೮ ॥

ಕಾಮಂ ವಿಹೃತ್ಯ ಸಲಿಲಾದುತ್ತೀರ್ಣಾಯಾಸಿತಾಂಬರೇ ।
ಭೂಷಣಾನಿ ಮಹಾರ್ಹಾಣಿ ದದೌ ಕಾಂತಿಃ ಶುಭಾಂ ಸ್ರಜಮ್
॥ ೨೯ ॥

ವಾಯುವಿನಿಂದ ತರಲ್ಪಟ್ಟ ಆ ಮಧುಧಾರೆಯ ವಾಸನೆಯನ್ನು ಬಲರಾಮನು ಆಘ್ರಾಣಿಸಿ ವಾರುಣಿಮಧುವು ಸುರಿಯುತ್ತಿದ್ದಲ್ಲಿಗೆ ಹೋಗಿ ಗೋಪಿಯರೊಂದಿಗೆ ಅದನ್ನು ಪಾನಮಾಡಿದನು. ॥ ೨೦ ॥ ಆ ಸಮಯದಲ್ಲಿ ಗೋಪಿಯರು ಬಲರಾಮನ ಸುತ್ತಲೂ ನೆರೆದು ಅವನ ಚರಿತ್ರವನ್ನು ಹಾಡುತ್ತಿದ್ದರು. ಮಧುಪಾನದಿಂದ ಅಮಲೇರಿ ಬಂದು ಬಲರಾಮನು ಆ ವನದಲ್ಲಿ ಸಂಚರಿಸುತ್ತಿದ್ದನು. ಅವನ ಕಣ್ಣುಗಳು ಆನಂದಮದದಿಂದ ವಿಹ್ವಲವಾಗಿದ್ದವು. ॥ ೨೧ ॥ ಮತ್ತನಾದ ಅವನು ಕೊರಳಲ್ಲಿ ವೈಜಯಂತಿ ಮಾಲೆಯನ್ನು ಧರಿಸಿದ್ದನು. ಅವನ ಒಂದೇ ಕಿವಿಯಲ್ಲಿ ಕುಂಡಲವಿತ್ತು. ಹಿಮದ ಹನಿಗಳಂತೆ-ಕಾಣುತ್ತಿದ್ದ ಬೆವರಿನಿಂದ ವಿಭೂಷಿತನಾಗಿ, ಮಂದ ಹಾಸದಿಂದ ಕೂಡಿದ ಮುಖಕಮಲದಿಂದ ಬಲರಾಮನು ಅತ್ಯಂತ ಶೋಭಾಯಮಾನನಾಗಿ ಕಾಣುತ್ತಿದ್ದನು. ॥ ೨೨ ॥ ಸರ್ವಶಕ್ತಿ ಸಂಪನ್ನನಾದ ಬಲರಾಮನು ಜಲಕ್ರೀಡೆಗಾಗಿ ಯಮುನೆಯನ್ನು ಆಹ್ವಾನಿಸಿದನು. ಆದರೆ ಯಮುನೆಯು ಇವನು ಮದಮತ್ತನಾಗಿರುವನೆಂದು ತಿಳಿದು ಅವನ ಆಜ್ಞೆಯನ್ನು ಉಲ್ಲಂಘಿಸಿ ಅವನ ಬಳಿಗೆ ಬರಲಿಲ್ಲ. ಆಗ ಬಲರಾಮನು ಕ್ರೋಧಗೊಂಡು ತನ್ನ ಹಲಾಯುಧದಿಂದ ಆಕೆಯನ್ನು ತನ್ನತ್ತ ಸೆಳೆದುಕೊಂಡನು. ॥ ೨೩ ॥ ಹಾಗೂ ಹೇಳಿದನು - 'ಪಾಪಿಷ್ಠಳೇ! ನಾನು ಜಲಕ್ರೀಡೆಗಾಗಿ ಕರೆದರೂ ನೀನು ನನ್ನ ಆಜ್ಞೆಯನ್ನು ತಿರಸ್ಕರಿಸಿ ನನ್ನ ಬಳಿಗೆ ಬರಲಿಲ್ಲ. ಸ್ವೇಚ್ಛಾಚಾರಿಣಿಯಾದ ನಿನ್ನನ್ನು ಈಗಲೇ ಹಲಾಯುಧದ ಅಗ್ರಭಾಗದಿಂದ ನೂರಾರು ತುಂಡುಗಳಾಗಿ ಕತ್ತರಿಸಿಬಿಡುತ್ತೇನೆ. ॥ ೨೪ ॥ ಬಲರಾಮನು ಯಮುನೆಯನ್ನು ಹೀಗೆ ಗದರಿಸಿದಾಗ ಭಯಗೊಂಡು ಆಕೆಯು ಬಲಭದ್ರನ ಕಾಲಿಗೆ ಬಿದ್ದು ದೈನ್ಯದಿಂದ ಪ್ರಾರ್ಥಿಸಿದಳು. ॥ ೨೫ ॥

**ಯಮುನೆಯು ಹೇಳಿದಳು** - ಮಹಾಬಾಹುವಾದ ಬಲರಾಮನೇ! ನಾನು ನಿನ್ನ ಪರಾಕ್ರಮವನ್ನು ಮರೆತುಹೋಗಿದ್ದೆ. ಜಗತ್ಪತಿಯೇ! ನಿನ್ನ ಒಂದಂಶನಾದ ಶೇಷನು ಇಡೀ ಜಗತ್ತನ್ನೇ ಧರಿಸಿದ್ದಾನೆ. ಹಾಗಿರುವಾಗ ಪೂರ್ಣಾಂಶನಾದ ನಿನ್ನ ಸಾಮರ್ಥ್ಯಕ್ಕೆ ಮಿತಿಯುಂಟೆ? ॥ ೨೬ ॥ ಭಗವಂತಾ! ನೀನು ಪರಮ ಐಶ್ವರ್ಯಶಾಲಿಯಾಗಿರುವೆ. ನಿನ್ನ ನಿಜವಾದ ಸ್ವರೂಪವನ್ನು ತಿಳಿಯದ ಕಾರಣದಿಂದಲೇ ನನ್ನಿಂದ ಇಂತಹ ಅಪರಾಧ ನಡೆದುಹೋಯಿತು. ಸರ್ವಸ್ವರೂಪನಾದ ಭಕ್ತವತ್ಸಲನೇ! ನಾನು ನಿನ್ನಲ್ಲಿ ಶರಣಾಗಿದ್ದೇನೆ. ನೀನು ನನ್ನ ತಪ್ಪನ್ನು ಮನ್ನಿಸಿ, ಕ್ಷಮಿಸಿ ನನ್ನನ್ನು ಬಿಟ್ಟುಬಿಡು. ॥ ೨೭ ॥

ಯಮುನೆಯ ಪ್ರಾರ್ಥನೆಯನ್ನು ಮನ್ನಿಸಿ ಭಗವಾನ್ ಬಲರಾಮನು ಆಕೆಯನ್ನು ಕ್ಷಮಿಸಿ, ಗಜರಾಜನು ಹೆಣ್ಣಾನೆಗಳೊಂದಿಗೆ ಕ್ರೀಡಿಸುವಂತೆಯೇ ಅವನು ಗೋಪಿಕೆಯರೊಂದಿಗೆ ಜಲಕ್ರೀಡೆಯಾಡಿದನು. ॥ ೨೮ ॥ ಯಥೇಚ್ಛವಾಗಿ ಜಲಕ್ರೀಡೆಯಾಡಿ ಬಲರಾಮನು ನೀರಿನಿಂದ ಹೊರಗೆ ಬಂದಾಗ, ವರುಣನಿಂದ ಕಳುಹಲ್ಪಟ್ಟ ಕಾಂತೀದೇವಿಯು ಅವನಿಗೆ ನೀಲಾಂಬರವನ್ನು, ಬಹುಮೂಲ್ಯವಾದ ಆಭರಣಗಳನ್ನು ಸುಂದರವಾದ ಚಿನ್ನದ ಹಾರವನ್ನು ಅರ್ಪಿಸಿದಳು. ॥ ೨೯ ॥

ವಸಿತ್ವಾ ವಾಸಸೀ ನೀಲೇ ಮಾಲಾಮಾಮುಚ್ಯ ಕಾಂಚನೀಮ್ ।
ರೇಜೇ ಸ್ವಲಂಕೃತೋ ಲಿಪ್ತೋ ಮಾಹೇಂದ್ರ ಇವ ವಾರಣಃ
॥ ೩೦ ॥

ಅದ್ಯಾಪಿ ದೃಶ್ಯತೇ ರಾಜನ್ ಯಮುನಾಽಽಕೃಷ್ಟವರ್ತ್ಮನಾ ।
ಬಲಸ್ಯಾನಂತವೀರ್ಯಸ್ಯ ವೀರ್ಯಂ ಸೂಚಯತೀವ ಹಿ
॥ ೩೧ ॥

ಏವಂ ಸರ್ವಾ ನಿಶಾ ಯಾತಾ ಏಕೇವ ರಮತೋ ವ್ರಜೇ ।
ರಾಮಸ್ಯಾಕ್ಷಿಪ್ತಚಿತ್ತಸ್ಯ ಮಾಧುರ್ಯೈರ್ವ್ರಜಯೋಷಿತಾಮ್
॥ ೩೨ ॥

ಬಲರಾಮನು ನೀಲಾಂಬರವನ್ನುಟ್ಟು ಬಂಗಾರದ ಮಾಲೆಯನ್ನು ತೊಟ್ಟುಕೊಂಡನು. ಅಂಗರಾಗವನ್ನು ಮೈಗೆ ಪೂಸಿಕೊಂಡು, ಸುಂದರ ಭೂಷಣಗಳಿಂದ ಅಲಂಕರಿಸಿಕೊಂಡು ಇಂದ್ರನ ಬಿಳಿಯಾದ ಐರಾವತದಂತೆ ಶೋಭಿಸಿದನು. ॥ ೩೦ ॥ ಪರೀಕ್ಷಿತನೇ! ಅನಂತವೀರ್ಯನಾದ ಬಲರಾಮನ ವೀರ್ಯ - ಪರಾಕ್ರಮವನ್ನು ಸೂಚಿಸುತ್ತಿದೆಯೋ ಎಂಬಂತೆ ಈಗಲೂ ಯಮುನಾನದಿಯು ನೇಗಿಲಿನಿಂದ ಸೆಳೆಯಲ್ಪಟ್ಟ ಮಾರ್ಗದಲ್ಲೇ ಹರಿಯುತ್ತಿದೆ. ॥ ೩೧ ॥ ವ್ರಜವಾಸಿನಿಯರಾದ ಗೋಪಿಯರ ಮಾಧುರ್ಯ, ಬೆಡಗು ಬಿನ್ನಾಣಗಳಿಂದ ಬಲರಾಮನ ಮನಸ್ಸು ಅಪಹರಿಸಲ್ಪಟ್ಟಿತ್ತು. ಹಲವಾರು ರಾತ್ರಿಗಳು ಒಂದೇ ರಾತ್ರಿಯಂತೆ ಕಳೆದುಹೋದ ಸಮಯವು ಅವರ ಅರಿವಿಗೆ ಬರಲೇ ಇಲ್ಲ. ಹೀಗೆ ಬಲರಾಮನು ವ್ರಜದಲ್ಲಿ ವಿಹರಿಸುತ್ತಿದ್ದನು. ॥ ೩೨ ॥

*ಅರವತ್ತೈದನೆಯ ಅಧ್ಯಾಯವು ಮುಗಿಯಿತು. ॥ ೬೫ ॥*

**ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಉತ್ತರಾರ್ಧೇ ಬಲದೇವವಿಜಯೇ ಯಮುನಾಕರ್ಷಣಂ ನಾಮ ಪಂಚಷಷ್ಟಿತಮೋಽಧ್ಯಾಯಃ ॥ ೬೫ ॥**

# ಅರವತ್ತಾರನೆಯ ಅಧ್ಯಾಯ

## ಪೌಂಡ್ರಕ ಮತ್ತು ಕಾಶಿರಾಜನ ಉದ್ಧಾರ

ಶ್ರೀಶುಕ ಉವಾಚ

ನಂದವ್ರಜಂ ಗತೇ ರಾಮೇ ಕರೂಷಾಧಿಪತಿರ್ನೃಪ ।
ವಾಸುದೇವೋಽಹಮಿತ್ಯಜ್ಞೋ ದೂತಂ ಕೃಷ್ಣಾಯ ಪ್ರಾಹಿಣೋತ್
॥ ೧ ॥

ತ್ವಂ ವಾಸುದೇವೋ ಭಗವಾನವತೀರ್ಣೋ ಜಗತ್ಪತಿಃ ।
ಇತಿ ಪ್ರಸ್ತೋಭಿತೋ ಬಾಲೈರ್ಮೇನ ಆತ್ಮಾನಮಚ್ಯುತಮ್
॥ ೨ ॥

ದೂತಂ ಚ ಪ್ರಾಹಿಣೋನ್ಮಂದಃ ಕೃಷ್ಣಾಯಾವ್ಯಕ್ತವರ್ತ್ಮನೇ ।
ದ್ವಾರಕಾಯಾಂ ಯಥಾ ಬಾಲೋ ನೃಪೋ ಬಾಲಕೃತೋಽಬುಧಃ
॥ ೩ ॥

ದೂತಸ್ತು ದ್ವಾರಕಾಮೇತ್ಯ ಸಭಾಯಾಮಾಸ್ಥಿತಂ ಪ್ರಭುಮ್ ।
ಕೃಷ್ಣಂ ಕಮಲಪತ್ರಾಕ್ಷಂ ರಾಜಸಂದೇಶಮಬ್ರವೀತ್
॥ ೪ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** - ಎಲೈ ಪರೀಕ್ಷಿತನೇ! ಬಲರಾಮನು ನಂದಗೋಕುಲಕ್ಕೆ ಹೋಗಿದ್ದ ಸಮಯದಲ್ಲಿ ಕರೂಷ ದೇಶದ ಮೂರ್ಖನಾದ ಪೌಂಡ್ರಕನೆಂಬ ರಾಜನು ತಾನೇ ವಾಸುದೇವನೆಂದು ಹೇಳಿಕೊಂಡು ಶ್ರೀಕೃಷ್ಣನ ಬಳಿಗೆ ದೂತನೊಬ್ಬನನ್ನು ಕಳುಹಿಸಿಕೊಟ್ಟನು. ॥ ೧ ॥ ಆ ದೇಶದ ಮೂರ್ಖಜನರು ರಾಜನನ್ನು ಸಂತೋಷಗೊಳಿಸಲು ಅವನನ್ನು ಕಂಡೊಡನೆ - 'ನೀನೇ ಭಗವಂತನಾದ ವಾಸುದೇವನಾಗಿರುವೆ. ಜಗತ್ತಿನ ರಕ್ಷಣೆಗಾಗಿ ನೀನಿಲ್ಲಿ ಅವತರಿಸಿರುವೆ' ಎಂದು ಹೊಗಳುತ್ತಿದ್ದರು. ಇದರಿಂದ ಆ ಮೂರ್ಖರಾಜನು ತಾನೇ ಭಗವಾನ್ ಅಚ್ಯುತನೆಂದು ಭಾವಿಸಿಕೊಂಡುಬಿಟ್ಟನು. ॥ ೨ ॥ ಹುಡುಗರು ಪರಸ್ಪರ ಆಟವಾಡುವಾಗ ಒಬ್ಬನನ್ನು ರಾಜನನ್ನಾಗಿಸಿಕೊಂಡು ತಾತ್ಕಾಲಿಕವಾಗಿ ಅವನನ್ನು ರಾಜನೆಂದೇ ಭಾವಿಸಿ ವ್ಯವಹರಿಸುವಂತೆ - ಪೌಂಡ್ರಕನ ಪ್ರಜೆಗಳೂ ಆಟಕ್ಕಾಗಿ ತಮ್ಮ ರಾಜನನ್ನು ವಾಸುದೇವನೆಂದೇ ಕರೆಯುತ್ತಿದ್ದರು. ಇದನ್ನು ಅರ್ಥವಿಸದೆ ಆ ಮಂದಮತಿ ಅಜ್ಞಾನಿಯಾದ ಪೌಂಡ್ರಕನು ಅಚಿಂತ್ಯಗತಿಯಾದ ಭಗವಾನ್ ಶ್ರೀಕೃಷ್ಣನ ಲೀಲಾ ರಹಸ್ಯಗಳನ್ನು ತಿಳಿಯದೆ, ಅವನ ಬಳಿಗೆ ದೂತನನ್ನು ಕಳಿಸಿಕೊಟ್ಟನು. ॥ ೩ ॥ ಪೌಂಡ್ರಕನ ದೂತನು ದ್ವಾರಕೆಗೆ ಬಂದು, ರಾಜಸಭೆಯಲ್ಲಿ ಕುಳಿತಿರುವ ಕಮಲಾಕ್ಷನಾದ ಭಗವಾನ್ ಶ್ರೀಕೃಷ್ಣನಿಗೆ ತನ್ನ ರಾಜನ ಸಂದೇಶವನ್ನು ತಿಳಿಸಿದನು. ॥ ೪ ॥

ವಾಸುದೇವೋಽವತೀರ್ಣೋಽಹಮೇಕ ಏವ ನ ಚಾಪರಃ ।
ಭೂತಾನಾಮನುಕಂಪಾರ್ಥಂ ತ್ವಂ ತು ಮಿಥ್ಯಾಭಿಧಾಂ ತ್ಯಜ ॥ ೫ ॥

ಯಾನಿ ತ್ವಮಸ್ಮಚ್ಚಿಹ್ನಾನಿ ಮೌಢ್ಯಾದ್ಬಿಭರ್ಷಿ ಸಾತ್ವತ ।
ತ್ಯಕ್ತ್ವೈಹಿ ಮಾಂ ತ್ವಂ ಶರಣಂ ನೋ ಚೇದ್ದೇಹಿ ಮಮಾಹವಮ್ ॥ ೬ ॥

*ಶ್ರೀಶುಕ ಉವಾಚ*

ಕತ್ಥನಂ ತದುಪಾಕರ್ಣ್ಯ ಪೌಂಡ್ರಕಸ್ಯಾಲ್ಪಮೇಧಸಃ ।
ಉಗ್ರಸೇನಾದಯಃ ಸಭ್ಯಾ ಉಚ್ಚಕೈರ್ಜಹಸುಸ್ತದಾ ॥ ೭ ॥

ಉವಾಚ ದೂತಂ ಭಗವಾನ್ ಪರಿಹಾಸಕಥಾಮನು ।
ಉತ್ಸ್ರಕ್ಷ್ಯೇ ಮೂಢ ಚಿಹ್ನಾನಿ ಯೈಸ್ತ್ವಮೇವಂ ವಿಕತ್ಥಸೇ ॥ ೮ ॥

ಮುಖಂ ತದಪಿಧಾಯಾಜ್ಞ ಕಂಕಗೃಧ್ರವಟೈರ್ವೃತಃ ।
ಶಯಿಷ್ಯಸೇ ಹತಸ್ತತ್ರ ಭವಿತಾ ಶರಣಂ ಶುನಾಮ್ ॥ ೯ ॥

ಇತಿ ದೂತಸ್ತದಾಕ್ಷೇಪಂ ಸ್ವಾಮಿನೇ ಸರ್ವಮಾಹರತ್ ।
ಕೃಷ್ಣೋಽಪಿ ರಥಮಾಸ್ಥಾಯ ಕಾಶೀಮುಪಜಗಾಮ ಹ ॥ ೧೦ ॥

ಪೌಂಡ್ರಕೋಽಪಿ ತದುದ್ಯೋಗಮುಪಲಭ್ಯ ಮಹಾರಥಃ ।
ಅಕ್ಷೌಹಿಣೀಭ್ಯಾಂ ಸಂಯುಕ್ತೋ ನಿಶ್ಚಕ್ರಾಮ ಪುರಾದ್ದ್ರುತಮ್ ॥ ೧೧ ॥

ತಸ್ಯ ಕಾಶಿಪತಿರ್ಮಿತ್ರಂ ಪಾರ್ಷ್ಣಿಗ್ರಾಹೋಽನ್ವಯಾನ್ನೃಪ ।
ಅಕ್ಷೌಹಿಣೀಭಿಸ್ತಿಸೃಭಿರಪಶ್ಯತ್ ಪೌಂಡ್ರಕಂ ಹರಿಃ ॥ ೧೨ ॥

ಶಂಖಾರ್ಯಸಿಗದಾಶಾರ್ಙ್ಗಶ್ರೀವತ್ಸಾದ್ಯುಪಲಕ್ಷಿತಮ್ ।
ಬಿಭ್ರಾಣಂ ಕೌಸ್ತುಭಮಣಿಂ ವನಮಾಲಾವಿಭೂಷಿತಮ್ ॥ ೧೩ ॥

ಕೌಶೇಯವಾಸಸೀ ಪೀತೇ ವಸಾನಂ ಗರುಡಧ್ವಜಮ್ ।
ಅಮೂಲ್ಯಮೌಲ್ಯಾಭರಣಂ ಸ್ಫುರನ್ಮಕರಕುಂಡಲಮ್ ॥ ೧೪ ॥

ವಾಸುದೇವನೆಂಬುವನು ನಾನೊಬ್ಬನೇ ಆಗಿದ್ದೇನೆ. ಬೇರೆ ಯಾವನೂ ಇಲ್ಲ. ಪ್ರಾಣಿಗಳ ಮೇಲೆ ಕೃಪೆದೋರಲು ನಾನೇ ಅವತರಿಸಿರುವೆನು. ನೀನು ಸುಳ್ಳು-ಸುಳ್ಳನೇ ನಿನ್ನ ಹೆಸರನ್ನು ವಾಸುದೇವನೆಂದು ಇಟ್ಟು ಕೊಂಡಿರುವೆ. ಈಗ ಅದನ್ನು ಬಿಟ್ಟುಬಿಡು. ॥ ೫ ॥

ಯದುವಂಶೀಯನೇ ! ನೀನು ಮೂರ್ಖತೆಯಿಂದ ಶಂಖ ಚಕ್ರ ಮೊದಲಾದ ನನ್ನ ಚಿಹ್ನೆಗಳನ್ನು ಧರಿಸಿಕೊಂಡಿರುವೆ. ಅವುಗಳನ್ನು ಬಿಟ್ಟು ನನಗೆ ಶರಣುಬಾ. ನನ್ನ ಮಾತು ನಿನಗೆ ಒಪ್ಪಿಗೆಯಾಗಲಿಲ್ಲವಾದರೆ ನನ್ನೊಂದಿಗೆ ಯುದ್ಧಮಾಡು. ॥ ೬ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿತನೇ ! ಮಂದಮತಿಯಾದ ಪೌಂಡ್ರಕನ ಈ ಮಾತನ್ನು ಕೇಳಿ ಉಗ್ರಸೇನರೇ ಮೊದಲಾದ ಸಭಾಸದರು ಗಹ-ಗಹಿಸಿ ನಗತೊಡಗಿದರು. ॥ ೭ ॥ ಅವರೆಲ್ಲರ ನಗುವು ನಿಂತ ಮೇಲೆ ಭಗವಾನ್ ಶ್ರೀಕೃಷ್ಣನು ದೂತನಲ್ಲಿ ಹೇಳಿದನು – ನೀನು ಹೋಗಿ ನಿಮ್ಮ ರಾಜನಲ್ಲಿ ಹೀಗೆ ಹೇಳು – 'ಎಲೈ ಮೂರ್ಖನೇ ! ನಾನು ನನ್ನ ಚಿಹ್ನೆಗಳನ್ನು ನಿನ್ನ ಮೇಲೆ ಬಿಡುತ್ತೇನೆ ಮತ್ತು ನೀನು ಯಾರ ಪ್ರೇರಣೆಯಿಂದ ಈ ಪ್ರಕಾರ ಗಳಹುತ್ತಿರುವೆಯೋ ಅವರ ಮೇಲೆಯೂ ಪ್ರಯೋಗಿಸುವೆನು. ಎಲೈ ಮೂಢನೇ! ಆ ಸಮಯದಲ್ಲಿ ನೀನು ನನ್ನಿಂದ ಹತನಾಗಿ ಮುಖವನ್ನು ಮುಚ್ಚಿಕೊಂಡು ಹದ್ದು, ರಣಹದ್ದು ಮುಂತಾದ ಮಾಂಸವನ್ನು ತಿನ್ನುವ ಪಕ್ಷಿಗಳಿಂದ ಸುತ್ತುವರಿದು ಮಲಗಿಬಿಡುವೆ. ನೀನು ನನಗೆ ರಕ್ಷಕನಾಗುವುದಿರಲಿ, ನಾಯಿಗಳಿಗಂತೂ ರಕ್ಷಕನಾಗುವುದು ನಿಜ. ನಿನ್ನ ಮಾಂಸವನ್ನು ನಾಯಿಗಳು ತಿಂದು ತೇಗುವವು'. ॥ ೮-೯ ॥ ಪರೀಕ್ಷಿತನೇ ! ಭಗವಂತನ ಇಂತಹ ತಿರಸ್ಕಾರಪೂರ್ಣ ಸಂದೇಶವನ್ನು ಹೊತ್ತುಕೊಂಡು ಪೌಂಡ್ರಕನ ದೂತನು ತನ್ನ ಒಡೆಯನ ಬಳಿಗೆ ಹೋಗಿ ನಿವೇದಿಸಿಕೊಂಡನು. ಇತ್ತ ಭಗವಾನ್ ಶ್ರೀಕೃಷ್ಣನೂ ಕೂಡ ರಥದಲ್ಲಿ ಕುಳಿತು ಕಾಶಿಪಟ್ಟಣಕ್ಕೆ ಪ್ರಯಾಣ ಮಾಡಿದನು. ಏಕೆಂದರೆ, ಆ ಸಮಯದಲ್ಲಿ ಕರೂಷದ ರಾಜನು ತನ್ನ ಮಿತ್ರನಾದ ಕಾಶಿರಾಜನ ಜೊತೆಯಲ್ಲಿದ್ದನು. ॥ ೧೦ ॥

ಭಗವಾನ್ ಶ್ರೀಕೃಷ್ಣನ ಆಕ್ರಮಣದ ಸಮಾಚಾರ ತಿಳಿದ ಮಹಾರಥಿ ಪೌಂಡ್ರಕನೂ ಕೂಡ ಎರಡು ಅಕ್ಷೌಹಿಣಿ ಸೈನ್ಯದೊಂದಿಗೆ ಶೀಘ್ರವಾಗಿ ನಗರದಿಂದ ಹೊರಬಿದ್ದನು. ॥ ೧೧ ॥ ಕಾಶಿರಾಜನು ಪೌಂಡ್ರಕನನ್ನು ಮಿತ್ರನಾಗಿದ್ದನು. ಆದ್ದರಿಂದ ಅವನೂ ಕೂಡ ಮಿತ್ರನಿಗೆ ಸಹಾಯಮಾಡಲು ಮೂರು ಅಕ್ಷೌಹಿಣಿ ಸೇನೆಯೊಡನೆ ಪೌಂಡ್ರಕನನ್ನ ಹಿಂಬಾಲಿಸುತ್ತಾ ಬಂದನು. ಪರೀಕ್ಷಿತನೇ ! ಆಗ ಶ್ರೀಕೃಷ್ಣನು ಪೌಂಡ್ರಕನನ್ನು ನೋಡಿದನು. ॥ ೧೨ ॥ ಪೌಂಡ್ರಕನೂ ಶಂಖ, ಚಕ್ರ, ಖಡ್ಗ, ಗದೆ, ಶಾರ್ಙ್ಗಧನುಸ್ಸನ್ನು, ಶ್ರೀವತ್ಸ ಚಿಹ್ನೆ ಮೊದಲಾದುವನ್ನು ಧರಿಸಿದ್ದನು. ಅವನು ವಕ್ಷಸ್ಥಳದಲ್ಲಿ ಕೃತ್ರಿಮವಾದ ಕೌಸ್ತುಭ ಮಣಿಯಿಂದಲೂ ವನಮಾಲೆಯಿಂದಲೂ ವಿಭೂಷಿತನಾಗಿದ್ದನು. ॥ ೧೩ ॥ ಅವನು ಪೀತಾಂಬರವನ್ನು ಉಟ್ಟಿದ್ದನು. ರಥದ ಧ್ವಜದಲ್ಲಿಯೂ ಗರುಡನ ಚಿಹ್ನೆಯೇ ಇತ್ತು. ಅವನ ತಲೆಯ ಮೇಲೆ ಬಹುಮೂಲ್ಯ ಕಿರೀಟವೂ, ಕಿವಿಗಳಲ್ಲಿ ಮಕರಾಕೃತಿಯ ಕುಂಡಲಗಳೂ ಹೊಳೆಯುತ್ತಿತ್ತು. ॥ ೧೪ ॥

ದೃಷ್ಟ್ವಾ ತಮಾತ್ಮನಸ್ತುಲ್ಯವೇಷಂ ಕೃತ್ರಿಮಮಾಸ್ಥಿತಮ್ ।
ಯಥಾ ನಟಂ ರಂಗಗತಂ ವಿಜಹಾಸ ಭೃಶಂ ಹರಿಃ
॥ ೧೫ ॥

ಶೂಲೈರ್ಗದಾಭಿಃ ಪರಿಘೈಃ ಶಕ್ತ್ಯೃಷ್ಟಿಪ್ರಾಸತೋಮರೈಃ ।
ಅಸಿಭಿಃ ಪಟ್ಟಿಶೈರ್ಬಾಣೈಃ ಪ್ರಾಹರನ್ನರಯೋ ಹರಿಮ್
॥ ೧೬ ॥

ಕೃಷ್ಣಸ್ತು ತತ್ಪೌಂಡ್ರಕಕಾಶಿರಾಜಯೋ-
ರ್ಬಲಂ ಗಜಸ್ಯಂದನವಾಜಿಪತ್ತಿಮತ್ ।
ಗದಾಸಿಚಕ್ರೇಷುಭಿರಾರ್ದಯದ್ ಭೃಶಂ
ಯಥಾ ಯುಗಾಂತೇ ಹುತಭುಕ್ ಪೃಥಕ್ ಪ್ರಜಾಃ ॥ ೧೭ ॥

ಆಯೋಧನಂ ತದ್ರಥವಾಜಿಕುಂಜರ-
ದ್ವಿಪತ್ಖರೋಷ್ಟ್ರೈರರಿಣಾವಖಂಡಿತೈಃ ।
ಬಭೌ ಚಿತಂ ಮೋದವಹಂ ಮನಸ್ವಿನಾ-
ಮಾಕ್ರೀಡನಂ ಭೂತಪತೇರಿವೋಲ್ಬಣಮ್ ॥ ೧೮ ॥

ಅಥಾಹ ಪೌಂಡ್ರಕಮ್ ಶೌರಿರ್ಭೋ ಭೋಃ ಪೌಂಡ್ರಕ ಯದ್ಭವಾನ್ ।
ದೂತವಾಕ್ಯೇನ ಮಾಮಾಹ ತಾನ್ಯಸ್ತ್ರಾಣ್ಯುತ್ಸೃಜಾಮಿ ತೇ
॥ ೧೯ ॥

ತ್ಯಾಜಯಿಷ್ಯೇಽಭಿಧಾನಂ ಮೇ ಯತ್ತ್ವಯಾಜ್ಞ ಮೃಷಾ ಧೃತಮ್ ।
ವ್ರಜಾಮಿ ಶರಣಂ ತೇಽದ್ಯ ಯದಿ ನೇಚ್ಛಾಮಿ ಸಂಯುಗಮ್
॥ ೨೦ ॥

ಇತಿ ಕ್ಷಿಪ್ತ್ವಾ ಶಿತೈರ್ಬಾಣೈರ್ವಿರಥೀಕೃತ್ಯ ಪೌಂಡ್ರಕಮ್ ।
ಶಿರೋಽವೃಶ್ಚದ್ರಥಾಂಗೇನ ವಜ್ರೇಣೇಂದ್ರೋ ಯಥಾ ಗಿರೇಃ
॥ ೨೧ ॥

ತಥಾ ಕಾಶಿಪತೇಃ ಕಾಯಾಚ್ಛಿರ ಉತ್ಕೃತ್ಯ ಪತ್ರಿಭಿಃ ।
ನ್ಯಪಾತಯತ್ ಕಾಶಿಪುರ್ಯಾಂ ಪದ್ಮಕೋಶಮಿವಾನಿಲಃ
॥ ೨೨ ॥

ಏವಂ ಮತ್ಸರಿಣಂ ಹತ್ವಾ ಪೌಂಡ್ರಕಂ ಸಸಖಂ ಹರಿಃ ।
ದ್ವಾರಕಾಮಾವಿಶತ್ ಸಿದ್ಧೈರ್ಗೀಯಮಾನಕಥಾಮೃತಃ
॥ ೨೩ ॥

ಸ ನಿತ್ಯಂ ಭಗವದ್ಧ್ಯಾನಪ್ರಧ್ವಸ್ತಾಖಿಲಬಂಧನಃ ।
ಬಿಭ್ರಾಣಶ್ಚ ಹರೇ ರಾಜನ್ ಸ್ವರೂಪಂ ತನ್ಮಯೋಽಭವತ್
॥ ೨೪ ॥

ಅವನ ಇದೆಲ್ಲ ವೇಷವೂ ಕೃತ್ರಿಮವಾದುದೇ ಆಗಿತ್ತು. ಯಾರೋ ನಟನು ರಂಗಸ್ಥಳದಲ್ಲಿ ಅಭಿನಯಿಸಲು ಸಿಂಗರಿಸಿ ಕೊಂಡು ಬಂದಂತ್ತಿತ್ತು. ಅವನ ವೇಷ-ಭೂಷಣಗಳನ್ನು ನೋಡಿ ಶ್ರೀಕೃಷ್ಣನು ಗಹ-ಗಹಿಸಿ ನಗತೊಡಗಿದನು. ॥ ೧೫ ॥ ಆಗ ಶತ್ರುಗಳು ಭಗವಾನ್ ಶ್ರೀಕೃಷ್ಣನ ಮೇಲೆ ತ್ರಿಶೂಲ, ಗದೆ, ಮುದ್ಗರ, ಶಕ್ತಿ , ಋಷ್ಟಿ, ಪ್ರಾಸ, ತೋಮರ, ಖಡ್ಗ, ಪಟ್ಟಿಶ, ಬಾಣ ಮುಂತಾದ ಅಸ್ತ್ರ-ಶಸ್ತ್ರಗಳಿಂದ ಪ್ರಹಾರಮಾಡಿದರು. ॥ ೧೬ ॥ ಪ್ರಳಯಕಾಲದಲ್ಲಿ ಅಗ್ನಿಯು ಎಲ್ಲ ರೀತಿಯ ಪ್ರಾಣಿಗಳನ್ನು ಸುಟ್ಟು ಹಾಕುವಂತೆಯೇ ಭಗವಾನ್ ಶ್ರೀಕೃಷ್ಣನೂ ಕೂಡ ಗದೆ, ಖಡ್ಗ ಚಕ್ರ ಮತ್ತು ಬಾಣಗಳೇ ಮೊದಲಾದ ಶಸ್ತ್ರಾಸ್ತ್ರಗಳಿಂದ ಪೌಂಡ್ರಕ ಹಾಗೂ ಕಾಶೀರಾಜನ ಆನೆ, ಕುದುರೆ, ರಥ, ಪದಾತಿಗಳಿಂದ ಕೂಡಿದ ಚತುರಂಗ ಸೈನ್ಯವನ್ನು ಕ್ಷಣಮಾತ್ರದಲ್ಲಿ ಧ್ವಂಸಮಾಡಿ ಬಿಟ್ಟನು. ॥ ೧೭ ॥ ಭಗವಂತನ ಚಕ್ರದಿಂದ ತುಂಡು-ತುಂಡಾದ ರಥ, ಆನೆ, ಕುದುರೆ, ಮನುಷ್ಯರು, ಕತ್ತೆ, ಒಂಟೇ ಮುಂತಾದವುಗಳಿಂದ ರಣರಂಗವು ತುಂಬಿಹೋಯಿತು. ಅದು ಭೂತನಾಥನಾದ ಶಿವನ ಭಯಂಕರವಾದ ಆಡುಂಬೊಲದಂತೆ ಕಂಡುಬರುತ್ತಿತ್ತು. ಅದನ್ನು ನೋಡಿದ ಶೂರರ ಉತ್ಸಾಹವು ಇನ್ನೂ ಹೆಚ್ಚುತ್ತಿತ್ತು. ॥ ೧೮ ॥

ಬಳಿಕ ಭಗವಾನ್ ಶ್ರೀಕೃಷ್ಣನು ಪೌಂಡ್ರಕನಲ್ಲಿ ಹೇಳಿದನು ಎಲವೋ ಪೌಂಡ್ರಕನೇ! ನನ್ನ ಅಸ್ತ್ರ-ಶಸ್ತ್ರಾದಿಗಳನ್ನು ಬಿಟ್ಟುಬಿಡಲು ನೀನು ದೂತನ ಮೂಲಕ ಹೇಳಿಕಳಿಸಿದ್ದೆ. ಸರಿ ಈಗ ನಾನು ಅವನ್ನು ನಿನ್ನ ಮೇಲೆ ಬಿಡುತ್ತಿದ್ದೇನೆ. ॥ ೧೯ ॥ ನೀನು ಸುಳ್ಳು-ಸುಳ್ಳೆ ನನ್ನ ಹೆಸರನ್ನು ಇಟ್ಟುಕೊಂಡಿರುವೆ. ಆದ್ದರಿಂದ ಮೂರ್ಖನೇ! ಈಗ ನಾನು ನಿನ್ನಿಂದ ಆ ಹೆಸರುಗಳನ್ನು ಬಿಡಿಸಿಬಿಡುತ್ತೇನೆ. ಇನ್ನು ಉಳಿದಿರುವುದು ಶರಣಾಗುವ ಮಾತು - ನಾನು ನಿನ್ನೊಡನೆ ಯುದ್ಧಮಾಡಲಾಗದಿದ್ದಾಗ ನಿನಗೆ ಶರಣು ಬರುವೆನು. ॥ ೨೦ ॥ ಶ್ರೀಕೃಷ್ಣನು ಹೀಗೆ ಪೌಂಡ್ರಕನನ್ನು ತಿರಸ್ಕರಿಸುತ್ತಾ ತನ್ನ ತೀಕ್ಷ್ಣವಾದ ಬಾಣಗಳಿಂದ ಅವನ ರಥವನ್ನು ಮುರಿದು ಹಾಕಿ, ಇಂದ್ರನು ವಜ್ರಾಯುಧದಿಂದ ಪರ್ವತಗಳನ್ನು ಕತ್ತರಿಸಿ ಹಾಕುವಂತೆ ಸುದರ್ಶನ ಚಕ್ರದಿಂದ ಅವನ ತಲೆಯನ್ನು ಹಾರಿಸಿಬಿಟ್ಟನು. ॥ ೨೧ ॥ ಹಾಗೆಯೇ ಭಗವಂತನು ತನ್ನ ಬಾಣಗಳಿಂದ ಕಾಶೀನರೇಶನ ತಲೆಯನ್ನು ಹಾರಿಸಿ ಗಾಳಿಯು ಕಮಲದ ಹೂವನ್ನು ಹಾರಿಸಿಕೊಂಡು ಹೋಗುವಂತೆ ಕಾಶೀನಗರದಲ್ಲಿ ಬೀಳಿಸಿದನು. ॥ ೨೨ ॥ ಈ ಪ್ರಕಾರವಾಗಿ ತನ್ನೊಡನೆ ದ್ವೇಷವನ್ನು ಸಾಧಿಸುತ್ತಿದ್ದ ಪೌಂಡ್ರಕನನ್ನು ಮತ್ತು ಅವನ ಸ್ನೇಹಿತನಾದ ಕಾಶೀರಾಜನನ್ನು ಸಂಹರಿಸಿದ ಭಗವಾನ್ ಶ್ರೀಕೃಷ್ಣನು ತನ್ನ ರಾಜಧಾನಿಯಾದ ದ್ವಾರಕೆಗೆ ಹಿಂದಿರುಗಿದನು. ಆ ಸಮಯದಲ್ಲಿ ಸಿದ್ಧರು ಭಗವಂತನ ಕಥಾಮೃತವನ್ನು ಹಾಡುತ್ತಿದ್ದರು. ॥ ೨೩ ॥ ಪರೀಕ್ಷಿತನೇ! ಪೌಂಡ್ರಕನು ಭಗವಂತನ ರೂಪವನ್ನು ಯಾವುದೇ ಭಾವದಿಂದಲೂ ಸದಾಕಾಲ ಚಿಂತಿಸುತ್ತಲೇ ಇದ್ದನು. ಇದರಿಂದ ಅವನ ಎಲ್ಲ ಬಂಧನಗಳು ಹರಿದುಹೋಯಿತು. ಅವನು ಭಗವಂತನಂತೆಯೇ ವೇಷವನ್ನು ಧರಿಸುತ್ತಿದ್ದನು. ಇದರಿಂದ ಪದೇ-ಪದೇ ಅವನ ಸ್ಮರಣೆಯಾಗುವುದರಿಂದ ಅವನು ಭಗವಂತನ ಸಾರೂಪ್ಯಮುಕ್ತಿಯನ್ನು ಹೊಂದಿದನು. ॥ ೨೪ ॥

ಶಿರಃ ಪತಿತಮಾಲೋಕ್ಯ ರಾಜದ್ವಾರೇ ಸಕುಂಡಲಮ್ ।
ಕಿಮಿದಂ ಕಸ್ಯ ವಾ ವಕ್ತ್ರಮಿತಿ ಸಂಶಿಶ್ಯಿರೇ ಜನಾಃ
॥ ೨೫ ॥

ರಾಜ್ಞಃ ಕಾಶಿಪತೇರ್ಜ್ಞಾತ್ವಾ ಮಹಿಷ್ಯಃ ಪುತ್ರಬಾಂಧವಾಃ ।
ಪೌರಾಶ್ಚ ಹಾ ಹತಾ ರಾಜನ್ ನಾಥ ನಾಥೇತಿ ಪ್ರಾರುದನ್
॥ ೨೬ ॥

ಸುದಕ್ಷಿಣಸ್ತಸ್ಯ ಸುತಃ ಕೃತ್ವಾ ಸಂಸ್ಥಾವಿಧಿಂ ಪಿತುಃ ।
ನಿಹತ್ಯ ಪಿತೃಹಂತಾರಂ ಯಾಸ್ಯಾಮ್ಯಪಚಿತಿಂ ಪಿತುಃ
॥ ೨೭ ॥

ಇತ್ಯಾತ್ಮನಾಭಿಸಂಧಾಯ ಸೋಪಾಧ್ಯಾಯೋ ಮಹೇಶ್ವರಮ್ ।
ಸುದಕ್ಷಿಣೋಽರ್ಚಯಾಮಾಸ ಪರಮೇಣ ಸಮಾಧಿನಾ
॥ ೨೮ ॥

ಪ್ರೀತೋಽವಿಮುಕ್ತೇ ಭಗವಾಂಸ್ತಸ್ಮೈ ವರಮದಾದ್ವಿಭುಃ ।
ಪಿತೃಹಂತೃವಧೋಪಾಯಂ ಸ ವವ್ರೇ ವರಮೀಪ್ಸಿತಮ್
॥ ೨೯ ॥

ದಕ್ಷಿಣಾಗ್ನಿಂ ಪರಿಚರ ಬ್ರಾಹ್ಮಣೈಃ ಸಮಮೃತ್ವಿಜಮ್ ।
ಅಭಿಚಾರವಿಧಾನೇನ ಸ ಚಾಗ್ನಿಃ ಪ್ರಮಥೈರ್ವೃತಃ
॥ ೩೦ ॥

ಸಾಧಯಿಷ್ಯತಿ ಸಂಕಲ್ಪಮಬ್ರಹ್ಮಣ್ಯೇ ಪ್ರಯೋಜಿತಃ ।
ಇತ್ಯಾದಿಷ್ಟಸ್ತಥಾ ಚಕ್ರೇ ಕೃಷ್ಣಾಯಾಭಿಚರನ್ ವ್ರತೀ
॥ ೩೧ ॥

ತತೋಽಗ್ನಿರುತ್ಥಿತಃ ಕುಂಡಾನ್ಮೂರ್ತಿಮಾನತಿಭೀಷಣಃ ।
ತಪ್ತತಾಮ್ರಶಿಖಾಶ್ಮಶ್ರುರಂಗಾರೋದ್ಗಾರಿಲೋಚನಃ
॥ ೩೨ ॥

ದಂಷ್ಟ್ರೋಗ್ರಭ್ರುಕುಟೀದಂಡಕಠೋರಾಸ್ಯಃ ಸ್ವಜಿಹ್ವಯಾ ।
ಆಲಿಹನ್ಸೃಕ್ಕಿಣೀ ನಗ್ನೋ ವಿಧುನ್ವಂಸ್ತ್ರಿಶಿಖಂ ಜ್ವಲನ್
॥ ೩೩ ॥

ಪದ್ಭ್ಯಾಂ ತಾಲಪ್ರಮಾಣಾಭ್ಯಾಂ ಕಂಪಯನ್ನವನೀತಲಮ್ ।
ಸೋಽಭ್ಯಧಾವದ್ವೃತೋ ಭೂತೈರ್ದ್ವಾರಕಾಂ ಪ್ರದಹಂದಿಶಃ
॥ ೩೪ ॥

ತಮಾಭಿಚಾರದಹನಮಾಯಾಂತಂ ದ್ವಾರಕೌಕಸಃ ।
ವಿಲೋಕ್ಯ ತತ್ರಸುಃ ಸರ್ವೇ ವನದಾಹೇ ಮೃಗಾ ಯಥಾ
॥ ೩೫ ॥

ಇತ್ತ ಕಾಶಿಯ ಅರಮನೆಯ ಮಹಾದ್ವಾರದಲ್ಲಿ ಬಿದ್ದಿದ್ದ ಕುಂಡಲ ಮಂಡಿತವಾದ ಒಂದು ಮುಂಡವನ್ನು ನೋಡಿ ಜನರು 'ಇದು ಯಾರ ತಲೆಯಾಗಿರಬಹುದು ? ಎಂದು ನಾನಾ ರೀತಿಯಿಂದ ತರ್ಕಿಸತೊಡಗಿದರು. ॥ ೨೫ ॥ ಇದಾದರೋ ಕಾಶಿ ರಾಜನ ತಲೆ ಎಂದು ತಿಳಿದಾಗ ರಾಣಿಯರು, ರಾಜಕುಮಾರರು, ರಾಜಪರಿವಾರದ ಜನರು ಹಾಗೂ ನಾಗರಿಕರು ಅಳುತ್ತಾ ಅಯ್ಯೋ ! ಸ್ವಾಮಿ ! ನಮ್ಮ ಸರ್ವನಾಶವಾಯಿತೆಂದು ಗೋಳಾಡಿದರು. ॥ ೨೬ ॥ ಕಾಶಿರಾಜನ ಮಗನಾದ ಸುದಕ್ಷಿಣನು ತನ್ನ ತಂದೆಯ ಅಂತ್ಯೇಷ್ಟಿಯನ್ನು ನೆರವೇರಿಸಿ, ನನ್ನ ತಂದೆಯನ್ನು ಕೊಂದಿರುವವನನ್ನು ಕೊಂದೇ ತಂದೆಯ ಋಣದಿಂದ ಮುಕ್ತನಾಗುವೆನು ಎಂದು ಮನಸ್ಸಿನಲ್ಲೇ ನಿಶ್ಚಯಿಸಿಕೊಂಡನು. ಅದರಂತೆ ಅವನು ತನ್ನ ಕುಲ-ಪುರೋಹಿತ ಮತ್ತು ಆಚಾರ್ಯರೊಡನೆ ಅತ್ಯಂತ ಏಕಾಗ್ರತೆಯಿಂದ ಭಗವಂತನಾದ ಶಂಕರನನ್ನು ಆರಾಧಿಸತೊಡಗಿದನು. ॥ ೨೭-೨೮ ॥ ಕಾಶೀ ನಗರದಲ್ಲಿ ಅವನ ಆರಾಧನೆಯಿಂದ ಪ್ರಸನ್ನನಾದ ಭಗವಾನ್ ಶಂಕರನು ಅವನಲ್ಲಿ ವರವನ್ನು ಬೇಡಲು ಹೇಳಿದನು. ಸುದಕ್ಷಿಣನು - 'ನನಗೆ ನನ್ನ ಪಿತೃಘಾತಿಯ ವಧೆಯ ಉಪಾಯವನ್ನು ತಿಳಿಸಬೇಕೆಂಬ ವರವನ್ನು ಬೇಡಿದನು. ॥ ೨೯॥ ಪರಶಿವನು ಹೇಳಿದನು - 'ನೀನು ಬ್ರಾಹ್ಮಣರೊಂದಿಗೆ ಸೇರಿ ಯಜ್ಞದ ದೇವತೆಯಾದ ಋತ್ವಿಗ್ಭೂತವಾದ ದಕ್ಷಿಣಾಗ್ನಿಯನ್ನು ಅಭಿಚಾರವಿಧಿಯಿಂದ ಆರಾಧಿಸು. ಇದರಿಂದ ಆ ಅಗ್ನಿಯು ಪ್ರಮಥಗಣಗಳೊಂದಿಗೆ ಪ್ರಕಟವಾಗುತ್ತದೆ. ಬ್ರಾಹ್ಮಣ ಭಕ್ತರಲ್ಲದವರ ಮೇಲೆ ಅದನ್ನು ಪ್ರಯೋಗಿಸಿದರೆ ಅದು ನಿನ್ನ ಸಂಕಲ್ಪವನ್ನು ಸಿದ್ಧಿಸಿಕೊಡುವುದು. ಭಗವಾನ್ ಶಂಕರನ ಇಂತಹ ಆಜ್ಞೆಯನ್ನು ಪಡೆದುಕೊಂಡು ಸುದಕ್ಷಿಣನು ಅನುಷ್ಠಾನಕ್ಕೆ ಬೇಕಾದ ನಿಯಮಗಳನ್ನು ಸ್ವೀಕರಿಸಿ, ಭಗವಾನ್ ಶ್ರೀಕೃಷ್ಣನಿಗಾಗಿ ಅಭಿಚಾರ (ಮಾರಣದ ಪುರಶ್ಚರಣ)ವನ್ನು ಮಾಡತೊಡಗಿದನು.॥೩೦-೩೧॥ ಅಭಿಚಾರ ಹೋಮವು ಪೂರ್ಣವಾಗುತ್ತಿದ್ದಂತೆ ಯಜ್ಞಕುಂಡದಿಂದ ಅತಿ ಭೀಷಣವಾದ ಅಗ್ನಿಯು ಮೂರ್ತಿಮತ್ತಾಗಿ ಪ್ರಕಟನಾದನು. ಅವನ ಕೂದಲು, ಗಡ್ಡ-ಮೀಸೆಗಳು ಕಾಯಿಸಿದ ತಾಮ್ರದಂತೆ ಕೆಂಪಾಗಿದ್ದವು. ಕಣ್ಣುಗಳು ಕೆಂಡವನ್ನು ಉಗುಳುತ್ತಿವೆಯೋ ಎಂಬಂತೆ ಇತ್ತು. ॥ ೩೨ ॥ ಕೋರೆದಾಡೆಗಳಿದ್ದು ವಕ್ರವಾದ ಹುಬ್ಬುಗಳಿಂದಾಗಿ ಮುಖವು ಅತ್ಯುಗ್ರವಾಗಿತ್ತು. ಅವನು ತನ್ನ ನಾಲಿಗೆಯಿಂದ ಕಟವಾಯಿಗಳನ್ನು ನೆಕ್ಕಿಕೊಳ್ಳುತ್ತಿದ್ದನು. ಬೆತ್ತಲಾಗಿದ್ದನು. ಕೈಯಲ್ಲಿ ಬೆಂಕಿಯ ಜ್ವಾಲೆಗಳು ಹೊರಹೊಮ್ಮುತ್ತಿದ್ದ ತ್ರಿಶೂಲವೊಂದನ್ನು ಹಿಡಿದುಕೊಂಡು ತಿರುಗಿಸುತ್ತಾ ಇದ್ದನು. ॥ ೩೩ ॥ ತಾಳೆಮರದಂತೆ ದೊಡ್ಡ-ದೊಡ್ಡ ಕಾಲುಗಳಿದ್ದವು. ಅವನು ನಡೆಯುವಾಗ ಭೂಮಿಯನ್ನು ನಡುಗಿಸುತ್ತಾ, ತನ್ನ ಜ್ವಾಲೆಗಳಿಂದ ಹತ್ತು ದಿಕ್ಕುಗಳನ್ನು ಸುಡುತ್ತಾ ದ್ವಾರಕೆಯ ಕಡೆಗೆ ಧಾವಿಸಿದನು. ಅವನೊಡನೆ ಅನೇಕ ಭೂತಗಳೂ ಇದ್ದವು. ॥ ೩೪ ॥ ಆ ಅಭಿಚಾರಿಕವಾದ ಅಗ್ನಿಯು ಬರುತ್ತಿರುವುದನ್ನು ನೋಡಿ ದ್ವಾರಕಾ ನಿವಾಸಿಗಳು ಕಾಡಿನಲ್ಲಿ ಬೆಂಕಿಯು ಹೊತ್ತಿಕೊಂಡಾಗ ಜಿಂಕೆಗಳು ಹೆದರುವಂತೆ ಹೆದರಿಹೋದರು. ॥ ೩೫ ॥

ಅಕ್ಷೈಃ ಸಭಾಯಾಂ ಕ್ರೀಡಂತಂ ಭಗವಂತಂ ಭಯಾತುರಾಃ ।
ತ್ರಾಹಿ ತ್ರಾಹಿ ತ್ರಿಲೋಕೇಶ ವಹ್ನೇಃ ಪ್ರದಹತಃ ಪುರಮ್ ॥ ೩೬ ॥

ಶ್ರುತ್ವಾ ತಜ್ಜನವೈಕ್ಲವ್ಯಂ ದೃಷ್ಟ್ವಾ ಸ್ವಾನಾಂ ಚ ಸಾಧ್ವಸಮ್ ।
ಶರಣ್ಯಃ ಸಂಪ್ರಹಸ್ಯಾಹ ಮಾ ಭೈಷ್ಟೇತ್ಯವಿತಾಸ್ಮ್ಯಹಮ್ ॥ ೩೭ ॥

ಸರ್ವಸ್ಯಾಂತರ್ಬಹಿಃಸಾಕ್ಷೀ ಕೃತ್ಯಾಂ ಮಾಹೇಶ್ವರೀಂ ವಿಭುಃ ।
ವಿಜ್ಞಾಯ ತದ್ವಿಘಾತಾರ್ಥಂ ಪಾರ್ಶ್ವಸ್ಥಂ ಚಕ್ರಮಾದಿಶತ್ ॥ ೩೮ ॥

ತತ್ಸೂರ್ಯಕೋಟಿಪ್ರತಿಮಂ ಸುದರ್ಶನಂ
ಜಾಜ್ವಲ್ಯಮಾನಂ ಪ್ರಲಯಾನಲಪ್ರಭಮ್ ।
ಸ್ವತೇಜಸಾ ಖಂ ಕಕುಭೋಽಥ ರೋದಸೀ
ಚಕ್ರಂ ಮುಕುಂದಾಸ್ತ್ರಮಥಾಗ್ನಿಮಾರ್ದಯತ್ ॥ ೩೯ ॥

ಕೃತ್ಯಾನಲಃ ಪ್ರತಿಹತಃ ಸ ರಥಾಂಗಪಾಣೇ-
ರಸ್ತ್ರೌಜಸಾ ಸ ನೃಪ ಭಗ್ನಮುಖೋ ನಿವೃತ್ತಃ ।
ವಾರಾಣಸೀಂ ಪರಿಸಮೇತ್ಯ ಸುದಕ್ಷಿಣಂ ತಂ
ಸರ್ತ್ವಿಗ್ಜನಂ ಸಮದಹತ್ಸ್ವಕೃತೋಽಭಿಚಾರಃ ॥ ೪೦ ॥

ಚಕ್ರಂ ಚ ವಿಷ್ಣೋಸ್ತದನುಪ್ರವಿಷ್ಟಂ
ವಾರಾಣಸೀಂ ಸಾಟ್ಟಸಭಾಲಯಾಪಣಾಮ್ ।
ಸಗೋಪುರಾಟ್ಟಾಲಕಕೋಷ್ಠಸಂಕುಲಾಂ
ಸಕೋಶಹಸ್ತ್ಯಶ್ವರಥಾನ್ನಶಾಲಾಮ್ ॥ ೪೧ ॥

ದಗ್ಧ್ವಾ ವಾರಾಣಸೀಂ ಸರ್ವಾಂ ವಿಷ್ಣೋಶ್ಚಕ್ರಂ ಸುದರ್ಶನಮ್ ।
ಭೂಯಃ ಪಾರ್ಶ್ವಮುಪಾತಿಷ್ಠತ್ ಕೃಷ್ಣಸ್ಯಾಕ್ಲಿಷ್ಟಕರ್ಮಣಃ ॥ ೪೨ ॥

ಯ ಏತಚ್ಛ್ರಾವಯೇನ್ಮರ್ತ್ಯ ಉತ್ತಮಶ್ಲೋಕವಿಕ್ರಮಮ್ ।
ಸಮಾಹಿತೋ ವಾ ಶೃಣುಯಾತ್ ಸರ್ವಪಾಪೈಃ ಪ್ರಮುಚ್ಯತೇ ॥ ೪೩ ॥

ಅವರೆಲ್ಲರೂ ಭಯಗೊಂಡು ಭಗವಂತನ ಬಳಿಗೆ ಓಡಿ ಬಂದರು. ಶ್ರೀಕೃಷ್ಣನು ಆಗ ಸಭೆಯಲ್ಲಿ ಕುಳಿತು ಪಗಡೆಯಾಡುತ್ತಿದ್ದನು. ಅವರೆಲ್ಲರೂ ಪ್ರಾರ್ಥಿಸಿದರು -ತ್ರಿಲೋಕೇಶನೇ ! ಭಯಂಕರವಾದ ಅಗ್ನಿಯಿಂದ ದ್ವಾರಕಾಪಟ್ಟಣವು ಸುಡುತ್ತಿದೆ. ಕಾಪಾಡು ! ಕಾಪಾಡು ! ॥ ೩೬ ॥ ದ್ವಾರಕಾವಾಸಿಗಳೂ ಸ್ವಜನರೂ ದುಃಖಪಡುತ್ತಿರುವುದನ್ನು, ಭಯದಿಂದ ನಡುಗುತ್ತಾ ಕೂಗಿಕೊಳ್ಳುವುದನ್ನು ನೋಡಿದ ಶರಣಾಗತವತ್ಸಲನಾದ ಭಗವಂತನು ನಗುತ್ತಾ ಹೇಳಿದನು - ಹೆದರಬೇಡಿರಿ. ನಾನು ನಿಮ್ಮೆಲ್ಲರನ್ನು ರಕ್ಷಿಸುತ್ತೇನೆ. ॥ ೩೭॥

ಪರೀಕ್ಷಿತನೇ! ಭಗವಂತನು ಸಮಸ್ತರ ಹೊರಗಿನ-ಒಳಗಿನ ವ್ಯಾಪಾರಗಳಿಗೆ ಸಾಕ್ಷಿಯಾಗಿದ್ದಾನೆ. ಇದು ಕಾಶಿಯಿಂದ ಬಂದಿರುವ ಮಾಹೇಶ್ವರೀ ಕೃತ್ಯೆಯಾಗಿದೆ ಎಂದು ತಿಳಿದು ಅವನು ಅದರ ಪ್ರತೀಕಾರಕ್ಕಾಗಿ ಬಳಿಯಲ್ಲೇ ವಿರಾಜಮಾನವಾಗಿದ್ದ ಸುದರ್ಶನ ಚಕ್ರಕ್ಕೆ ಅಜ್ಞಾಪಿಸಿದನು. ॥ ೩೮ ॥ ಭಗವಾನ್ ಮುಕುಂದನ ಪ್ರಿಯವಾದ ಅಸ್ತ್ರ ಸುದರ್ಶನ ಚಕ್ರವು ಕೋಟಿ-ಕೋಟಿ ಸೂರ್ಯನಂತೆ ತೇಜಸ್ಸುಳ್ಳದ್ದು, ಪ್ರಳಯಕಾಲದ ಅಗ್ನಿಯಂತೆ ಜಾಜ್ವಲ್ಯಮಾನವಾಗಿತ್ತು. ಅದರ ತೇಜದಿಂದ ಆಕಾಶ, ದಿಕ್ಕುಗಳು ಮತ್ತು ಅಂತರಿಕ್ಷವು ಬೆಳಗುತ್ತಿದ್ದವು. ಶ್ರೀಕೃಷ್ಣನ ಅಪ್ಪಣೆಯಂತೆ ಅದು ಅಭಿಚಾರ ಅಗ್ನಿಯನ್ನು ಕ್ಷಣಮಾತ್ರದಲ್ಲಿ ಹಿಮ್ಮೆಟ್ಟಿಸಿದನು. ॥ ೩೯ ॥ ರಥಾಂಗಪಾಣಿಯಾದ ಶ್ರೀಕೃಷ್ಣನ ಅಸ್ತ್ರವಾದ ಸುದರ್ಶನ ಚಕ್ರದ ಶಕ್ತಿಯಿಂದ ಕೃತ್ಯಾಗ್ನಿಯು ಮುಖಭಂಗವಾಯಿತು. ಅದರ ತೇಜವು ನಷ್ಟವಾಗಿ, ಶಕ್ತಿಯು ಕುಂದಿಹೋಗಿ ಅದು ಅಲ್ಲಿಂದ ಹಿಂದಿರುಗಿ ಕಾಶಿಗೆ ಬಂದು ಋತ್ವಿಜ ಆಚಾರ್ಯರೊಂದಿಗೆ ಸುದಕ್ಷಿಣನನ್ನು ಸುಟ್ಟು ಬೂದಿಮಾಡಿತು. ಹೀಗೆ ಅಭಿಚಾರವು ಅವನಿಗೆ ಮುಳುವಾಯಿತು. ॥ ೪೦॥ ಕೃತ್ಯಾಗ್ನಿಯ ಬೆನ್ನಿಗೇ ಸುದರ್ಶನವು ಕಾಶಿಗೆ ಬಂದು, ವಿಶಾಲವಾದ ಆ ನಗರಿಯ ದೊಡ್ಡ - ದೊಡ್ಡ ಉಪ್ಪರಿಗೆ ಮನೆಗಳನ್ನೂ, ಸಭಾಭವನಗಳನ್ನು, ಅಂಗಡಿಮುಂಗಟ್ಟುಗಳನ್ನು, ನಗರದ್ವಾರಗಳನ್ನೂ, ಗೋಪುರಗಳನ್ನೂ, ಪ್ರಾಕಾರಗಳನ್ನೂ, ಭಂಡಾರಗಳನ್ನೂ, ಆನೆ, ಕುದುರೆ, ರಥಗಳನ್ನು, ಅನ್ನ ಶಾಲೆಗಳನ್ನೂ ಕ್ಷಣಾರ್ಧದಲ್ಲಿ ಬೂದಿಮಾಡಿ, ಮತ್ತೆ ಅದು ಪರಮಾನಂದ ಮಯವಾದ ಲೀಲೆಗಳನ್ನು ಮಾಡುವಂತಹ ಭಗವಾನ್ ಶ್ರೀಕೃಷ್ಣನ ಬಳಿಗೆ ಬಂದು ಕುಳಿತುಕೊಂಡಿತು. ॥ ೪೧-೪೨ ॥

ಪುಣ್ಯಕೀರ್ತಿಯಾದ ಭಗವಾನ್ ಶ್ರೀಕೃಷ್ಣನ ಈ ಚರಿತ್ರವನ್ನು ಏಕಾಗ್ರತೆಯಿಂದ ಹೇಳುವ, ಕೇಳುವ ಮನುಷ್ಯನು ಎಲ್ಲ ಪಾಪಗಳಿಂದ ಮುಕ್ತನಾಗಿ ಹೋಗುತ್ತಾನೆ. ॥ ೪೩ ॥

ಅರವತ್ತಾರನೆಯ ಅಧ್ಯಾಯವು ಮುಗಿಯಿತು. ॥ ೬೬ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಉತ್ತರಾರ್ಧೇ
ಪೌಂಡ್ರಕಾದಿವಧೋ ನಾಮ ಷಟ್‌ಷಷ್ಟಿತಮೋಽಧ್ಯಾಯಃ ॥ ೬೬ ॥

# ಅರವತ್ತೇಳನೆಯ ಅಧ್ಯಾಯ

## ಬಲರಾಮನಿಂದ ದ್ವಿವಿದನ ಸಂಹಾರ

*ರಾಜೋವಾಚ*

ಭೂಯೋಽಹಂ ಶ್ರೋತುಮಿಚ್ಛಾಮಿ ರಾಮಸ್ಯಾದ್ಭುತಕರ್ಮಣಃ ।
ಅನಂತಸ್ಯಾಪ್ರಮೇಯಸ್ಯ ಯದನ್ಯತ್ಕೃತವಾನ್ ಪ್ರಭುಃ ॥ ೧ ॥

*ಶ್ರೀಶುಕ ಉವಾಚ*

ನರಕಸ್ಯ ಸಖಾ ಕಶ್ಚಿದ್ದ್ವಿವಿದೋ ನಾಮ ವಾನರಃ ।
ಸುಗ್ರೀವಸಚಿವಃ ಸೋಽಥ ಭ್ರಾತಾ ಮೈಂದಸ್ಯ ವೀರ್ಯವಾನ್ ॥ ೨ ॥

ಸಖ್ಯುಃ ಸೋಽಪಚಿತಿಂ ಕುರ್ವನ್ವಾನರೋ ರಾಷ್ಟ್ರವಿಪ್ಲವಮ್ ।
ಪುರಗ್ರಾಮಾಕರಾನ್ಘೋಷಾನದಹದ್ವಹ್ನಿಮುತ್ಸೃಜನ್ ॥ ೩ ॥

ಕ್ವಚಿತ್ಸ ಶೈಲಾನುತ್ಪಾಟ್ಯ ತೈರ್ದೇಶಾನ್ಸಮಚೂರ್ಣಯತ್ ।
ಆನರ್ತಾನ್ಸುತರಾಮೇವ ಯತ್ರಾಸ್ತೇ ಮಿತ್ರಹಾ ಹರಿಃ ॥ ೪ ॥

ಕ್ವಚಿತ್ಸಮುದ್ರಮಧ್ಯಸ್ಥೋ ದೋರ್ಭ್ಯಾಮುತ್ಕ್ಷಿಪ್ಯ ತಜ್ಜಲಮ್ ।
ದೇಶಾನ್ನಾಗಾಯುತಪ್ರಾಣೋ ವೇಲಾಕೂಲಾನಮಜ್ಜಯತ್ ॥ ೫ ॥

ಆಶ್ರಮಾನೃಷಿಮುಖ್ಯಾನಾಂ ಕೃತ್ವಾ ಭಗ್ನವನಸ್ಪತೀನ್ ।
ಅದೂಷಯಚ್ಛಕೃನ್ಮೂತ್ರೈರಗ್ನೀನ್ವೈತಾನಿಕಾನ್ಖಲಃ ॥ ೬ ॥

ಪುರುಷಾನ್ಯೋಷಿತೋ ದೃಪ್ತಃ ಕ್ಷ್ಮಾಭೃದ್ದ್ರೋಣೀಗುಹಾಸು ಸಃ ।
ನಿಕ್ಷಿಪ್ಯ ಚಾಪ್ಯಧಾಚ್ಛೈಲೈಃ ಪೇಶಸ್ಕಾರೀವ ಕೀಟಕಮ್ ॥ ೭ ॥

ಏವಂ ದೇಶಾನ್ವಿಪ್ರಕುರ್ವನ್ದೂಷಯಂಶ್ಚ ಕುಲಸ್ತ್ರಿಯಃ ।
ಶ್ರುತ್ವಾ ಸುಲಲಿತಂ ಗೀತಂ ಗಿರಿಂ ರೈವತಕಂ ಯಯೌ ॥ ೮ ॥

ತತ್ರಾಪಶ್ಯದ್ಯದುಪತಿಂ ರಾಮಂ ಪುಷ್ಕರಮಾಲಿನಮ್ ।
ಸುದರ್ಶನೀಯಸರ್ವಾಂಗಂ ಲಲನಾಯೂಥಮಧ್ಯಗಮ್ ॥ ೯ ॥

**ಪರೀಕ್ಷಿತರಾಜನು ಕೇಳಿದನು** - ಪೂಜ್ಯರೇ! ಭಗವಾನ್ ಬಲರಾಮನು ಅದ್ಭುತ ಕಾರ್ಯಗಳನ್ನು ಮಾಡುವವನೂ, ಅನಂತನೂ, ಅಪ್ರಮೇಯನೂ ಆಗಿರುವನು. ಅಂತಹ ಬಲಭದ್ರನು ಮಾಡಿದ ಇತರ ಸಾಹಸ ಕಾರ್ಯಗಳನ್ನು ಕೇಳಲು ಬಯಸುತ್ತೇನೆ. ದಯಮಾಡಿ ಹೇಳಿರಿ. ॥ ೧ ॥

**ಶ್ರೀಶುಕಮುನಿಗಳು ಹೇಳುತ್ತಾರೆ** - ಪರೀಕ್ಷಿತ ಮಹಾರಾಜ! ದ್ವಿವಿದನೆಂಬ ಒಬ್ಬ ವಾನರನಿದ್ದನು. ಅವನು ಭೌಮಾಸುರನ ಮಿತ್ರನೂ, ಸುಗ್ರೀವನ ಮಂತ್ರಿಯೂ, ಶಕ್ತಿಶಾಲಿಯೂ, ಮೈಂದನಿಗೆ ಸಹೋದರನೂ ಆಗಿದ್ದನು. ॥ ೨ ॥ ತನ್ನ ಮಿತ್ರನಾದ ಭೌಮಾಸುರನನ್ನು ಶ್ರೀಕೃಷ್ಣನು ಸಂಹರಿಸಿದನೆಂಬ ವಾರ್ತೆಯನ್ನು ಕೇಳುತ್ತಲೇ ದ್ವಿವಿದನು ತನ್ನ ಮಿತ್ರನ ಮಿತ್ರಋಣವನ್ನು ತೀರಿಸಬೇಕೆಂದು ರಾಷ್ಟ್ರದಲ್ಲಿ ವಿಪ್ಲವವನ್ನುಂಟುಮಾಡಲು ತೊಡಗಿದನು. ಆ ವಾನರನು ನಗರಗಳನ್ನು, ಪಟ್ಟಣಗಳನ್ನೂ, ಹಳ್ಳಿಗಳನ್ನೂ, ಗೋಪಾಲಕರ ಹಟ್ಟಿಗಳನ್ನು ಸುಡಲು ಪ್ರಾರಂಭಿಸಿದನು. ॥ ೩ ॥ ಕೆಲವೊಮ್ಮೆ ಅವನು ದೊಡ್ಡ-ದೊಡ್ಡ ಪರ್ವತಗಳನ್ನು ಕಿತ್ತು ಊರುಗಳ ಮೇಲೆ, ಗ್ರಾಮಗಳ ಮೇಲೆ ಎಸೆದು ಪುಡಿ-ಪುಡಿ ಮಾಡಿಬಿಡುತ್ತಿದ್ದನು. ವಿಶೇಷವಾಗಿ ಅವನು ಆನರ್ತ ದೇಶದಲ್ಲಿಯೇ ಇಂತಹ ಉತ್ಪಾತಗಳನ್ನು ಮಾಡುತ್ತಿದ್ದನು. ಏಕೆಂದರೆ, ತನ್ನ ಮಿತ್ರಹಂತಕನಾದ ಶ್ರೀಕೃಷ್ಣನು ಅಲ್ಲೇ ವಾಸಿಸುತ್ತಿದ್ದನು. ॥ ೪॥ ದ್ವಿವಿದನಲ್ಲಿ ಹತ್ತು ಸಾವಿರ ಆನೆಗಳ ಬಲವಿತ್ತು. ಕೆಲವೊಮ್ಮೆ ಆ ದುಷ್ಟನು ಸಮುದ್ರದಲ್ಲಿ ನಿಂತು ಕೈಗಳಿಂದ ನೀರನ್ನು ಮೊಗೆದು ಸಮುದ್ರತಟದಲ್ಲಿದ್ದ ಊರುಗಳನ್ನೇ ಮುಳುಗಿಸಿ ಬಿಡುತ್ತಿದ್ದನು. ॥ ೫॥ ಆ ದುಷ್ಟನು ದೊಡ್ಡ ದೊಡ್ಡ ಋಷಿಮುನಿಗಳ ಆಶ್ರಮದ ಸುಂದರವಾದ ಲತಾ-ವನಸ್ಪತಿಗಳನ್ನು ಕಿತ್ತು ಹಾಕುತ್ತಿದ್ದನು. ಅವರ ಯಜ್ಞಕುಂಡಗಳಲ್ಲಿ ಮೂತ್ರ ಪುರೀಷಗಳನ್ನು ವಿಸರ್ಜಿಸಿ ಅಗ್ನಿಗಳನ್ನು ಕೆಡಿಸುತ್ತಿದ್ದನು. ॥ ೬ ॥ ಕಣಜದ ಹುಳವು ಬೇರೊಂದು ಕ್ರಿಮಿಯನ್ನು ತಂದು ತನ್ನ ಗೂಡಿನಲ್ಲಿಟ್ಟು ಮುಚ್ಚಿಬಿಡುವಂತೆಯೇ ಆ ಮದೋನ್ಮತ್ತನಾದ ವಾನರನು ಸ್ತ್ರೀಯರನ್ನು, ಪುರುಷರನ್ನು ಎತ್ತಿಕೊಂಡು ಹೋಗಿ ಪರ್ವತಗಳ ಗುಹೆಗಳಲ್ಲಿ ಕೂಡಿಹಾಕಿ ಬಾಗಿಲಿಗೆ ಬಂಡೆಗಳನ್ನು ಮುಚ್ಚಿ ಬಿಡುತ್ತಿದ್ದನು. ॥ ೭ ॥ ಹೀಗೆ ಅವನು ದೇಶವಾಸಿಗಳನ್ನು ತಿರಸ್ಕರಿಸುತ್ತಾ ಕುಲೀನ ಸ್ತ್ರೀಯರನ್ನು ಕೆಡಿಸುತ್ತಿದ್ದನು. ಒಂದು ದಿನ ಆ ದುಷ್ಟನು ಕರ್ಣಾನಂದಕರವಾದ ಸಂಗೀತವನ್ನು ಕೇಳಿ ರೈವತಕ ಪರ್ವತಕ್ಕೆ ಹೋದನು. ॥ ೮ ॥

ಅಲ್ಲಿ ಯದುವಂಶ ಶಿರೋಮಣಿ ಬಲರಾಮನು ಸುಂದರವಾದ ಯುವತಿಯರೊಂದಿಗೆ ವಿರಾಜಿಸುತ್ತಿರುವುದನ್ನು ಅವನು ನೋಡಿದನು. ಬಲರಾಮನ ಪ್ರತಿಯೊಂದು ಅಂಗಾಂಗಗಳು ಸುಂದರವೂ, ದರ್ಶನೀಯವೂ ಆಗಿದ್ದು ಕೊರಳಲ್ಲಿ ಕಮಲ ಪುಷ್ಪಗಳ ಮಾಲೆಯು ಶೋಭಿಸುತ್ತಿತ್ತು. ॥ ೯ ॥

ಗಾಯಂತಂ ವಾರುಣೀಂ ಪೀತ್ವಾ ಮದವಿಹ್ವಲಲೋಚನಮ್ ।
ವಿಭ್ರಾಜಮಾನಂ ವಪುಷಾ ಪ್ರಭಿನ್ನಮಿವ ವಾರಣಮ್ ॥ ೧೦ ॥

ದುಷ್ಟಃ ಶಾಖಾಮೃಗಃ ಶಾಖಾ ಮಾರೂಢಃ ಕಂಪಯನ್ ದ್ರುಮಾನ್ ।
ಚಕ್ರೇ ಕಿಲಕಿಲಾಶಬ್ದ ಮಾತ್ಮಾನಂ ಸಂಪ್ರದರ್ಶಯನ್ ॥ ೧೧ ॥

ತಸ್ಯ ಧಾರ್ಷ್ಟ್ಯಂ ಕಪೇರ್ವೀಕ್ಷ್ಯ ತರುಣ್ಯೋ ಜಾತಿಚಾಪಲಾಃ ।
ಹಾಸ್ಯಪ್ರಿಯಾ ವಿಜಹಸುರ್ಬಲದೇವಪರಿಗ್ರಹಾಃ ॥ ೧೨ ॥

ತಾ ಹೇಲಯಾಮಾಸ ಕಪಿರ್ಭ್ರೂಕ್ಷೇಪೈಃ ಸಮ್ಮುಖಾದಿಭಿಃ ।
ದರ್ಶಯನ್ ಸ್ವಗುದಂ ತಾಸಾಂ ರಾಮಸ್ಯ ಚ ನಿರೀಕ್ಷತಃ ॥ ೧೩ ॥

ತಂ ಗ್ರಾವ್ಣಾ ಪ್ರಾಹರತ್ಕ್ರುದ್ಧೋ ಬಲಃ ಪ್ರಹರತಾಂ ವರಃ ।
ಸ ವಂಚಯಿತ್ವಾ ಗ್ರಾವಾಣಂ ಮದಿರಾಕಲಶಂ ಕಪಿಃ ॥ ೧೪ ॥

ಗೃಹೀತ್ವಾ ಹೇಲಯಾಮಾಸ ಧೂರ್ತಸ್ತಂ ಕೋಪಯನ್ಹಸನ್ ।
ನಿರ್ಭಿದ್ಯ ಕಲಶಂ ದುಷ್ಟೋ ವಾಸಾಂಸ್ಯಾಸ್ಫಾಲಯದ್ಬಲಮ್ ॥ ೧೫ ॥

ಕದರ್ಥೀಕೃತ್ಯ ಬಲವಾನ್ವಿಪ್ರಚಕ್ರೇ ಮದೋದ್ಧತಃ ।
ತಂ ತಸ್ಯಾವಿನಯಂ ದೃಷ್ಟ್ವಾ ದೇಶಾಂಶ್ಚ ತದುಪದ್ರುತಾನ್ ॥ ೧೬ ॥

ಕ್ರುದ್ಧೋ ಮುಸಲಮಾದತ್ತ ಹಲಂ ಚಾರಿಜಿಘಾಂಸಯಾ ।
ದ್ವಿವಿದೋಽಪಿ ಮಹಾವೀರ್ಯಃ ಶಾಲಮುದ್ಯಮ್ಯ ಪಾಣಿನಾ ॥ ೧೭ ॥

ಅಭ್ಯೇತ್ಯ ತರಸಾ ತೇನ ಬಲಂ ಮೂರ್ಧನ್ಯತಾಡಯತ್ ।
ತಂ ತು ಸಂಕರ್ಷಣೋ ಮೂರ್ಧ್ನಿ ಪತಂತಮಚಲೋ ಯಥಾ ॥ ೧೮ ॥

ಪ್ರತಿಜಗ್ರಾಹ ಬಲವಾನ್ಸುನಂದೇನಾಹನಚ್ಚ ತಮ್ ।
ಮುಸಲಾಹತಮಸ್ತಿಷ್ಕೋ ವಿರೇಜೇ ರಕ್ತಧಾರಯಾ ॥ ೧೯ ॥

ಗಿರಿರ್ಯಥಾ ಗೈರಿಕಯಾ ಪ್ರಹಾರಂ ನಾನುಚಿಂತಯನ್ ।
ಪುನರನ್ಯಂ ಸಮುತ್ಕ್ಷಿಪ್ಯ ಕೃತ್ವಾ ನಿಷ್ಪತ್ರಮೋಜಸಾ ॥ ೨೦ ॥

ತೇನಾಹನತ್ಸುಸಂಕ್ರುದ್ಧಸ್ತಂ ಬಲಃ ಶತಧಾಚ್ಛಿನತ್ ।
ತತೋಽನ್ಯೇನ ರುಷಾ ಜಘ್ನೇ ತಂ ಚಾಪಿ ಶತಧಾಚ್ಛಿನತ್ ॥ ೨೧ ॥

ಅವನು ಮಧುಪಾನ ಮಾಡಿ ಮಧುರವಾಗಿ ಸಂಗೀತವನ್ನು ಹಾಡುತ್ತಿದ್ದನು. ಅವನ ಕಣ್ಣುಗಳು ಆನಂದೋನ್ಮಾದದಿಂದ ವಿಹ್ವಲವಾಗಿದ್ದವು. ಅವನ ಶರೀರವು ಮತ್ತಗಜದಂತೆ ಶೋಭಾಯಮಾನವಾಗಿತ್ತು. ॥ ೧೦ ॥ ಆ ದುಷ್ಟವಾನರನು ಬಲರಾಮನಿದ್ದಲ್ಲಿಗೆ ಬಂದು ಮರದ ಮೇಲೆ ಹತ್ತಿ ಕೊಂಬೆಗಳನ್ನು ರಭಸದಿಂದ ಅಲ್ಲಾಡಿಸುತ್ತಿದ್ದನು. ಕೆಲವೊಮ್ಮೆ ಸ್ತ್ರೀಯರ ಮುಂದೆ ನಿಂತು ಕಲ-ಕಲಶಬ್ದ ಮಾಡುತ್ತಾ ತಾನಿರುವುದನ್ನು ತೋರಿಸಿಕೊಳ್ಳುವನು. ॥ ೧೧ ॥ ಯುವತಿಯರು ಸ್ವಾಭಾವಿಕವಾಗಿ ಚಂಚಲೆಯರೂ ಹಾಸ್ಯಪ್ರಿಯರೂ ಆಗಿರುತ್ತಾರೆ. ದ್ವಿವಿದನ ಕಪಿಚೇಷ್ಟೆಗಳನ್ನು ಕಂಡು ಬಲರಾಮನ ಪ್ರೇಯಸಿಯರು ಪಕ-ಪಕನೆ ನಗತೊಡಗಿದರು. ॥ ೧೨ ॥ ಈಗ ಆ ವಾನರನು ಬಲರಾಮನು ನೋಡುತ್ತಿರುವಂತೆಯೇ ಸ್ತ್ರೀಯರನ್ನು ಹಲ್ಲುಕಿರಿಯುತ್ತಾ, ಗರ್ಜಿಸುತ್ತಾ, ಹುಬ್ಬುಗಳನ್ನು ಹಾರಿಸುತ್ತಾ, ಅಣಕಿಸುತ್ತಿದ್ದನು. ಕೆಲವೊಮ್ಮೆ ಅವರಿಗೆ ಗುದವನ್ನು ತೋರಿಸಿ ಅವಹೇಳನ ಮಾಡುತ್ತಿದ್ದನು. ॥ ೧೩ ॥ ವೀರಶಿರೋಮಣಿ ಬಲರಾಮನು ಅವನ ಇಂತಹ ಚೇಷ್ಟೆಗಳನ್ನು ನೋಡಿ ಕ್ರೋಧಿತನಾಗಿ ಅವನ ಮೇಲೆ ಒಂದು ಕಲ್ಲನ್ನು ಎಸೆದನು. ಆದರೆ ದ್ವಿವಿದನು ಅದನ್ನು ತಪ್ಪಿಸಿಕೊಂಡು, ಬಲರಾಮನ ಬಳಿಯಿದ್ದ ಮಧುಕಲಶವನ್ನೆತ್ತಿಕೊಂಡು ಹೋಗಿ ಬಲರಾಮನನ್ನು ಅಣಕಿಸಿದನು. ಆ ಧೂರ್ತನು ಮಧುಕಲಶವನ್ನು ಒಡೆದುಹಾಕಿದನು ಮತ್ತು ಸ್ತ್ರೀಯರ ವಸ್ತ್ರಗಳನ್ನು ಹರಿದು ಹಾಕಿದನು. ಈಗ ಅವನು ಗಹ-ಗಹಿಸಿ ನಗುತ್ತಾ ಬಲರಾಮನನ್ನು ಕ್ರೋಧಿತಗೊಳಿಸತೊಡಗಿದನು. ॥ ೧೪-೧೫ ॥ ಪರೀಕ್ಷಿತನೇ ! ಈ ಪ್ರಕಾರವಾಗಿ ಬಲಿಷ್ಠನೂ, ಮದೋನ್ಮತ್ತನೂ ಆದ ದ್ವಿವಿದನು ಬಲರಾಮನನ್ನು ಅಣಕಿಸುತ್ತಾ, ತಿರಸ್ಕರಿಸತೊಡಗಿದಾಗ, ಬಲರಾಮನು ಅವನ ಉದ್ಧಟತನವನ್ನು ನೋಡಿ, ಅವನಿಂದ ಪೀಡಿಸಲ್ಪಟ್ಟ ದೇಶಗಳ ದುರ್ದಶೆಯ ಕುರಿತು ವಿಚಾರಮಾಡಿ ಆ ಶತ್ರುವನ್ನು ಕೊಂದು ಹಾಕುವುದೆಂದು ಕ್ರೋಧಗೊಂಡು ಹಲಾಯುಧವನ್ನು ಎತ್ತಿದನು. ಮಹಾವೀರ್ಯನಾದ ದ್ವಿವಿದನು ಸಾಲವೃಕ್ಷವೊಂದನ್ನು ಕಿತ್ತುಕೊಂಡು ರಭಸದಿಂದ ಬಲರಾಮನ ತಲೆಯಮೇಲೆ ಪ್ರಹರಿಸಿದನು. ಪರ್ವತದಂತೆ ಅಚಲನಾಗಿ ನಿಂತುಕೊಂಡಿದ್ದ ಬಲರಾಮನು ತನ್ನ ತಲೆಯ ಮೇಲೆ ಬೀಳಲಿದ್ದ ಮರವನ್ನು ಹಿಡಿದನು. ಬಳಿಕ ಸುನಂದವೆಂಬ ಮುಸಲಾಯುಧದಿಂದ ದ್ವಿವಿದನನ್ನು ಪ್ರಹರಿಸಿದನು. ಮುಸಲಾಯುಧದ ಏಟಿನಿಂದ ದ್ವಿವಿದನ ತಲೆಯು ಒಡೆದು ರಕ್ತದ ಧಾರೆಯೇ ಹರಿಯಿತು. ಆಗ ಅವನು ಗೈರಿಕಾದಿ ಧಾತುಗಳಿಂದ ಕೂಡಿದ ಪರ್ವತದಂತೆ ಕಾಣುತ್ತಿದ್ದನು. ತಲೆಯೊಡೆದು ರಕ್ತವು ಹರಿಯುತ್ತಿದ್ದರೂ ಅದನ್ನು ಲೆಕ್ಕಿಸದೆ ಕೋಪಗೊಂಡು ಇನ್ನೊಂದು ಮರವನ್ನು ಕಿತ್ತು ತನ್ನ ಭುಜಬಲದಿಂದ ಅದನ್ನು ಪತ್ರರಹಿತವನ್ನಾಗಿ ಮಾಡಿ ಅದರಿಂದ ಬಲರಾಮನನ್ನು ಜೋರಾಗಿ ಪ್ರಹರಿಸಿದನು. ಬಲರಾಮನು ಆ ವೃಕ್ಷವನ್ನು ಮುಸಲಾಯುಧದಿಂದ ನೂರು ಚೂರುಗಳನ್ನಾಗಿ ಮಾಡಿದನು. ಮತ್ತೆ ದ್ವಿವಿದನು ಮತ್ತೊಂದು ವೃಕ್ಷವನ್ನೆತ್ತಿಕೊಂಡು ಸಿಟ್ಟಿನಿಂದ ಪ್ರಯೋಗಿಸಿದನು. ಅದನ್ನು ಬಲರಾಮನು ಚೂರು-ಚೂರು ಮಾಡಿದನು. ॥ ೧೬-೨೧ ॥

ಏವಂ ಯುಧ್ಯನ್ಭಗವತಾ ಭಗ್ನೇ ಭಗ್ನೇ ಪುನಃ ಪುನಃ ।
ಆಕೃಷ್ಯ ಸರ್ವತೋ ವೃಕ್ಷಾನ್ನಿರ್ವೃಕ್ಷಮಕರೋದ್ವನಮ್
॥ ೨೨ ॥

ತತೋಽಮುಂಚಚ್ಛಿಲಾವರ್ಷಂ ಬಲಸ್ಯೋಪರ್ಯಮರ್ಷಿತಃ ।
ತತ್ಸರ್ವಂ ಚೂರ್ಣಯಾಮಾಸ ಲೀಲಯಾ ಮುಸಲಾಯುಧಃ
॥ ೨೩ ॥

ಸ ಬಾಹೂ ತಾಲಸಂಕಾಶೌ ಮುಷ್ಟೀಕೃತ್ಯ ಕಪೀಶ್ವರಃ ।
ಆಸಾದ್ಯ ರೋಹಿಣೀಪುತ್ರಂ ತಾಭ್ಯಾಂ ವಕ್ಷಸ್ಯರೂರುಜತ್
॥ ೨೪ ॥

ಯಾದವೇಂದ್ರೋಽಪಿ ತಂ ದೋರ್ಭ್ಯಾಂ ತ್ಯಕ್ತ್ವಾ ಮುಸಲಲಾಂಗಲೇ ।
ಜತ್ರಾವಭ್ಯರ್ದಯತ್ಕ್ರುದ್ಧಃ ಸೋಽಪತದ್ರುಧಿರಂ ವಮನ್
॥ ೨೫ ॥

ಚಕಂಪೇ ತೇನ ಪತತಾ ಸಟಂಕಃ ಸವನಸ್ಪತಿಃ ।
ಪರ್ವತಃ ಕುರುಶಾರ್ದೂಲ ವಾಯುನಾ ನೌರಿವಾಂಭಸಿ
॥ ೨೬ ॥

ಜಯಶಬ್ದೋ ನಮಃಶಬ್ದಃ ಸಾಧು ಸಾಧ್ವಿತಿ ಚಾಂಬರೇ ।
ಸುರಸಿದ್ಧಮುನೀಂದ್ರಾಣಾಮಾಸೀತ್ಕುಸುಮವರ್ಷಿಣಾಮ್
॥ ೨೭ ॥

ಏವಂ ನಿಹತ್ಯ ದ್ವಿವಿದಂ ಜಗದ್ವ್ಯತಿಕರಾವಹಮ್ ।
ಸಂಸ್ತೂಯಮಾನೋ ಭಗವಾನ್ ಜನೈಃ ಸ್ವಪುರಮಾವಿಶತ್
॥ ೨೮ ॥

ಹೀಗೆ ಯುದ್ಧಮಾಡುತ್ತಿದ್ದಾಗ ಒಂದು ಮರ ಪುಡಿ-ಪುಡಿಯಾಗಿ ಹೋದರೆ ಮತ್ತೊಂದು, ಇನ್ನೊಂದು ಹೀಗೆ ಮರಗಳ ಮೇಲೆ ಮರಗಳನ್ನು ಕಿತ್ತು ಪ್ರಹರಿಸುವನು. ಬಲರಾಮನು ಪುಡಿ ಮಾಡುವನು ಆಗ ಆ ಪರ್ವತವು ವೃಕ್ಷರಹಿತವಾಯಿತು. ॥ ೨೨ ॥ ಮರಗಳೇ ಸಿಗದಿದ್ದಾಗ ದ್ವಿವಿದನ ಕ್ರೋಧವು ಇನ್ನೂ ಹೆಚ್ಚಿತು. ಆಗ ಕೆರಳಿ ಆತನು ಬಲರಾಮನ ಮೇಲೆ ದೊಡ್ಡ-ದೊಡ್ಡ ಬಂಡೆಗಳ ಮಳೆಯನ್ನೇ ಸುರಿಸಿದನು. ಬಲಭದ್ರನು ಲೀಲಾಜಾಲವಾಗಿ ತನ್ನ ಮುಸಲಾಯುಧದಿಂದ ಅವೆಲ್ಲವನ್ನೂ ನುಚ್ಚು-ನೂರಾಗಿಸಿಬಿಟ್ಟನು. ॥ ೨೩ ॥ ಬಂಡೆಗಳೂ ಮುಗಿದು ಹೋದಾಗ ಕಪೀಶ್ವರನು ತಾಳೆಯ ಮರಕ್ಕಿಂತ ಉದ್ದವಾಗಿದ್ದ ತನ್ನ ಕೈಗಳ ಮುಷ್ಟಿ ಬಿಗಿದುಕೊಂಡು ಬಲರಾಮನ ಬಳಿಗೆ ಹೋಗಿ ಅವನ ಎದೆಗೆ ಪ್ರಹರಿಸಿದನು. ॥ ೨೪ ॥ ಇದರಿಂದ ಪರಮ ಕ್ರುದ್ಧನಾದ ಯದುವಂಶ ಶಿರೋಮಣಿ ಬಲರಾಮನು ಮುಸಲಾಯುಧ ಮತ್ತು ಹಲಾಯುಧಗಳಿಂದ ದ್ವಿವಿದನ ಹೆಗಲಿಗೆ ಬಲವಾಗಿ ಪ್ರಹರಿಸಿದನು. ಒಡನೆಯೇ ಕಪೀಶ್ವರನು ರಕ್ತವನ್ನು ಕಾರುತ್ತಾ ಕೆಳಗೆಬಿದ್ದನು. ॥ ೨೫ ॥ ಪರೀಕ್ಷಿತನೇ! ಬಿರುಗಾಳಿ ಬಂದಾಗ ಸಮುದ್ರದಲ್ಲಿರುವ ನಾವೆಯು ಅಳ್ಳಾಡುವಂತೆ ಅವನು ನೆಲಕ್ಕೆ ಬೀಳುತ್ತಲೇ ವೃಕ್ಷಗಳ ಸಹಿತವಾಗಿ ರೈವತಕ ಪರ್ವತವು ನಡುಗಿಹೋಯಿತು. ॥ ೨೬ ॥ ಆಕಾಶದಲ್ಲಿ ದೇವತೆಗಳು ಬಲರಾಮನಿಗೆ ಜಯವಾಗಲೀ, ಜಯವಾಗಲೀ ಎಂದು ಜಯಘೋಷ ಮಾಡಿದರು. ಸಿದ್ಧರು ನಮೋ ನಮಃ ಎಂದು ನಮಸ್ಕರಿಸಿದರು. ಋಷಿ-ಮುನಿಗಳು ಭಲೇ! ಬಲರಾಮ! ಭಲೇ!! ಎಂದು ಪ್ರಶಂಸಿಸುತ್ತಾ ಅವನ ಮೇಲೆ ಹೂ ಮಳೆಗರೆದರು. ॥ ೨೭ ॥ ಪರೀಕ್ಷಿತನೇ! ಜಗತ್ತಿನಲ್ಲಿ ಭಾರೀ ಉಪದ್ರವನ್ನುಂಟುಮಾಡಿದ ದ್ವಿವಿದನನ್ನು ಭಗವಾನ್ ಬಲರಾಮನು ಸಂಹರಿಸಿ ದ್ವಾರಕೆಗೆ ಹಿಂದಿರುಗಿದನು. ಆ ಸಮಯದಲ್ಲಿ ಪುರಜನರು-ಪರಿಜನರು ಅವನನ್ನು ವಿಧ-ವಿಧವಾಗಿ ಕೊಂಡಾಡಿದರು. ॥ ೨೮ ॥

ಅರವತ್ತೇಳನೆಯ ಅಧ್ಯಾಯವು ಮುಗಿಯಿತು. ॥ ೬೭ ॥
ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಉತ್ತರಾರ್ಧೇ
ದ್ವಿವಿದವಧೋ ನಾಮ ಸಪ್ತಷಷ್ಟಿತಮೋಽಧ್ಯಾಯಃ ॥ ೬೭ ॥

# ಅರವತ್ತೆಂಟನೆಯ ಅಧ್ಯಾಯ

## ಕೌರವರ ಮೇಲೆ ಬಲರಾಮನ ಕೋಪ ಮತ್ತು ಸಾಂಬನ ವಿವಾಹ

*ಶ್ರೀಶುಕ ಉವಾಚ*

ದುರ್ಯೋಧನಸುತಾಂ ರಾಜನ್ ಲಕ್ಷ್ಮಣಾಂ ಸಮಿತಿಂಜಯಃ ।
ಸ್ವಯಂವರಸ್ಥಾಮಹರತ್ಸಾಂಬೋ ಜಾಂಬವತೀಸುತಃ
॥ ೧ ॥

ಶ್ರೀಶುಕಮಹಾಮುನಿಗಳು ಹೇಳುತ್ತಾರೆ - ಎಲೈ ಪರೀಕ್ಷಿತನೇ! ಹಲವಾರು ವೀರರನ್ನು ಗೆದ್ದಿರುವ ಮಹಾಶೂರನಾದ ಜಾಂಬವತಿಯ ಮಗನಾದ ಸಾಂಬನು ಸ್ವಯಂವರ ಮಂಟಪದಿಂದ ಕೌರವನ ಮಗಳಾದ ಲಕ್ಷ್ಮಣಾ ಎಂಬುವಳನ್ನು ಅಪಹರಿಸಿಕೊಂಡು ಹೋದನು. ॥ ೧ ॥

ಕೌರವಾಃ ಕುಪಿತಾ ಊಚುರ್ದುರ್ವಿನೀತೋಽಯಮರ್ಭಕಃ ।
ಕದರ್ಥೀಕೃತ್ಯ ನಃ ಕನ್ಯಾಮಕಾಮಾಮಹರದ್ಬಲಾತ್
॥ ೨ ॥

ಬಧ್ನೀತೇಮಂ ದುರ್ವಿನೀತಂ ಕಿಂ ಕರಿಷ್ಯಂತಿ ವೃಷ್ಣಯಃ ।
ಯೇಽಸ್ಮತ್ಪ್ರಸಾದೋಪಚಿತಾಂ ದತ್ತಾಂ ನೋ ಭುಂಜತೇ ಮಹೀಮ್
॥ ೩ ॥

ನಿಗೃಹೀತಂ ಸುತಂ ಶ್ರುತ್ವಾ ಯದ್ಯೇಷ್ಯಂತೀಹ ವೃಷ್ಣಯಃ ।
ಭಗ್ನದರ್ಪಾಃ ಶಮಂ ಯಾಂತಿ ಪ್ರಾಣಾ ಇವ ಸುಸಂಯತಾಃ
॥ ೪ ॥

ಇತಿ ಕರ್ಣಃ ಶಲೋ ಭೂರಿರ್ಯಜ್ಞಕೇತುಃ ಸುಯೋಧನಃ ।
ಸಾಂಬಮಾರೇಭಿರೇ ಬದ್ಧುಂ ಕುರುವೃದ್ಧಾನುಮೋದಿತಾಃ
॥ ೫ ॥

ದೃಷ್ಟ್ವಾನುಧಾವತಃ ಸಾಂಬೋ ಧಾರ್ತರಾಷ್ಟ್ರಾನ್ಮಹಾರಥಃ ।
ಪ್ರಗೃಹ್ಯ ರುಚಿರಂ ಚಾಪಂ ತಸ್ಥೌ ಸಿಂಹ ಇವೈಕಲಃ
॥ ೬ ॥

ತಂ ತೇ ಜಿಘೃಕ್ಷವಃ ಕ್ರುದ್ಧಾಸ್ತಿಷ್ಠ ತಿಷ್ಠೇತಿ ಭಾಷಿಣಃ ।
ಆಸಾದ್ಯ ಧನ್ವಿನೋ ಬಾಣೈಃ ಕರ್ಣಾಗ್ರಣ್ಯಃ ಸಮಾಕಿರನ್
॥ ೭ ॥

ಸೋಽಪವಿದ್ಧಃ ಕುರುಶ್ರೇಷ್ಠ ಕುರುಭಿರ್ಯದುನಂದನಃ ।
ನಾಮೃಷ್ಯತ್ತದಚಿಂತ್ಯಾರ್ಭಃ ಸಿಂಹಃ ಕ್ಷುದ್ರಮೃಗೈರಿವ
॥ ೮ ॥

ವಿಸ್ಫೂರ್ಜ್ಯ ರುಚಿರಂ ಚಾಪಂ ಸರ್ವಾನ್ವಿವ್ಯಾಧ ಸಾಯಕೈಃ ।
ಕರ್ಣಾದೀನ್ ಷಡ್ರಥಾನ್ ವೀರಾಂಸ್ತಾವದ್ಭಿರ್ಯುಗಪತ್ಪೃಥಕ್
॥ ೯ ॥

ಚತುರ್ಭಿಶ್ಚತುರೋ ವಾಹಾನೇಕೈಕೇನ ಚ ಸಾರಥೀನ್ ।
ರಥಿನಶ್ಚ ಮಹೇಷ್ವಾಸಾಂಸ್ತಸ್ಯ ತತ್ತೇಽಭ್ಯಪೂಜಯನ್
॥ ೧೦ ॥

ತಂ ತು ತೇ ವಿರಥಂ ಚಕ್ರುಶ್ಚತ್ವಾರಶ್ಚತುರೋ ಹಯಾನ್ ।
ಏಕಸ್ತು ಸಾರಥಿಂ ಜಘ್ನೇ ಚಿಚ್ಛೇದಾನ್ಯಃ ಶರಾಸನಮ್
॥ ೧೧ ॥

ಇದರಿಂದ ಕುಪಿತರಾದ ಕೌರವರು ಮನಬಂದಂತೆ ಮಾತನಾಡುತ್ತಾ 'ಈ ಬಾಲಕನು ಎಷ್ಟು ಉದ್ಧಟನಾಗಿದ್ದಾನೆ; ನೋಡಿದಿರಾ? ನಮ್ಮನ್ನು ಲೆಕ್ಕಿಸದೆ ನಮ್ಮ ಕನ್ಯೆಯನ್ನು ಅಪಹರಿಸಿಕೊಂಡು ಹೋಗಿ ದ್ದಾನೆ. ಅಲ್ಲದೆ ನಮ್ಮ ಕನ್ಯೆಯೂ ಅವನನ್ನು ಪ್ರೀತಿಸುತ್ತಿರಲಿಲ್ಲ. ॥ ೨ ॥ ಆದ್ದರಿಂದ ದುರ್ವಿನೀತನಾದ ಇವನನ್ನು ಈಗಲೇ ಬಂಧಿಸಿರಿ. ವೃಷ್ಣಿವಂಶೀಯರಾದರೂ ಏನು ಮಾಡುವರು? ನೋಡೋಣ. ಅವರಾದರೋ ನಾವು ಕೊಟ್ಟಿರುವ ಧನ-ಧಾನ್ಯಗಳಿಂದ ಸಮೃದ್ಧವಾದ ರಾಜ್ಯವನ್ನು ನಮ್ಮ ಕೃಪೆಯಿಂದಲೇ ಆಳುತ್ತಿದ್ದಾರೆ. ॥ ೩ ॥ ತಮ್ಮ ಪುತ್ರನ ಬಂಧನವನ್ನು ಕೇಳಿ ವೃಷ್ಣಿಗಳೇನಾದರೂ ಇಲ್ಲಿಗೆ ಬಂದರೆ ನಾವುಗಳು ಅವರ ದರ್ಪವನ್ನು ಪುಡಿ-ಪುಡಿಮಾಡಿ ಬಿಡುವೆವು. ಸಂಯಮಿಗಳಾದ ಜನರ ಇಂದ್ರಿಯಗಳು ಪ್ರಾಣಾಯಾಮದಿಂದ ಶಾಂತವಾಗುವಂತೆ ಅವರ ಅಹಂಕಾರವು ಶಾಂತವಾಗುವುದು. ॥ ೪ ॥ ಕರ್ಣ, ಶಲ, ಭೂರಿಶ್ರವ, ಯಜ್ಞಕೇತು, ಸುಯೋಧನ ಮೊದಲಾದ ವೀರರು ಹೀಗೆ ಯೋಚಿಸಿ, ಕುರುವೃದ್ಧರ ಅನುಮತಿಯನ್ನು ಪಡೆದು ಸಾಂಬನನ್ನು ಬಂಧಿಸಲು ಅನುವಾದರು. ॥ ೫ ॥

ಧೃತರಾಷ್ಟ್ರನ ಪುತ್ರರು ತನ್ನನ್ನು ಹಿಂಬಾಲಿಸಿ ಬರುತ್ತಿದ್ದಾರೆಂದು ನೋಡಿದಾಗ ಮಹಾರಥಿಯಾದ ಸಾಂಬನು ಸುಂದರವಾದ ಧನುಸ್ಸನ್ನು ಸಿದ್ಧಪಡಿಸಿಕೊಂಡು ಸಿಂಹದಂತೆ ಏಕಾಕಿಯಾಗಿ ಕೌರವರನ್ನು ಎದುರಿಸಿ ನಿಂತನು. ॥ ೬ ॥ ಕರ್ಣನನ್ನು ಮುಂದಾಳಾಗಿಟ್ಟುಕೊಂಡು ಕೌರವವೀರರು ಧನುಸ್ಸನ್ನೆತ್ತಿಕೊಂಡು ಸಾಂಬನ ಬಳಿಗೆ ಬಂದು, ಅವನನ್ನು ಹಿಡಿಯಲಿಕ್ಕಾಗಿ ನಿಲ್ಲು! ನಿಲ್ಲು! ಎಂದು ಕೂಗುತ್ತಾ ಪರಮಕ್ರುದ್ಧರಾಗಿ ಅವನ ಮೇಲೆ ಬಾಣಗಳ ಮಳೆಯನ್ನೇ ಸುರಿಸಿದರು. ॥ ೭ ॥ ಪರೀಕ್ಷಿತನೇ! ಯದುನಂದನ ಸಾಂಬನು ಅಚಿಂತ್ಯಮಹಿಮೆಯುಳ್ಳ ಭಗವಾನ್ ಶ್ರೀಕೃಷ್ಣನ ಪುತ್ರನಾಗಿದ್ದನು. ಕೌರವರ ಪ್ರಹಾರಗಳಿಂದ ಅವನು ಕ್ಷುದ್ರಮೃಗಗಳಿಂದ ಆಕ್ರಮಿಸಲ್ಪಟ್ಟ ಸಿಂಹದಂತೆ ಕೆರಳಿ ಪರಮಕ್ರುದ್ಧನಾದನು. ॥ ೮ ॥ ಸಾಂಬನು ತನ್ನ ಸುಂದರವಾದ ಧನುಸ್ಸನ್ನು ಟಂಕಾರಮಾಡಿ ಬೇರೆ-ಬೇರೆ ರಥಗಳಲ್ಲಿದ್ದ ಕರ್ಣನೇ ಮೊದಲಾದ ಆರು ವೀರರ ಮೇಲೆ ಒಂದೇ ಬಾರಿಗೆ ಆರಾರು ಬಾಣಗಳನ್ನು ಪ್ರತ್ಯೇಕ-ಪ್ರತ್ಯೇಕವಾಗಿ ಪ್ರಯೋಗಿಸಿದನು. ॥ ೯ ॥ ಅವುಗಳಲ್ಲಿ ನಾಲ್ಕು-ನಾಲ್ಕು ಬಾಣಗಳು ಕುದುರೆಗಳ ಮೇಲೂ, ಒಂದೊಂದು ಬಾಣಗಳನ್ನು ಸಾರಥಿಗಳ ಮೇಲೂ, ಒಂದೊಂದು ಬಾಣವನ್ನು ಆ ಆರುಮಂದಿ ಧನುಷ್ಮಂತರಾದ ಮಹಾರಥಿಗಳ ಮೇಲೂ ಪ್ರಯೋಗಿಸಿದನು. ಸಾಂಬನ ಈ ಅದ್ಭುತವಾದ ಕರಕೌಶಲ್ಯವನ್ನು ಕಂಡು ವೀರರೂ ಕೂಡ ಮುಕ್ತಕಂಠದಿಂದ ಅವನನ್ನು ಪ್ರಶಂಸಿಸಿದರು. ॥ ೧೦ ॥ ಬಳಿಕ ಕುಪಿತರಾದ ಆ ಆರುಮಂದಿ ವೀರರು ಒಟ್ಟಿಗೆ ಸೇರಿ ಸಾಂಬನನ್ನು ರಥಹೀನನನ್ನಾಗಿಸಿದರು. ನಾಲ್ಕು ವೀರರು ಒಂದೊಂದು ಬಾಣದಿಂದ ಅವನ ಕುದುರೆಗಳನ್ನು ಕೊಂದು ಹಾಕಿದರು. ಒಬ್ಬನು ಸಾರಥಿಯನ್ನು ಕೊಂದು ಮತ್ತೊಬ್ಬನು ಸಾಂಬನ ಧನುಸ್ಸನ್ನು ತುಂಡರಿಸಿದನು. ॥ ೧೧ ॥

ತಂ ಬದ್ಧ್ವಾ ವಿರಥೀಕೃತ್ಯ ಕೃಚ್ಛ್ರೇಣ ಕುರವೋ ಯುಧಿ ।
ಕುಮಾರಂ ಸ್ವಸ್ಯ ಕನ್ಯಾಂ ಚ ಸ್ವಪುರಂ ಜಯಿನೋಽವಿಶನ್
॥ ೧೨ ॥

ತಚ್ಛ್ರುತ್ವಾ ನಾರದೋಕ್ತೇನ ರಾಜನ್ ಸಂಜಾತಮನ್ಯವಃ ।
ಕುರೂನ್ ಪ್ರತ್ಯುದ್ಯಮಂ ಚಕ್ರುರುಗ್ರಸೇನಪ್ರಚೋದಿತಾಃ
॥ ೧೩ ॥

ಸಾಂತ್ವಯಿತ್ವಾ ತು ತಾನ್ ರಾಮಃ ಸಂನದ್ಧಾನ್ ವೃಷ್ಣಿಪುಂಗವಾನ್ ।
ನೈಚ್ಛತ್ಕುರೂಣಾಂ ವೃಷ್ಣೀನಾಂ ಕಲಿಂ ಕಲಿಮಲಾಪಹಃ
॥ ೧೪ ॥

ಜಗಾಮ ಹಾಸ್ತಿನಪುರಂ ರಥೇನಾದಿತ್ಯವರ್ಚಸಾ ।
ಬ್ರಾಹ್ಮಣೈಃ ಕುಲವೃದ್ಧೈಶ್ಚ ವೃತಶ್ಚಂದ್ರ ಇವ ಗ್ರಹೈಃ
॥ ೧೫ ॥

ಗತ್ವಾ ಗಜಾಹ್ವಯಂ ರಾಮೋ ಬಾಹ್ಯೋಪವನಮಾಸ್ಥಿತಃ ।
ಉದ್ಧವಂ ಪ್ರೇಷಯಾಮಾಸ ಧೃತರಾಷ್ಟ್ರಂ ಬುಭುತ್ಸಯಾ
॥ ೧೬ ॥

ಸೋಽಭಿವಂದ್ಯಾಂಬಿಕಾಪುತ್ರಂ
ಭೀಷ್ಮಂ ದ್ರೋಣಂ ಚ ಬಾಹ್ಲಿಕಮ್ ।
ದುರ್ಯೋಧನಂ ಚ ವಿಧಿವದ್ರಾ-
ಮಮಾಗತಮಬ್ರವೀತ್ ॥ ೧೭ ॥

ತೇಽತಿಪ್ರೀತಾಸ್ತಮಾಕರ್ಣ್ಯ ಪ್ರಾಪ್ತಂ ರಾಮಂ ಸುಹೃತ್ತಮಮ್ ।
ತಮರ್ಚಯಿತ್ವಾಭಿಯಯುಃ ಸರ್ವೇ ಮಂಗಲಪಾಣಯಃ
॥ ೧೮ ॥

ತಂ ಸಂಗಮ್ಯ ಯಥಾನ್ಯಾಯಂ ಗಾಮರ್ಘ್ಯಂ ಚ ನ್ಯವೇದಯನ್ ।
ತೇಷಾಂ ಯೇ ತತ್ಪ್ರಭಾವಜ್ಞಾಃ ಪ್ರಣೇಮುಃ ಶಿರಸಾ ಬಲಮ್
॥ ೧೯ ॥

ಬಂಧೂನ್ ಕುಶಲಿನಃ ಶ್ರುತ್ವಾ ಪೃಷ್ಟ್ವಾ ಶಿವಮನಾಮಯಮ್ ।
ಪರಸ್ಪರಮಥೋ ರಾಮೋ ಬಭಾಷೇಽವಿಕ್ಲವಂ ವಚಃ
॥ ೨೦ ॥

ಉಗ್ರಸೇನಃ ಕ್ಷಿತೀಶೇಶೋ ಯದ್ವ ಆಜ್ಞಾಪಯತ್ಪ್ರಭುಃ ।
ತದವ್ಯಗ್ರಧಿಯಃ ಶ್ರುತ್ವಾ ಕುರುಧ್ವಂ ಮಾವಿಲಂಬಿತಮ್
॥ ೨೧ ॥

ಯದ್ಯೂಯಂ ಬಹವಸ್ತ್ವೇಕಂ ಜಿತ್ವಾಧರ್ಮೇಣ ಧಾರ್ಮಿಕಮ್ ।
ಅಬಧ್ನೀತಾಥ ತನ್ಮೃಷ್ಯೇ ಬಂಧೂನಾಮೈಕ್ಯಕಾಮ್ಯಯಾ
॥ ೨೨ ॥

ಈ ಪ್ರಕಾರವಾಗಿ ಕೌರವರು ಯುದ್ಧದಲ್ಲಿ ಬಹಳ ಕಷ್ಟಪಟ್ಟು ಸಾಂಬನನ್ನು ರಥವಿಹೀನನನ್ನಾಗಿಸಿ ಬಂಧಿಸಿದರು. ಅನಂತರ ಅವನನ್ನೂ ಹಾಗೂ ತಮ್ಮ ಮಗಳಾದ ಲಕ್ಷ್ಮಣೆಯನ್ನೂ ಕರಕೊಂಡು ಹಸ್ತಿನಾವತಿಗೆ ಮರಳಿದರು. ॥ ೧೨ ॥

ಪರೀಕ್ಷಿತನೇ ! ನಾರದ ಮಹರ್ಷಿಗಳಿಂದ ಈ ಸಮಾಚಾರವನ್ನು ಕೇಳಿದ ಯಾದವವೀರರು ಪರಮಕ್ರುದ್ಧರಾದರು. ಅವರು ಉಗ್ರಸೇನ ಮಹಾರಾಜರ ಪ್ರೇರಣೆಯಂತೆ ಕೌರವರೊಡನೆ ಯುದ್ಧಮಾಡಲು ಸಿದ್ಧರಾದರು. ॥ ೧೩ ॥ ಕಲಹ ಪ್ರಧಾನವಾದ ಕಲಿಯುಗದ ಸಮಸ್ತ ಪಾಪಗಳನ್ನು ಹೋಗಲಾಡಿಸುವುದರಲ್ಲಿ ಅತ್ಯಂತ ಸಮರ್ಥನಾದ ಬಲರಾಮನಿಗೆ ವೃಷ್ಣಿ-ಕೌರವರೊಳಗೆ ಯುದ್ಧವಾಗುವುದು ಇಷ್ಟವಾಗಲಿಲ್ಲ. ಯದುವಂಶೀಯರು ಯುದ್ಧದ ಸಿದ್ಧತೆಮಾಡಿಕೊಂಡಿದ್ದರು. ಅವರನ್ನು ಸಮಾಧಾನ ಪಡಿಸಿ, ಸೂರ್ಯನ ತೇಜಸ್ಸಿಗೆ ಸಮಾನವಾದ ರಥದಲ್ಲಿ ಕುಳಿತು ಗ್ರಹಗಳಿಂದ ಪರಿವೃತನಾದ ಚಂದ್ರನಂತೆ ಬ್ರಾಹ್ಮಣರಿಂದಲೂ, ಕುಲವೃದ್ಧರಿಂದಲೂ ಕೂಡಿಕೊಂಡು ಹಸ್ತಿನಾವತಿಗೆ ಪ್ರಯಾಣ ಮಾಡಿದನು. ॥ ೧೪-೧೫ ॥ ಹಸ್ತಿನಾಪುರಕ್ಕೆ ತಲುಪಿ ನಗರದ ಹೊರ ಉದ್ಯಾನದಲ್ಲಿ ತಂಗಿದ ಬಲರಾಮನು ಕೌರವರ ಆಶಯ ವೇನೆಂಬುದನ್ನು ತಿಳಿಯಲು ಉದ್ಧವನನ್ನು ಧೃತರಾಷ್ಟ್ರನ ಬಳಿಗೆ ಕಳಿಸಿಕೊಟ್ಟನು. ॥ ೧೬ ॥

ಉದ್ಧವನು ಕೌರವರ ರಾಜಸಭೆಗೆ ಹೋಗಿ ಧೃತರಾಷ್ಟ್ರ, ಭೀಷ್ಮ, ದ್ರೋಣ, ಬಾಹ್ಲಿಕ, ದುರ್ಯೋಧನ ಇವರನ್ನು ಯಥಾಯೋಗ್ಯ ವಾಗಿ ಅಭಿನಂದಿಸಿ ಬಲರಾಮನು ಬಂದಿರುವ ವಾರ್ತೆಯನ್ನು ತಿಳಿಸಿದನು. ॥ ೧೭ ॥ ತಮಗೆ ಪರಮ ಹಿತೈಷಿಯೂ, ಪ್ರಿಯ ತಮನೂ ಆದ ಬಲರಾಮನ ಬರವನ್ನು ಕೇಳಿ ಕೌರವರು ಆನಂದ ಗೊಂಡರು. ಅವರು ಉದ್ಧವನನ್ನು ಸತ್ಕರಿಸಿ, ಬಲರಾಮನನ್ನು ಸ್ವಾಗತಿಸಲು ಮಂಗಳ ದ್ರವ್ಯಗಳನ್ನೆತ್ತಿಕೊಂಡು ಅವನಿದ್ದಲ್ಲಿಗೆ ಬಂದರು. ॥ ೧೮ ॥ ಬಲರಾಮನನ್ನು ಕಂಡು ಕೌರವ ಪ್ರಮುಖರು ಅವನಿಗೆ ಯಥಾವಿಧಿಯಾಗಿ ಗೋವನ್ನು ಅರ್ಪಿಸಿ, ಅರ್ಘ್ಯ ಪಾದ್ಯಾದಿಗಳಿಂದ ಅವನನ್ನು ಸತ್ಕರಿಸಿದರು. ಅವನ ಪ್ರಭಾವವನ್ನು ಚೆನ್ನಾಗಿ ತಿಳಿದಿದ್ದ ಕೌರವ ಪ್ರಮುಖರು ಬಲರಾಮನಿಗೆ ತಲೆಬಾಗಿ ನಮಸ್ಕರಿಸಿದರು. ॥ ೧೯ ॥ ಅನಂತರ ಅವರೆಲ್ಲರೂ ಪರಸ್ಪರ ಕುಶಲಪ್ರಶ್ನೆಗಳನ್ನು ಮಾಡಿ ಜ್ಞಾತಿ-ಬಂಧುಗಳಲ್ಲಿ ಪ್ರತಿಯೊಬ್ಬರ ಯೋಗ-ಕ್ಷೇಮವನ್ನು ವಿಚಾರಿಸಿದ ಬಳಿಕ ಬಲರಾಮನು ಗಂಭೀರವಾಗಿ ದಿಟ್ಟತನದಿಂದಲೇ, ಹೀಗೆ ಹೇಳಿದನು. ॥ ೨೦ ॥ ಸರ್ವಸಮರ್ಥನಾದ ಉಗ್ರಸೇನ ಮಹಾರಾಜನು ನಿಮಗೆ ಆಜ್ಞೆ ಯನ್ನು ಕಳಿಸಿರುವನು. ನೀವೆಲ್ಲರೂ ಏಕಾಗ್ರತೆಯಿಂದಲೂ ಸಾವ ಧಾನತೆಯಿಂದಲೂ ಕೇಳಿರಿ ಹಾಗೂ ವಿಳಂಬವಿಲ್ಲದೆ ಅದನ್ನು ಪಾಲಿಸಿರಿ. ॥ ೨೧ ॥ ಉಗ್ರಸೇನನು ಹೇಳಿರುವನು - ಹಲವಾರು ಮಂದಿ ಮಹಾರಥರು ಒಟ್ಟಿಗೆ ಸೇರಿ ಏಕಾಕಿಯಾಗಿದ್ದ ಧಾರ್ಮಿಕ ನಾದ ಸಾಂಬನನ್ನು ಅಧರ್ಮದಿಂದ ಪರಾಜಯಗೊಳಿಸಿ ಬಂಧಿ ಸಿರಿವಿರಿ. ಬಂಧುಗಳಲ್ಲಿ ಪರಸ್ಪರ ಐಕ್ಯಮತ್ಯವಿರಬೇಕೆಂಬ ಆಶಯ

ವೀರ್ಯಶೌರ್ಯಬಲೋನ್ನದ್ಧಮಾತ್ಮಶಕ್ತಿಸಮಂ ವಚಃ ।
ಕುರವೋ ಬಲದೇವಸ್ಯ ನಿಶಮ್ಯೋಚುಃ ಪ್ರಕೋಪಿತಾಃ
॥ ೨೩ ॥

ಅಹೋ ಮಹಚ್ಚಿತ್ರಮಿದಂ ಕಾಲಗತ್ಯಾ ದುರತ್ಯಯಾ ।
ಆರುರುಕ್ಷತ್ಯುಪಾನದ್ವೈ ಶಿರೋ ಮುಕುಟಸೇವಿತಮ್
॥ ೨೪ ॥

ಏತೇ ಯೌನೇನ ಸಂಬದ್ಧಾಃ ಸಹಶಯ್ಯಾಸನಾಶನಾಃ ।
ವೃಷ್ಣಯಸ್ತುಲ್ಯತಾಂ ನೀತಾ ಅಸ್ಮದ್ದತ್ತನೃಪಾಸನಾಃ
॥ ೨೫ ॥

ಚಾಮರವ್ಯಜನೇ ಶಂಖಮಾತಪತ್ರಂ ಚ ಪಾಂಡುರಮ್ ।
ಕಿರೀಟಮಾಸನಂ ಶಯ್ಯಾಂ ಭುಂಜಂತ್ಯಸ್ಮದುಪೇಕ್ಷಯಾ
॥ ೨೬ ॥

ಅಲಂ ಯದೂನಾಂ ನರದೇವಲಾಂಛನೈ-
ರ್ದಾತುಃ ಪ್ರತೀಪೈಃ ಫಣಿನಾಮಿವಾಮೃತಮ್ ।
ಯೇಽಸ್ಮತ್ಪ್ರಸಾದೋಪಚಿತಾ ಹಿ ಯಾದವಾ
ಆಜ್ಞಾಪಯಂತ್ಯದ್ಯ ಗತತ್ರಪಾ ಬತ ॥ ೨೭ ॥

ಕಥಮಿಂದ್ರೋಽಪಿ ಕುರುಭಿರ್ಭೀಷ್ಮದ್ರೋಣಾರ್ಜುನಾದಿಭಿಃ ।
ಅದತ್ತಮವರುಂಧೀತ ಸಿಂಹಗ್ರಸ್ತಮಿವೋರಣಃ
॥ ೨೮ ॥

ಶ್ರೀಶುಕ ಉವಾಚ

ಜನ್ಮಬಂಧುಶ್ರಿಯೋನ್ನದ್ಧಮದಾಸ್ತೇ ಭರತರ್ಷಭ ।
ಆಶ್ರಾವ್ಯ ರಾಮಂ ದುರ್ವಾಚ್ಯಮಸಭ್ಯಾಃ ಪುರಮಾವಿಶನ್
॥ ೨೯ ॥

ದಿಂದ ಈ ತಿರಸ್ಕಾರವನ್ನು ಇಷ್ಟರವರೆಗೆ ನಾವು ಸಹಿಸಿಕೊಂಡೆವು. ಸಾಂಬನನ್ನು ಕೂಡಲೇ ಬಿಡುಗಡೆ ಮಾಡಿ ನವವಧುವಿನೊಡನೆ ಅವನನ್ನು ಕಳಿಸಿಕೊಡದೆ ಇದ್ದರೆ ನಮ್ಮ ಸ್ನೈರಣೆಯು ಹೀಗೆಯೇ ಉಳಿಯಲಾರದು. ॥ ೨೨ ॥

ಪರೀಕ್ಷಿತನೇ! ಬಲರಾಮನ ವಾಣಿಯು ಆತನ ವೀರ್ಯ ಶೌರ್ಯ-ಬಲ-ಪೌರುಷ-ಉತ್ಸಾಹ ಮತ್ತು ಶಕ್ತಿಗಳಿಗೆ ಅನುರೂಪ ವಾಗಿತ್ತು. ಬಲರಾಮನ ನಿಷ್ಠುರವಾದ ಈ ಮಾತನ್ನು ಕೇಳಿ ಕುಪಿತ ರಾದ ಕೌರವರು ಆತನಲ್ಲಿ ಹೇಳಿದರು – ॥ ೨೩ ॥ ನಿಶ್ಚಯ ವಾಗಿಯೂ ಇದು ಎಂತಹ ಆಚ್ಚರಿಯ ಸಂಗತಿ! ಮೀರಿನಡೆಯಲು ಅಸಾಧ್ಯವಾದ ಕಾಲಗತಿಯಿಂದಾಗಿ ಕಾಲಿನಲ್ಲಿರಬೇಕಾದ ಪಾದ ರಕ್ಷೆಯು ಕಿರೀಟವಿರುವ ತಲೆಯನ್ನೇರಲು ಹವಣಿಸುತ್ತಿದೆಯಲ್ಲ! ॥ ೨೪ ॥ ಯದುವಂಶೀಯರು ರಾಜಮನೆತನಕ್ಕೆ ಸೇರಿದವರಲ್ಲವಾದರೂ ನಾವು ಇವರೊಡನೆ ವಿವಾಹ ಸಂಬಂಧವನ್ನು ಬೆಳೆಸಿದೆವು. ಇದ ರಿಂದ ಇವರು ನಮ್ಮೊಂದಿಗೆ ಮಲಗುವುದು-ಕುಳಿತುಕೊಳ್ಳುವುದು ಮತ್ತು ಸಹಪಂಕ್ತಿಭೋಜನವನ್ನು ಮಾಡತೊಡಗಿದರು. ಇವರಿಗೆ ನಾವೇ ರಾಜಸಿಂಹಾಸನವನ್ನಿತ್ತು ನಮಗೆ ಸಮಾನರನ್ನಾಗಿ ಸಿದೆವು. ॥ ೨೫ ॥ ಈ ಯದುವಂಶೀಯರು ರಾಜೋಚಿತವಾದ ಚಾಮರ, ವ್ಯಜನ, ಶಂಖ, ಶ್ವೇತಚ್ಛತ್ರ, ಕಿರೀಟ, ರಾಜಸಿಂಹಾಸನ, ರಾಜೋಚಿತವಾದ ಹಂಸತೂಲಿಕಾತಲ್ಪ – ಹೀಗೆ ಎಲ್ಲವನ್ನು ಉಪಭೋಗಿಸುತ್ತಿದ್ದಾರೆ. ನಾವುಗಳು ಬೇಕೆಂತಲೇ ಈ ವಿಷಯದಲ್ಲಿ ಉಪೇಕ್ಷೆಯಿಂದ ಇದ್ದೇವೆ. ॥ ೨೬ ॥ ಇನ್ನು ಸಾಕು! ಸಾಕು! ಯದುವಂಶೀಯರಲ್ಲಿ ರಾಜಚಿಹ್ನೆಗಳು ಇರುವುದು ಆವಶ್ಯಕತೆ ಯಿಲ್ಲ, ಅದನ್ನು ಕಿತ್ತುಕೊಳ್ಳಲೇಬೇಕು. ಹಾವಿಗೆ ಹಾಲುಣಿಸು ವವನಿಗೇ ಘಾತಕವಾಗುವಂತೆಯೇ ನಾವು ಕೊಟ್ಟಿರುವ ರಾಜಚಿಹ್ನೆ ಗಳನ್ನು ಪಡೆದು ಈ ಯದುವಂಶೀಯರು ನಮಗೆ ಪ್ರತಿಕಾರ ಮಾಡುತ್ತಿದ್ದಾರಲ್ಲ! ಅಯ್ಯೋ! ನಮ್ಮ ಅನುಗ್ರಹದಿಂದಲೇ ಅಭಿವೃದ್ಧಿಯನ್ನು ಹೊಂದಿದ ಇವರು ನಿರ್ಲಜ್ಜರಾಗಿ ನಮಗೆ ಆಜ್ಞೆ ಮಾಡುವ ಮಟ್ಟಕ್ಕೆ ಬಂದಿರುವರಲ್ಲ! ॥ ೨೭ ॥ ಸಿಂಹದ ಪಾಲನ್ನು ಕುರಿಮರಿಯು ಹೇಗೆ ಕಿತ್ತುಕೊಳ್ಳಲಾರದೋ ಹಾಗೆಯೇ ಭೀಷ್ಮ ದ್ರೋಣಾರ್ಜುನರೇ ಮೊದಲಾದ ಕೌರವರು ಬಿಟ್ಟುಕೊಡದೇ ಇರುವ ವಸ್ತುವನ್ನು ದೇವೇಂದ್ರನಾದರೂ ಹೇಗೆ ತಾನೇ ಕಸಿದು ಕೊಂಡು ಹೋದಾನು? ಹಾಗಿರುವಾಗ ಸಾಂಬನನ್ನು ಬಿಡಿಸಿ ಕೊಂಡು ಹೋಗುವುದು ಯಾದವರಿಗೆ ಹೇಗೆ ಸಾಧ್ಯವಾಗು ವುದು? ॥ ೨೮ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿದ್ರಾಜನೇ! ಕೌರವರು ತಮ್ಮ ಕುಲೀನತೆಯಿಂದ, ತಮಗಿದ್ದ ಮಹಾಶೂರರಾದ ಬಂಧುವರ್ಗದವರಿಂದ, ಬಲದಿಂದ, ಸಂಪತ್ತಿನಿಂದ ಮದೋದ್ಧತ ರಾಗಿ ಬಿಟ್ಟಿರುವರು. ಅವರು ಸಾಧಾರಣ ಶಿಷ್ಟಾಚಾರವನ್ನು ಲೆಕ್ಕಿಸದೆ ಅಸಭ್ಯವರ್ತನೆಯಿಂದ ಕೂಡಿದವರಾಗಿ ಬಲರಾಮನೊಂದಿಗೆ ಇಂತಹ ದುರ್ವಚನಗಳನ್ನಾಡಿ ಹಸ್ತಿನಾಪುರಕ್ಕೆ ಹಿಂದಿರುಗಿ ದರು. ॥ ೨೯ ॥

ದೃಷ್ಟ್ವಾ ಕುರೂಣಾಂ ದೌಃಶೀಲ್ಯಂ ಶ್ರುತ್ವಾವಾಚ್ಯಾನಿ ಚಾಚ್ಯುತಃ ।
ಅವೋಚತ್ಕೋಪಸಂರಬ್ಧೋ ದುಷ್ಪ್ರೇಕ್ಷ್ಯಃ ಪ್ರಹಸನ್ಮುಹುಃ
॥ ೩೦ ॥

ನೂನಂ ನಾನಾಮದೋನ್ನದ್ಧಾಃ ಶಾಂತಿಂ ನೇಚ್ಛಂತ್ಯಸಾಧವಃ ।
ತೇಷಾಂ ಹಿ ಪ್ರಶಮೋ ದಂಡಃ ಪಶೂನಾಂ ಲಗುಡೋ ಯಥಾ
॥ ೩೧ ॥

ಅಹೋ ಯದೂನ್ಸುಸಂರಬ್ಧಾನ್ ಕೃಷ್ಣಂ ಚ ಕುಪಿತಂ ಶನೈಃ ।
ಸಾಂತ್ವಯಿತ್ವಾಹಮೇತೇಷಾಂ ಶಮಮಿಚ್ಛನ್ನಿಹಾಗತಃ
॥ ೩೨ ॥

ತ ಇಮೇ ಮಂದಮತಯಃ ಕಲಹಾಭಿರತಾಃ ಖಲಾಃ ।
ತಂ ಮಾಮವಜ್ಞಾಯ ಮುಹುರ್ದು-
ರ್ಭಾಷಾನ್ ಮಾನಿನೋಽಬ್ರುವನ್
॥ ೩೩ ॥

ನೋಗ್ರಸೇನಃ ಕಿಲ ವಿಭುರ್ಭೋಜವೃಷ್ಣ್ಯಂಧಕೇಶ್ವರಃ ।
ಶಕ್ರಾದಯೋ ಲೋಕಪಾಲಾ ಯಸ್ಯಾದೇಶಾನುವರ್ತಿನಃ
॥ ೩೪ ॥

ಸುಧರ್ಮಾಽಽಕ್ರಮ್ಯತೇ ಯೇನ ಪಾರಿಜಾತೋಽಮರಾಂಘ್ರಿಪಃ ।
ಆನೀಯ ಭುಜ್ಯತೇ ಸೋಽಸೌ ನ ಕಿಲಾಧ್ಯಾಸನಾರ್ಹಣಃ
॥ ೩೫ ॥

ಯಸ್ಯ ಪಾದಯುಗಂ ಸಾಕ್ಷಾತ್ ಶ್ರೀರುಪಾಸ್ತೇಽಖಿಲೇಶ್ವರೀ ।
ಸ ನಾರ್ಹತಿ ಕಿಲ ಶ್ರೀಶೋ ನರದೇವಪರಿಚ್ಛದಾನ್
॥ ೩೬ ॥

ಯಸ್ಯಾಂಘ್ರಿಪಂಕಜರಜೋಽಖಿಲಲೋಕಪಾಲೈ-
ರ್ಮೌಲ್ಯುತ್ತಮೈರ್ಧೃತಮುಪಾಸಿತತೀರ್ಥತೀರ್ಥಮ್ ।
ಬ್ರಹ್ಮಾ ಭವೋಽಹಮಪಿ ಯಸ್ಯ ಕಲಾಃ ಕಲಾಯಾಃ
ಶ್ರೀಶ್ಚೋದ್ವಹೇಮ ಚಿರಮಸ್ಯ ನೃಪಾಸನಂ ಕ್ವ ॥ ೩೭ ॥

ಭುಂಜತೇ ಕುರುಭಿರ್ದತ್ತಂ ಭೂಖಂಡಂ ವೃಷ್ಣಯಃ ಕಿಲ ।
ಉಪಾನಹಃ ಕಿಲ ವಯಂ ಸ್ವಯಂ ತು ಕುರವಃ ಶಿರಃ
॥ ೩೮ ॥

ಬಲರಾಮನು ಕೌರವರ ದುಷ್ಟತೆಯನ್ನೂ ಅಶಿಷ್ಟತೆಯನ್ನು ನೋಡಿ, ದುರ್ವಚನಗಳನ್ನು ಕೇಳಿ ಅವನು ಕೆರಳಿ ಕೋಪದಿಂದ ಕಿಡಿ-ಕಿಡಿಯಾದನು. ಅವನನ್ನು ನೋಡಲೂ ಕೂಡ ಆಗುತ್ತಿರಲಿಲ್ಲ. ಪುನಃ ಪುನಃ ಗಟ್ಟಿಯಾಗಿ ನಗುತ್ತಾ ಹೇಳತೊಡಗಿದನು - ॥ ೩೦ ॥ ನಿಜ ! ಅಸತ್ಪುರುಷರು ಕುಲಮದ, ಧನಮದ, ವೀರ್ಯಮದ ಮೊದಲಾದ ಮದಗಳಿಂದ ಕೊಬ್ಬಿದವರಾಗಿ ಶಾಂತಿಯನ್ನು ಬಯಸುವುದಿಲ್ಲ. ಪಶುಗಳನ್ನು ಹತೋಟಿಯಲ್ಲಿಡಲು ದೊಣ್ಣೆಯೇ ಆವಶ್ಯಕವಿರುವಂತೆ, ಇಂತಹ ದುಷ್ಟರನ್ನು ಹತೋಟಿಗೆ ತರಲು ದಂಡೋಪಾಯವೇ ಸೂಕ್ತವಾದುದು. ॥ ೩೧ ॥ ನೋಡಿರಲ್ಲ! ಎಲ್ಲ ಯದುವೀರರೂ ಮತ್ತು ಶ್ರೀಕಷ್ಣನೂ ಕೂಡ ಕೋಪಗೊಂಡು ಯುದ್ಧಕ್ಕೆ ಸಿದ್ಧರಾಗಿದ್ದರು. ನಾನು ಅವರೆಲ್ಲರನ್ನು ಸಮಾಧಾನಪಡಿಸಿ ಶಾಂತಿಯನ್ನು ಬಯಸಿ ಇಲ್ಲಿಗೆ ಬಂದೆನು. ॥ ೩೨ ॥ ಆದರೆ ಈ ಕೌರವರು ಶಾಂತಿಪ್ರಿಯರಲ್ಲ, ಮಂದಬುದ್ಧಿಯವರು. ಕಲಹಪ್ರಿಯರು. ನೀಚರು. ದುರಭಿಮಾನಿಗಳು. ನನ್ನನ್ನು ತಿರಸ್ಕರಿಸುತ್ತಾ ಕೆಟ್ಟ-ಕೆಟ್ಟ ಮಾತುಗಳನ್ನೇ ಆಡಿದರು. ॥ ೩೩ ॥ ಇಂದ್ರನೇ ಮೊದಲಾದ ಲೋಕಪಾಲರು ಯಾರ ಆದೇಶವನ್ನು ಶಿರಸಾವಹಿಸಿಕೊಂಡು ಪಾಲಿಸುವರೋ ಅಂತಹ ಭೋಜ, ವೃಷ್ಣಿ ಅಂಧಕವಂಶೀಯರಿಗೆ ರಾಜನಾದ ಉಗ್ರಸೇನ ಮಹಾರಾಜರು ರಾಜನಲ್ಲವಂತೆ! ಇದೆಂತಹ ಮಾತು ! ॥ ೩೪ ॥ ಯಾರು ಸುಧರ್ಮಾ ಎಂಬ ದೇವಸಭೆಯನ್ನಾಕ್ರಮಿಸಿ, ದೇವತಾವೃಕ್ಷವಾದ ಪಾರಿಜಾತವನ್ನು ಕಿತ್ತು ತಂದು ಅದರ ಫಲವನ್ನಿಲ್ಲಿ ಅನುಭವಿಸುತ್ತಿರುವನೋ ಅಂತಹ ಭಗವಾನ್ ಶ್ರೀಕೃಷ್ಣನು ರಾಜಸಿಂಹಾಸನಕ್ಕೆ ಅಧಿಕಾರಿಯಲ್ಲವಂತೆ ! ಇರಲಿ. ॥ ೩೫ ॥ ಸಮಸ್ತ ಜಗತ್ತಿಗೂ ಒಡೆಯಳಾದ ಭಗವತಿ ಲಕ್ಷ್ಮೀದೇವಿಯೇ ಯಾರ ಚರಣಕಮಲಗಳನ್ನು ಉಪಾಸಿಸುತ್ತಿರುವಳೋ ಅಂತಹ ಲಕ್ಷ್ಮೀಪತಿಯಾದ ಭಗವಾನ್ ಶ್ರೀಕೃಷ್ಣನಿಗೆ ರಾಜೋಚಿತವಾದ ಛತ್ರ, ಚಾಮರಾದಿಗಳು ಸಲ್ಲಿಸುವುದಿಲ್ಲವಂತೆ ! ॥ ೩೬ ॥ ಸರಿಯಪ್ಪಾ! ಸರಿ! ಯಾರ ಚರಣಕಮಲಗಳ ಧೂಳಿಯು ಸತ್ಪುರುಷರಿಂದ ಸೇವಿಸಲ್ಪಡುವ ಗಂಗೆಯೇ ಮೊದಲಾದ ತೀರ್ಥಗಳಿಗೂ ತೀರ್ಥರೂಪವಾಗಿರುವುದೋ ಅಂತಹ ಪಾದಧೂಳಿಯನ್ನು ಸಮಸ್ತ ಲೋಕಪಾಲರೂ ತಮ್ಮ-ತಮ್ಮ ಕಿರೀಟಗಳಲ್ಲಿ ಧರಿಸುವರೋ, ನಾನು, ಬ್ರಹ್ಮ, ಶಂಕರ, ಲಕ್ಷ್ಮೀದೇವಿ ಇವರೇ ಮೊದಲಾದ ವಿಭೂತಿಗಳು ಯಾರ ಅಂಶಾಂಶ ಭೂತರಾಗಿರುವೆವೋ ಹಾಗೂ ಯಾರ ಚರಣಧೂಳಿಯನ್ನು ಸದಾ ಶಿರದಲ್ಲಿ ಧರಿಸುವೆವೋ ಅಂತಹ ಶ್ರೀಕೃಷ್ಣನಿಗೆ ಸಿಂಹಾಸನದಲ್ಲಿ ಕುಳಿತುಕೊಳ್ಳುವ ಅರ್ಹತೆಯಿಲ್ಲವಂತೆ! ಎಂತಹ ಸೊಗಸಾದ ಮಾತು ! ॥ ೩೭ ॥ ಕೌರವರು ಕೊಟ್ಟಿರುವ ಭೂಮಿಯ ತುಂಡನ್ನು ಬಡಪಾಯಿಗಳಾದ ಯಾದವರು ಉಪಭೋಗಿಸುತ್ತಿದ್ದಾರಂತೆ. ನಾವು ಪಾದರಕ್ಷೆಗಳಂತೆ! ಕುರುಗಳು ತಲೆಯಂತೆ! ಎಂತಹ ಹೋಲಿಕೆ ! ॥ ೩೮ ॥

ಅಹೋ ಐಶ್ವರ್ಯಮತ್ತಾನಾಂ ಮತ್ತಾನಾಮಿವ ಮಾನಿನಾಮ್ ।
ಅಸಂಬದ್ಧಾ ಗಿರೋ ರೂಕ್ಷಾಃ ಕಃ ಸಹೇತಾನುಶಾಸಿತಾ ॥ ೩೯ ॥

ಅದ್ಯ ನಿಷ್ಕೌರವೀಂ ಪೃಥ್ವೀಂ ಕರಿಷ್ಯಾಮೀತ್ಯಮರ್ಷಿತಃ ।
ಗೃಹೀತ್ವಾ ಹಲಮುತ್ತಸ್ಥೌ ದಹನ್ನಿವ ಜಗತ್ತ್ರಯಮ್ ॥ ೪೦ ॥

ಲಾಂಗಲಾಗ್ರೇಣ ನಗರಮುದ್ವಿದಾರ್ಯ ಗಜಾಹ್ವಯಮ್ ।
ವಿಚಕರ್ಷ ಸ ಗಂಗಾಯಾಂ ಪ್ರಹರಿಷ್ಯನ್ನಮರ್ಷಿತಃ ॥ ೪೧ ॥

ಜಲಯಾನಮಿವಾಘೂರ್ಣಂ ಗಂಗಾಯಾಂ ನಗರಂ ಪತತ್ ।
ಆಕೃಷ್ಯಮಾಣಮಾಲೋಕ್ಯ ಕೌರವಾ ಜಾತಸಂಭ್ರಮಾಃ ॥ ೪೨ ॥

ತಮೇವ ಶರಣಂ ಜಗ್ಮುಃ ಸಕುಟುಂಬಾ ಜಿಜೀವಿಷವಃ ।
ಸಲಕ್ಷ್ಮಣಂ ಪುರಸ್ಕೃತ್ಯ ಸಾಂಬಂ ಪ್ರಾಂಜಲಯಃ ಪ್ರಭುಮ್ ॥ ೪೩ ॥

ರಾಮ ರಾಮಾಖಿಲಾಧಾರ ಪ್ರಭಾವಂ ನ ವಿದಾಮ ತೇ ।
ಮೂಢಾನಾಂ ನಃ ಕುಬುದ್ಧೀನಾಂ ಕ್ಷಂತುಮರ್ಹಸ್ಯತಿಕ್ರಮಮ್ ॥ ೪೪ ॥

ಸ್ಥಿತ್ಯುತ್ಪತ್ತ್ಯಪ್ಯಯಾನಾಂ ತ್ವಮೇಕೋ ಹೇತುರ್ನಿರಾಶ್ರಯಃ ।
ಲೋಕಾನ್ ಕ್ರೀಡನಕಾನೀಶ ಕ್ರೀಡತಸ್ತೇ ವದಂತಿ ಹಿ ॥ ೪೫ ॥

ತ್ವಮೇವ ಮೂರ್ಧ್ನೀದಮನಂತ ಲೀಲಯಾ
ಭೂಮಂಡಲಂ ಬಿಭರ್ಷಿ ಸಹಸ್ರಮೂರ್ಧನ್ ।
ಅಂತೇ ಚ ಯಃ ಸ್ವಾತ್ಮನಿ ರುದ್ಧವಿಶ್ವಃ
ಶೇಷೇಽದ್ವಿತೀಯಃ ಪರಿಶಿಷ್ಯಮಾಣಃ ॥ ೪೬ ॥

ಕೋಪಸ್ತೇಽಖಿಲಶಿಕ್ಷಾರ್ಥಂ ನ ದ್ವೇಷಾನ್ನ ಚ ಮತ್ಸರಾತ್ ।
ಬಿಭ್ರತೋ ಭಗವನ್ಸತ್ತ್ವಂ ಸ್ಥಿತಿಪಾಲನತತ್ಪರಃ ॥ ೪೭ ॥

ನಮಸ್ತೇ ಸರ್ವಭೂತಾತ್ಮನ್ ಸರ್ವಶಕ್ತಿಧರಾವ್ಯಯ ।
ವಿಶ್ವಕರ್ಮನ್ ನಮಸ್ತೇಽಸ್ತು ತ್ವಾಂ ವಯಂ ಶರಣಂ ಗತಾಃ ॥ ೪೮ ॥

ಐಶ್ವರ್ಯಮದದಿಂದ ಉನ್ಮತ್ತರಾಗಿ ದರ್ಪಿಷ್ಠರಾಗಿರುವ ಈ ಕೌರವರು ಹುಚ್ಚರಂತಾಗಿದ್ದಾರೆ. ಇವರ ಒಂದೊಂದು ಮಾತೂ ಕಠೋರವಾಗಿದೆ ಹಾಗೂ ತಲೆ-ಬುಡ ಇಲ್ಲದ್ದಾಗಿದೆ. ಇಂತಹವರನ್ನು ಶಿಕ್ಷಿಸಲು, ಇವರನ್ನು ದಂಡಿಸುವ ಸಾಮರ್ಥ್ಯವುಳ್ಳ ನನ್ನಂತಹವನು ಇಂತಹ ಮಾತುಗಳನ್ನು ಹೇಗೆ ತಾನೇ ಸಹಿಸಬಲ್ಲನು ? ॥ ೩೯ ॥ 'ಇಂದು ನಾನು ಭೂಮಂಡಲವನ್ನು ಕೌರವರಿಂದ ರಹಿತನನ್ನಾಗಿಸಿಬಿಡುತ್ತೇನೆ' ಎಂದೆನ್ನುತ್ತಾ ಅತ್ಯಂತ ಕ್ರುದ್ಧನಾದ ಬಲರಾಮನು ಮೂರು ಲೋಕಗಳನ್ನು ಸುಟ್ಟುಬಿಡುವನೋ ಎಂಬಂತೆ ಹಲಾಯುಧವನ್ನು ಹಿಡಿದು ಮೇಲಕ್ಕೆದ್ದನು. ॥ ೪೦ ॥ ಬಳಿಕ ಆತನು ನೇಗಿಲತುದಿಯಿಂದ ಹಸ್ತಿನಾಪಟ್ಟಣವನ್ನು ಕಿತ್ತು ಅದನ್ನು ಮುಳುಗಿಸಿಬಿಡಬೇಕೆಂದು ಗಂಗೆಯ ಕಡೆಗೆ ಸೆಳೆಯತೊಡಗಿದನು. ॥ ೪೧ ॥

ಹಲಾಯುಧದಿಂದ ಸೆಳೆಯಲ್ಪಟ್ಟಾಗ ಹಸ್ತಿನಾವತಿಯು ನೀರಿನಲ್ಲಿರುವ ದೋಣಿಯು ಅಲ್ಲಾಡುವಂತೆ ನಡುಗತೊಡಗಿತು. ತಮ್ಮ ನಗರವಾದರೋ ಗಂಗೆಯಲ್ಲಿ ಮುಳುಗುತ್ತಾ ಇದೆ; ಎಂದು ನೋಡಿದ ಕೌರವರು ಗಾಬರಿಗೊಂಡರು. ॥ ೪೨ ॥ ಮತ್ತೆ ಕೌರವರು ಲಕ್ಷ್ಮಣೆಯ ಜೊತೆಗೆ ಸಾಂಬನನ್ನು ಮುಂದೆ ಮಾಡಿಕೊಂಡು ತಮ್ಮ ಪ್ರಾಣಗಳನ್ನು ರಕ್ಷಿಸಿಕೊಳ್ಳಲಿಕ್ಕಾಗಿ ಕುಟುಂಬ ಸಹಿತ ಕೈ ಜೋಡಿಸಿಕೊಂಡು ಸರ್ವಶಕ್ತನಾದ ಭಗವಾನ್ ಬಲರಾಮನಿಗೆ ಶರಣಾಗಿ ಪ್ರಾರ್ಥಿಸಿದರು. ॥ ೪೩ ॥ ಲೋಕಾಭಿರಾಮನಾದ ಬಲರಾಮನೇ! ನೀನು ಸಮಸ್ತ ಜಗತ್ತಿಗೂ ಆಧಾರಭೂತನಾದ ಶೇಷನೇ ಆಗಿರುವೆ. ನಾವು ನಿನ್ನ ಪ್ರಭಾವವನ್ನು ತಿಳಿದವರಲ್ಲ, ನಾವು ನಿಶ್ಚಯವಾಗಿಯೂ ಮೂರ್ಖರು. ಕುತ್ಸಿತವಾದ ಬುದ್ಧಿಯುಳ್ಳವರು. ನಾವು ಮಾಡಿದ ಅಪರಾಧವನ್ನು ಕ್ಷಮಿಸಿಬಿಡು. ॥ ೪೪ ॥ ಪ್ರಭುವೇ! ನೀನು ಜಗತ್ತಿನ ಉತ್ಪತ್ತಿ, ಸ್ಥಿತಿ, ಲಯಗಳಿಗೆ ಏಕಮಾತ್ರ ಕಾರಣನಾಗಿರುವೆ. ನೀನು ನಿರಾಧಾರನು. ಲೋಕಗಳನ್ನೇ ಆಟಿಕೆಗಳನ್ನಾಗಿಸಿಕೊಂಡು ನೀನು ಆಟವಾಡುವೆಯೆಂದು ಜ್ಞಾನಿಗಳಾದ ಋಷಿ-ಮುನಿಗಳು ಹೇಳುತ್ತಾರೆ. ॥ ೪೫ ॥ ಅನಂತನೇ! ನಿನಗೆ ಸಾವಿರ ತಲೆಗಳಿವೆ. ನೀನು ಆಟವಾಡುತ್ತಲೇ ಈ ಅಖಂಡ ಭೂಮಂಡಲವನ್ನು ನಿನ್ನ ತಲೆಯಲ್ಲಿ ಧರಿಸಿರುವೆ. ಪ್ರಳಯಕಾಲವು ಸನ್ನಿಹಿತವಾದಾಗ ಸಮಸ್ತ ಜಗತ್ತನ್ನು ನಿನ್ನಲ್ಲಿಯೇ ಲೀನಗೊಳಿಸಿಕೊಳ್ಳುವೆ. ಆ ಸಮಯದಲ್ಲಿ ಉಳಿದಿರುವ ನೀನೊಬ್ಬನೇ ಅದ್ವಿತೀಯ ರೂಪದಿಂದ ಪವಡಿಸುವೆ. ॥ ೪೬ ॥ ಭಗವಂತನೇ! ನೀನು ಜಗತ್ತಿನ ಸ್ಥಿತಿ ಮತ್ತು ಪಾಲನೆಗಾಗಿ ಶುದ್ಧಸತ್ತ್ವಮಯವಾದ ಶರೀರವನ್ನು ಗ್ರಹಣಮಾಡುವೆ. ನಿನ್ನ ಈ ಕ್ರೋಧವು ದ್ವೇಷ ಅಥವಾ ಮತ್ಸರದ ಕಾರಣದಿಂದ ಉಂಟಾದುದಲ್ಲ, ಇದಾದರೋ ಸಮಸ್ತ ಪ್ರಾಣಿಗಳ ಶಿಕ್ಷಣಾರ್ಥವಾಗಿಯೇ ಇದೆ. ॥ ೪೭ ॥ ಸಮಸ್ತ ಶಕ್ತಿಗಳನ್ನು ಧರಿಸತಕ್ಕವನೇ! ಸಮಸ್ತ ಪ್ರಾಣಿಗಳ ಆತ್ಮಸ್ವರೂಪನೇ ಅವಿನಾಶಿಯೇ! ಭಗವಂತನೇ! ನಾವು ನಿನಗೆ ನಮಸ್ಕರಿಸುತ್ತೇವೆ. ಸಮಸ್ತ ವಿಶ್ವವನ್ನೂ ಸೃಷ್ಟಿಸುವ ದೇವನೇ! ನಾವು ಪುನಃ ಪುನಃ ನಿನಗೆ ನಮಸ್ಕರಿಸುತ್ತೇವೆ. ನಾವು ನಿನಗೆ ಶರಣಾಗಿದ್ದೇವೆ. ನೀನು ದಯಮಾಡಿ ನಮ್ಮನ್ನು ರಕ್ಷಿಸು. ॥ ೪೮ ॥

ಶ್ರೀಶುಕ ಉವಾಚ

ಏವಂ ಪ್ರಪನ್ನೈಃ ಸಂವಿಗ್ನೈರ್ವೇಪಮಾನಾಯನೈರ್ಬಲಃ ।
ಪ್ರಸಾದಿತಃ ಸುಪ್ರಸನ್ನೋ ಮಾ ಭೈಷ್ಟೇತ್ಯಭಯಂ ದದೌ
॥ ೪೯ ॥

ದುರ್ಯೋಧನಃ ಪಾರಿಬರ್ಹಂ ಕುಂಜರಾನ್ ಷಷ್ಟಿಹಾಯನಾನ್ ।
ದದೌ ಚ ದ್ವಾದಶಶತಾನ್ಯಯುತಾನಿ ತುರಂಗಮಾನ್
॥ ೫೦ ॥

ರಥಾನಾಂ ಷಟ್ ಸಹಸ್ರಾಣಿ ರೌಕ್ಮಾಣಾಂ ಸೂರ್ಯವರ್ಚಸಾಮ್ ।
ದಾಸೀನಾಂ ನಿಷ್ಕಕಂಠೀನಾಂ ಸಹಸ್ರಂ ದುಹಿತೃವತ್ಸಲಃ
॥ ೫೧ ॥

ಪ್ರತಿಗೃಹ್ಯ ತು ತತ್ಸರ್ವಂ ಭಗವಾನ್ ಸಾತ್ವತರ್ಷಭಃ ।
ಸಸುತಃ ಸಸ್ನುಷಃ ಪ್ರಾಗಾತ್ಸುಹೃದ್ಭಿರಭಿನಂದಿತಃ
॥ ೫೨ ॥

ತತಃ ಪ್ರವಿಷ್ಟಃ ಸ್ವಪುರಂ ಹಲಾಯುಧಃ
ಸಮೇತ್ಯ ಬಂಧೂನನುರಕ್ತಚೇತಸಃ ।
ಶಶಂಸ ಸರ್ವಂ ಯದುಪುಂಗವಾನಾಂ
ಮಧ್ಯೇ ಸಭಾಯಾಂ ಕುರುಷು ಸ್ವಚೇಷ್ಟಿತಮ್ ॥ ೫೩ ॥

ಅದ್ಯಾಪಿ ಚ ಪುರಂ ಹ್ಯೇತತ್ಸೂಚಯದ್ರಾಮವಿಕ್ರಮಮ್ ।
ಸಮುನ್ನತಂ ದಕ್ಷಿಣತೋ ಗಂಗಾಯಾಮನುದೃಶ್ಯತೇ
॥ ೫೪ ॥

ಶ್ರೀಶುಕಮಹಾಮುನಿಗಳು ಹೇಳುತ್ತಾರೆ - ಪರೀಕ್ಷಿತನೇ! ಕೌರವರ ಗಜಪುರಿಯು ನಡುಗುತ್ತಾ ಇದ್ದು ಅವರು ಅತ್ಯಂತ ಗಾಬರಿಗೊಂಡಿದ್ದರು. ಸಮಸ್ತ ಕುರುವಂಶೀಯರು ಹೀಗೆ ಭಗವಾನ್ ಬಲರಾಮನಿಗೆ ಶರಣಾಗಿ, ಅವನನ್ನು ಪ್ರಾರ್ಥಿಸಿದಾಗ ಅವನು ಪ್ರಸನ್ನನಾಗಿ - 'ಹೆದರಬೇಡಿರಿ' ಎಂದು ಹೇಳಿ ಅವರಿಗೆ ಅಭಯವನ್ನು ನೀಡಿದನು. ॥ ೪೯ ॥ ಪರೀಕ್ಷಿತನೇ! ಅನಂತರ ಮಗಳನ್ನು ಬಹಳವಾಗಿ ಪ್ರೀತಿಸುತ್ತಿದ್ದ ದುರ್ಯೋಧನನು ಅರವತ್ತು ವರ್ಷವಯಸ್ಸಿನ ಹನ್ನೆರಡು ನೂರು ಆನೆಗಳನ್ನು, ಹತ್ತ ಸಾವಿರ ಕುದುರೆಗಳನ್ನು, ಸೂರ್ಯನಂತೆ ಹೊಳೆಯುವ ಚಿನ್ನದ ಆರು ಸಾವಿರ ರಥಗಳನ್ನು ಮತ್ತು ಸುವರ್ಣ ಹಾರಗಳಿಂದ ಸಮಲಂಕೃತೆ ಯರಾದ ಒಂದು ಸಾವಿರ ದಾಸಿಯರನ್ನು ಮಗಳಿಗೆ ಬಳುವಳಿ ಯಾಗಿ ಕೊಟ್ಟನು. ॥ ೫೦-೫೧ ॥ ಯದುವಂಶ ಶಿರೋಮಣಿ ಯಾದ ಬಲರಾಮನು ಸಮಸ್ತವಾದ ಬಳುವಳಿಯನ್ನು ಸ್ವೀಕರಿಸಿ ಲಕ್ಷ್ಮಣೆ ಮತ್ತು ಸಾಂಬರೊಂದಿಗೆ ಕೌರವರ ಅಭಿನಂದನೆಗಳನ್ನು ಸ್ವೀಕರಿಸಿ ದ್ವಾರಕೆಗೆ ಪ್ರಯಾಣ ಬೆಳೆಸಿದನು. ॥ ೫೨ ॥

ಬಲರಾಮನು ದ್ವಾರಕೆಗೆ ಹೋಗಿ ತನ್ನಲ್ಲಿಯೇ ಅನುರಕ್ತ ರಾಗಿದ್ದ ಹಾಗೂ ಸಮಾಚಾರವನ್ನು ತಿಳಿಯಲು ಉತ್ಸುಕರಾದ ಬಂಧುಗಳೊಡನೆ ಸೇರಿ, ಯದುಪುಂಗವರ ಸಭಾಮಧ್ಯದಲ್ಲಿ ತಾನು ಕೌರವರೊಂದಿಗೆ ವ್ಯವಹರಿಸಿದ ಸಕಲ ವೃತ್ತಾಂತವನ್ನು ಸವಿಸ್ತಾರವಾಗಿ ಹೇಳಿದನು. ॥ ೫೩ ॥ ಪರೀಕ್ಷಿತನೇ! ಹಸ್ತಿನಾ ಪುರವು ಈಗಲೂ ದಕ್ಷಿಣದಿಕ್ಕಿನಲ್ಲಿ ಸ್ವಲ್ಪ ಎತ್ತರವಾಗಿದ್ದು ಗಂಗಾ ನದಿಯ ಕಡೆಗೆ ಸ್ವಲ್ಪವಾಲಿಕೊಂಡಿದೆ. ಹೀಗೆ ಅದು ಭಗವಾನ್ ಬಲರಾಮನ ಅತುಲಪರಾಕ್ರಮವನ್ನು ಸೂಚಿಸುತ್ತದೆ. ॥ ೫೪ ॥

ಅರವತ್ತೆಂಟನೆಯ ಅಧ್ಯಾಯವು ಮುಗಿಯಿತು. ॥ ೬೮ ॥
ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಉತ್ತರಾರ್ಧೇ
ಹಸ್ತಿನಾಪುರಕರ್ಷಣರೂಪಸಂಕರ್ಷಣವಿಜಯೋ ನಾಮ ಅಷ್ಟಷಷ್ಟಿತಮೋಽಧ್ಯಾಯಃ ॥ ೬೮ ॥

# ಅರವತ್ತೊಂಭತ್ತನೆಯ ಅಧ್ಯಾಯ

## ದೇವರ್ಷಿ ನಾರದರು ಭಗವಂತನ ಗೃಹಸ್ಥ ವ್ಯವಹಾರಗಳನ್ನು ನೋಡಿದುದು

ಶ್ರೀಶುಕ ಉವಾಚ

ನರಕಂ ನಿಹತಂ ಶ್ರುತ್ವಾ ತಥೋದ್ವಾಹಂ ಚ ಯೋಷಿತಾಮ್ ।
ಕೃಷ್ಣೇನೈಕೇನ ಬಹ್ವೀನಾಂ ತದ್ದಿದೃಕ್ಷುಃ ಸ್ಮ ನಾರದಃ
॥ ೧ ॥

ಚಿತ್ರಂ ಬತೈತದೇಕೇನ ವಪುಷಾ ಯುಗಪತ್ ಪೃಥಕ್ ।
ಗೃಹೇಷು ದ್ವ್ಯಷ್ಟಸಾಹಸ್ರಂ ಸ್ತ್ರಿಯ ಏಕ ಉದಾವಹತ್
॥ ೨ ॥

ಶ್ರೀಶುಕಮಹಾಮುನಿಗಳು ಹೇಳುತ್ತಾರೆ - ಎಲೈ ಪರೀಕ್ಷಿತನೇ! ಭಗವಾನ್ ಶ್ರೀಕೃಷ್ಣನು ನರಕಾಸುರನನ್ನು ಕೊಂದು ಒಬ್ಬನೇ ಸಾವಿರಾರು ರಾಜಕುಮಾರಿಯರೊಂದಿಗೆ ವಿವಾಹವಾದನೆಂದು ಕೇಳಿದ ನಾರದಮಹರ್ಷಿಗಳಿಗೆ ಭಗವಂತನು ಅವರೊಂದಿಗೆ ಗೃಹ ಚರ್ಯೆಯನ್ನು ಹೇಗೆ ನಡೆಸುವನೆಂದು ನೋಡುವ ಬಯಕೆ ಉಂಟಾಯಿತು. ॥ ೧ ॥ ಅವರು ಹೀಗೆ ಯೋಚಿಸತೊಡಗಿದರು ಭಗವಾನ್ ಶ್ರೀಕೃಷ್ಣನು ಒಂದೇ ಶರೀರದಲ್ಲಿ ಒಂದೇ ಸಮಯದಲ್ಲಿ ಹದಿನಾರು ಸಾವಿರ ಅರಮನೆಯಲ್ಲಿ ಬೇರೆ-ಬೇರೆಯಾಗಿ ಹದಿ ನಾರು ಸಾವಿರ ರಾಜಕುಮಾರಿಯರೊಂದಿಗೆ ಹೇಗೆ ಪಾಣಿಗ್ರಹಣ ಮಾಡಿದನು? ಇದು ಪರಮಾಶ್ಚರ್ಯವಾಗಿದೆ. ॥ ೨ ॥

ಇತ್ಯುತ್ಸುಕೋ ದ್ವಾರವತೀಂ ದೇವರ್ಷಿರ್ದ್ರಷ್ಟುಮಾಗಮತ್ ।
ಪುಷ್ಪಿತೋಪವನಾರಾಮದ್ವಿಜಾಲಿಕುಲನಾದಿತಾಮ್ ॥ ೩ ॥

ಉತ್ಫುಲ್ಲೇಂದೀವರಾಂಭೋಜಕಹ್ಲಾರಕುಮುದೋತ್ಪಲೈಃ ।
ಛುರಿತೇಷು ಸರಸ್ಸೂಚ್ಚೈಃ ಕೂಜಿತಾಂ ಹಂಸಸಾರಸೈಃ ॥ ೪ ॥

ಪ್ರಾಸಾದಲಕ್ಷೈರ್ನವಭಿರ್ಜುಷ್ಟಾಂ ಸ್ಫಾಟಿಕರಾಜತೈಃ ।
ಮಹಾಮರಕತಪ್ರಖ್ಯೈಃ ಸ್ವರ್ಣರತ್ನಪರಿಚ್ಛದೈಃ ॥ ೫ ॥

ವಿಭಕ್ತರಥ್ಯಾಪಥಚತ್ವರಾಪಣೈಃ
ಶಾಲಾಸಭಾಭೀ ರುಚಿರಾಂ ಸುರಾಲಯೈಃ ।
ಸಂಸಿಕ್ತಮಾರ್ಗಾಂಗಣವೀಥಿದೇಹಲೀಂ
ಪತತ್ಪತಾಕಾಧ್ವಜವಾರಿತಾತಪಾಮ್ ॥ ೬ ॥

ತಸ್ಯಾಮಂತಃಪುರಂ ಶ್ರೀಮದರ್ಚಿತಂ ಸರ್ವಧಿಷ್ಣ್ಯಪೈಃ ।
ಹರೇಃ ಸ್ವಕೌಶಲಂ ಯತ್ರ ತ್ವಷ್ಟ್ರಾ ಕಾರ್ತ್ಸ್ನ್ಯೇನ ದರ್ಶಿತಮ್ ॥ ೭ ॥

ತತ್ರ ಷೋಡಶಭಿಃ ಸದ್ಮಸಹಸ್ರೈಃ ಸಮಲಂಕೃತಮ್ ।
ವಿವೇಶೈಕತಮಂ ಶೌರೇಃ ಪತ್ನೀನಾಂ ಭವನಂ ಮಹತ್ ॥ ೮ ॥

ವಿಷ್ಟಬ್ಧಂ ವಿದ್ರುಮಸ್ತಂಭೈರ್ವೈದೂರ್ಯಫಲಕೋತ್ತಮೈಃ ।
ಇಂದ್ರನೀಲಮಯೈಃ ಕುಡ್ಯೈರ್ಜಗತ್ಯಾ ಚಾಹತತ್ವಿಷಾ ॥ ೯ ॥

ವಿತಾನೈರ್ನಿರ್ಮಿತೈಸ್ತ್ವಷ್ಟ್ರಾ ಮುಕ್ತಾದಾಮವಿಲಂಬಿಭಿಃ ।
ದಾಂತೈರಾಸನಪರ್ಯಂಕೈರ್ಮಣ್ಯುತ್ತಮಪರಿಷ್ಕೃತೈಃ ॥ ೧೦ ॥

ದಾಸೀಭಿರ್ನಿಷ್ಕಕಂಠೀಭಿಃ ಸುವಾಸೋಭಿರಲಂಕೃತಮ್ ।
ಪುಂಭಿಃ ಸಕಂಚುಕೋಷ್ಣೀಷಸುವಸ್ತ್ರಮಣಿಕುಂಡಲೈಃ ॥ ೧೧ ॥

ರತ್ನಪ್ರದೀಪನಿಕರದ್ಯುತಿಭಿರ್ನಿರಸ್ತ-
ಧ್ವಾಂತಂ ವಿಚಿತ್ರವಲಭೀಷು ಶಿಖಂಡಿನೋಽಂಗ ।
ನೃತ್ಯಂತಿ ಯತ್ರ ವಿಹಿತಾಗುರುಧೂಪಮಕ್ಷೈ-
ರ್ನಿರ್ಯಾಂತಮೀಕ್ಷ್ಯ ಘನಬುದ್ಧಯ ಉನ್ನದಂತಃ ॥ ೧೨ ॥

ದೇವಋಷಿ ನಾರದರು ಈ ಉತ್ಸುಕತೆಯಿಂದ ಪ್ರೇರಿತರಾಗಿ ಭಗವಂತನ ಲೀಲೆಗಳನ್ನು ನೋಡಲಿಕ್ಕಾಗಿ ದ್ವಾರಕೆಗೆ ಬಂದರು. ಅಲ್ಲಿನ ವನ-ಉಪವನಗಳಲ್ಲಿ ಬಣ್ಣ-ಬಣ್ಣದ ಅರಳಿದ ಪುಷ್ಪಗಳಿಂದ ತುಂಬಿದ ವೃಕ್ಷಗಳು ತುಂಬಿಕೊಂಡಿದ್ದವು. ಅವುಗಳಲ್ಲಿ ನಾನಾ ರೀತಿಯ ಪಕ್ಷಿಗಳು ಚಿಲಿ-ಪಿಲಿಗುಟ್ಟುತ್ತಿದ್ದವು. ದುಂಬಿಗಳು ಝೇಂಕರಿಸುತ್ತಿದ್ದವು. ॥ ೩ ॥ ನಿರ್ಮಲವಾದ ನೀರಿನಿಂದ ತುಂಬಿದ ಸರೋವರಗಳಲ್ಲಿ ನೀಲಿ, ಕೆಂಪು, ಬಿಳಿ ಬಣ್ಣಗಳ ಕಮಲ ನೈದಿಲೆ, ಕನ್ನೈದಿಲೆ ಮೊದಲಾದ ಸುಗಂಧಯುಕ್ತವಾದ ಪುಷ್ಪಗಳಿದ್ದವು. ಆ ಪುಷ್ಪಗಳ ಮಧ್ಯದಲ್ಲಿ ಹಂಸ-ಕಾರಂಡವ ಮೊದಲಾದ ಪಕ್ಷಿಗಳು ಕಲರವ ಮಾಡುತ್ತಿದ್ದವು. ॥ ೪ ॥ ದ್ವಾರಕೆಯಲ್ಲಿ ಸ್ಫಟಿಕದ ಮತ್ತು ಬೆಳ್ಳಿಯಿಂದ ನಿರ್ಮಿಸಿದ ಒಂಬತ್ತು ಲಕ್ಷ ಅರಮನೆಗಳಿದ್ದವು. ಅವುಗಳ ನೆಲಗಳು ಮರಕತಮಣಿಗಳ ಪ್ರಭೆಯಿಂದ ಹೊಳೆಯುತ್ತಿದ್ದುವು ಮತ್ತು ಅವುಗಳಲ್ಲಿ ಚಿನ್ನ ಹಾಗೂ ವಜ್ರಗಳಿಂದ ಮಾಡಿದ ಪರಿಕರಗಳಿಂದ ಸಂಪನ್ನವಾಗಿದ್ದವು. ॥ ೫ ॥ ಅಲ್ಲಿಯ ರಾಜಬೀದಿಗಳು, ಗಲ್ಲಿಗಳು, ಚೌಕಗಳು, ಪೇಟೆಗಳು ಅತ್ಯಂತ ಸುಂದರವಾಗಿದ್ದವು. ಅಶ್ವಶಾಲೆಗಳು, ಗೋಶಾಲೆಗಳು, ಸಭಾಭವನಗಳು, ದೇವ ಮಂದಿರಗಳು ಇವುಗಳಿಂದಾಗಿ ಅದರ ಸೌಂದರ್ಯವು ಇನ್ನೂ ಬೆಳಗುತ್ತಿತ್ತು. ದ್ವಾರಕೆಯ ಬೀದಿಗಳಲ್ಲಿ, ಚೌಕಗಳಲ್ಲಿ, ಓಣಿಗಳಲ್ಲಿ, ಬಾಗಿಲುಗಳಲ್ಲಿ ಸುಗಂಧ ದ್ರವ್ಯಗಳನ್ನು ಸಿಂಪಡಿಸಿತ್ತು. ಹಾರಾಡುತ್ತಿದ್ದ ಧ್ವಜ-ಪತಾಕೆಗಳು ಬಿಸಿಲಿನ ತಾಪವನ್ನು ತಡೆಯುತ್ತಿದ್ದವು. ॥ ೬ ॥

ಆ ದ್ವಾರಕೆಯ ಮಧ್ಯಭಾಗದಲ್ಲಿ ಭಗವಾನ್ ಶ್ರೀಕೃಷ್ಣನ ವಿಶಾಲವಾದ ಸುಂದರವಾದ ಲೋಕಪಾಲರಿಂದ ಪೂಜಿಸಲ್ಪಡುತ್ತಿದ್ದ ಅಂತಃಪುರವಿತ್ತು. ಅದನ್ನು ನಿರ್ಮಿಸಲು ವಿಶ್ವಕರ್ಮನು ತನ್ನ ಎಲ್ಲ ಕಲಾ-ಕೌಶಲ್ಯವನ್ನು ಉಪಯೋಗಿಸಿದ್ದನು. ॥ ೭ ॥ ಅತ್ಯಂತ ದೊಡ್ಡದಾದ ಆ ಅಂತಃಪುರವು ಹದಿನಾರು ಸಾವಿರ ಉಪಾಂತಃಪುರಗಳಿಂದ ಸಮಲಂಕೃತವಾಗಿತ್ತು. ಶೌರಿಯ ಅಷ್ಟು ಅಂತಃಪುರಗಳಲ್ಲಿ ದೊಡ್ಡದಾದ ಭವನದಲ್ಲಿ ನಾರದರು ಪ್ರವೇಶಿಸಿದರು. ॥ ೮ ॥ ಆ ಭವನದಲ್ಲಿ ವೈಡೂರ್ಯದ ಬೋದಿಗೆಗಳಿಂದ ಕೂಡಿದ ಹವಳದ ಕಂಬಗಳು, ಇಂದ್ರನೀಲಮಣಿಯ ಗೋಡೆಗಳು ಮತ್ತು ನೆಲಗಳು ಥಳ-ಥಳಿಸುತ್ತಿದ್ದವು. ॥ ೯ ॥ ಮುತ್ತಿನ ಸರಗಳಿಂದ ಸಮಲಂಕೃತವಾದ ಅನೇಕ ಚಪ್ಪರಗಳು ವಿಶ್ವಕರ್ಮನಿಂದ ನಿರ್ಮಿಸಲ್ಪಟ್ಟಿತ್ತು. ಹಸ್ತಿದಂತದಿಂದ ಮಾಡಿದ ಆಸನಗಳೂ ಮತ್ತು ಮಂಚಗಳಿದ್ದು, ಅವುಗಳಲ್ಲಿ ಶ್ರೇಷ್ಠವಾದ ಮಣಿ-ರತ್ನಗಳನ್ನು ಜೋಡಿಸಿದ್ದರು. ॥ ೧೦ ॥ ಸುಂದರವಾದ ವಸ್ತ್ರಗಳನ್ನುಟ್ಟು ಚಿನ್ನದ ಸರಗಳನ್ನು ಧರಿಸಿದ್ದ ನೂರಾರು ದಾಸಿಯರಿಂದ ಆ ಭವನವು ಸಮಲಂಕೃತವಾಗಿತ್ತು. ಅಂಗಿ-ಪೇಟ-ಸುಂದರವಾದ ಸಮವಸ್ತ್ರ ಮತ್ತು ಮಣಿಕುಂಡಲಗಳನ್ನು ಧರಿಸಿದ್ದ ಸೇವಕರೂ ತಮ್ಮ-ತಮ್ಮ ಕೆಲಸದಲ್ಲಿ ವ್ಯಸ್ತರಾಗಿದ್ದು ಭವನದ ಶೋಭೆಯನ್ನು ಹೆಚ್ಚಿಸಿದ್ದರು. ॥ ೧೧ ॥ ಅನೇಕ ರತ್ನದೀಪಗಳು ತಮ್ಮ ಪ್ರಭೆಯಿಂದ ಕತ್ತಲನ್ನು ಓಡಿಸುತ್ತಿದ್ದವು. ಅಗರು ಧೂಪದ ಹೊಗೆಯು ಕಿಡಿಕಿಗಳಿಂದ ಹೊರಸೂಸುತ್ತಿತ್ತು. ಅದನ್ನು ನೋಡಿದ ನವಿಲುಗಳು ಮೋಡಗಳೆಂದು ಭ್ರಮಿಸಿ ಕೇಕೆಹಾಕಿ ಕುಣಿಯುತ್ತಿದ್ದವು. ॥ ೧೨ ॥

ತಸ್ಮಿನ್ ಸಮಾನಗುಣರೂಪವಯಸ್ಸುವೇಷ-
ದಾಸೀಸಹಸ್ರಯುತಯಾನುಸವಂ ಗೃಹಿಣ್ಯಾ ।
ವಿಪ್ರೋ ದದರ್ಶ ಚಮರವ್ಯಜನೇನ ರುಕ್ಮ-
ದಂಡೇನ ಸಾತ್ವತಪತಿಂ ಪರಿವೀಜಯಂತ್ಯಾ ॥ ೧೩ ॥

ತಂ ಸನ್ನಿರೀಕ್ಷ್ಯ ಭಗವಾನ್ ಸಹಸೋತ್ಥಿತಃ ಶ್ರೀ-
ಪರ್ಯಂಕತಃ ಸಕಲಧರ್ಮಭೃತಾಂ ವರಿಷ್ಠಃ ।
ಆನಮ್ಯ ಪಾದಯುಗಲಂ ಶಿರಸಾ ಕಿರೀಟ-
ಜುಷ್ಟೇನ ಸಾಂಜಲಿರವೀವಿಶದಾಸನೇ ಸ್ವೇ ॥ ೧೪ ॥

ತಸ್ಯಾವನಿಜ್ಯ ಚರಣೌ ತದಪಃ ಸ್ವಮೂರ್ಧ್ನಾ
ಬಿಭ್ರಜ್ಜಗದ್ಗುರುತರೋಽಪಿ ಸತಾಂ ಪತಿರ್ಹಿ ।
ಬ್ರಹ್ಮಣ್ಯದೇವ ಇತಿ ಯದ್ಗುಣನಾಮ ಯುಕ್ತಂ
ತಸ್ಯೈವ ಯಚ್ಚರಣಶೌಚಮಶೇಷತೀರ್ಥಮ್ ॥ ೧೫ ॥

ಸಂಪೂಜ್ಯ ದೇವಋಷಿವರ್ಯಮೃಷಿಃ ಪುರಾಣೋ
ನಾರಾಯಣೋ ನರಸಖೋ ವಿಧಿನೋದಿತೇನ ।
ವಾಣ್ಯಾಭಿಭಾಷ್ಯ ಮಿತಯಾಮೃತಮಿಷ್ಟಯಾ ತಂ
ಪ್ರಾಹ ಪ್ರಭೋ ಭಗವತೇ ಕರವಾಮ ಹೇ ಕಿಮ್ ॥ ೧೬ ॥

ನಾರದ ಉವಾಚ

ನೈವಾದ್ಭುತಂ ತ್ವಯಿ ವಿಭೋಽಖಿಲಲೋಕನಾಥೇ
ಮೈತ್ರೀ ಜನೇಷು ಸಕಲೇಷು ದಮಃ ಖಲಾನಾಮ್ ।
ನಿಃಶ್ರೇಯಸಾಯ ಹಿ ಜಗತ್ಸ್ಥಿತಿರಕ್ಷಣಾಭ್ಯಾಂ
ಸ್ವೈರಾವತಾರ ಉರುಗಾಯ ವಿದಾಮ ಸುಷ್ಠು ॥ ೧೭ ॥

ದೃಷ್ಟಂ ತವಾಂಘ್ರಿಯುಗಲಂ ಜನತಾಪವರ್ಗಂ
ಬ್ರಹ್ಮಾದಿಭಿರ್ಹೃದಿ ವಿಚಿಂತ್ಯಮಗಾಧಬೋಧೈಃ ।
ಸಂಸಾರಕೂಪಪತಿತೋತ್ತರಣಾವಲಂಬಂ
ಧ್ಯಾಯಂಶ್ಚರಾಮ್ಯನುಗೃಹಾಣ ಯಥಾ ಸ್ಮೃತಿಃ ಸ್ಯಾತ್ ॥ ೧೮ ॥

ಅಂತಹ ದಿವ್ಯವಾದ ಅಂತಃಪುರದಲ್ಲಿ ರೂಪ-ಗುಣ ವಯಸ್ಸು-ವೇಷ-ಇವುಗಳಲ್ಲಿ ತನಗೆ ಸಮಾನರಾಗಿದ್ದ ಸಾವಿರಾರು ದಾಸಿಯರಿಂದ ಪರಿವೃತಳಾದ ರುಕ್ಮಿಣೀದೇವಿಯು ಚಿನ್ನದ ಹಿಡಿಯುಳ್ಳ ಬೀಸಣಿಕೆಯನ್ನು ಹಿಡಿದು ಪರ್ಯಂಕದಲ್ಲಿ ಕುಳಿತಿದ್ದ ಶ್ರೀಕೃಷ್ಣನಿಗೆ ಗಾಳಿ ಬೀಸುತ್ತಿರುವುದನ್ನು ನಾರದರು ನೋಡಿದರು. ॥ ೧೩ ॥

ನಾರದ ಮಹರ್ಷಿಗಳನ್ನು ಕಾಣುತ್ತಲೇ ಸಮಸ್ತ ಧಾರ್ಮಿಕರ ಮುಕುಟಮಣಿಯಾದ ಭಗವಾನ್ ಶ್ರೀಕೃಷ್ಣನು ರುಕ್ಮಿಣಿಯ ಪರ್ಯಂಕದಿಂದ ಮೇಲೆದ್ದು ಮುಂದೆ ಹೋಗಿ ಅವರ ಚರಣ ಕಮಲಗಳಿಗೆ ಕಿರೀಟದಿಂದ ಕೂಡಿದ ತಲೆಯಿಂದ ನಮಸ್ಕರಿಸಿ, ಕೈಜೋಡಿಸಿಕೊಂಡು ಅವರನ್ನು ತನ್ನ ಆಸನದಲ್ಲಿ ಕುಳ್ಳಿರಿಸಿದನು. ॥ ೧೪ ॥ ಪರೀಕ್ಷಿತನೇ! ಭಗವಾನ್ ಶ್ರೀಕೃಷ್ಣನು ಚರಾಚರ ಜಗತ್ತಿಗೆ ಪರಮಗುರುವಾಗಿದ್ದು, ಅವನ ಚರಣಕಮಲಗಳಿಂದ ಹುಟ್ಟಿದ ಗಂಗೆಯು ಮೂರು ಲೋಕಗಳನ್ನು ಪಾವನಗೊಳಿಸುವಂತಹುದು. ಹೀಗಿದ್ದರೂ ಅವನು ಪರಮಭಕ್ತವತ್ಸಲನೂ, ಸಂತರ ಪರಮ ಆದರ್ಶನೂ, ಸಂತರ ಸ್ವಾಮಿಯೂ ಆಗಿರುವನು. ಅವನಿಗೆ ಬ್ರಹ್ಮಣ್ಯದೇವ ಎಂಬುದೊಂದು ಅಸಾಧಾರಣ ಹೆಸರೂ ಕೂಡ ಇದೆ. ಅವನು ಬ್ರಾಹ್ಮಣರನ್ನೇ ತನ್ನ ಆರಾಧ್ಯರೆಂದು ಭಾವಿಸುವನು. ಬ್ರಹ್ಮಣ್ಯದೇವ ಎಂಬ ನಾಮವು ಅವನ ಗುಣಗಳಿಗೆ ಅನುರೂಪವೇ ಆಗಿದ್ದು ಉಚಿತವೂ ಆಗಿದೆ. ಆದರಿಂದಲೇ ಶ್ರೀಕೃಷ್ಣನು ನಾರದರ ಕಾಲನ್ನು ತೊಳೆದು ಆ ಚರಣೋದಕವನ್ನು ತನ್ನ ತಲೆಯಲ್ಲಿ ಧರಿಸಿಕೊಂಡನು. ॥ ೧೫ ॥ ಹೀಗೆ ಅರ್ಜುನನ ಮಿತ್ರನೂ, ಸಮದರ್ಶಿಯೂ ಪುರಾಣಪುರುಷನೂ ಆದ ಭಗವಾನ್ ಶ್ರೀನಾರಾಯಣನು ಶಾಸ್ತ್ರೋಕ್ತವಿಧಿಯಿಂದ ದೇವರ್ಷಿ ಶ್ರೇಷ್ಠರಾದ ನಾರದರನ್ನು ಪೂಜಿಸಿದನು. ಅನಂತರ ಅಮೃತಕ್ಕಿಂತಲೂ ಮಧುರವಾದ, ಮಿತವಾದ ಮಾತುಗಳಿಂದ ಅವರನ್ನು ಸ್ವಾಗತಿಸಿ-ಸತ್ಕರಿಸಿ, ಕೇಳಿದನು – ಪ್ರಭುಗಳೇ! ಷಡ್ಗುಣೈಶ್ವರ್ಯ ಸಂಪನ್ನರಾದ ನಿಮಗೆ ನಾನು ಯಾವ ಸೇವೆ ಮಾಡಲಿ ? ॥ ೧೬ ॥

**ದೇವರ್ಷಿ ನಾರದರು ಹೇಳಿದರು** – ಭಗವಂತಾ! ನೀನು ಸಮಸ್ತ ಲೋಕಗಳಿಗೆ ಏಕಮಾತ್ರ ಸ್ವಾಮಿಯಾಗಿರುವೆ. ಭಕ್ತರಲ್ಲಿ ಪ್ರೇಮ, ದುಷ್ಟರಲ್ಲಿ ದಂಡವೆಂಬುದು ನಿನ್ನಲ್ಲಿ ಹೊಸದಾದ ವಿಷಯವೇನೂ ಅಲ್ಲ. ಪರಮಯಶಸ್ವಿಯಾದ ಪ್ರಭೋ! ನೀನು ಜಗತ್ತಿನ ಸ್ಥಿತಿ ಮತ್ತು ರಕ್ಷಣೆಯ ಮೂಲಕ ಸಮಸ್ತ ಪ್ರಾಣಿಗಳಿಗೂ ಕಲ್ಯಾಣವನ್ನುಂಟುಮಾಡುವ ಸಲುವಾಗಿಯೇ ಸ್ವೇಚ್ಛೆಯಿಂದ ಅವತಾರವೆತ್ತುವೆ. ಉರುಗಾಯನೇ! ನಾವು ಈ ವಿಷಯವನ್ನು ಚೆನ್ನಾಗಿ ತಿಳಿದಿರುತ್ತೇವೆ. ॥ ೧೭ ॥ ಇಂದು ನನಗೆ ನಿನ್ನ ಚರಣ ಕಮಲಗಳ ದರ್ಶನವಾದುದು ದೊಡ್ಡ ಸೌಭಾಗ್ಯದ ಮಾತಾಗಿದೆ. ನಿನ್ನ ಈ ಚರಣಕಮಲಗಳು ಸಮಸ್ತ ಜನರಿಗೆ ಮೋಕ್ಷವನ್ನು ಕೊಡುವುದರಲ್ಲಿ ಸಮರ್ಥವಾಗಿವೆ. ಅಸೀಮವಾದ ಜ್ಞಾನವುಳ್ಳ ಬ್ರಹ್ಮಾ, ಶಂಕರರೇ ಮೊದಲಾದವರು ಸದಾಕಾಲ ತಮ್ಮ ಹೃದಯದಲ್ಲಿ ಅವುಗಳನ್ನು ಚಿಂತಿಸುತ್ತಾ ಇರುತ್ತಾರೆ. ವಾಸ್ತವವಾಗಿ ಆ ಶ್ರೀಚರಣಗಳೇ ಸಂಸಾರವೆಂಬ ಬಾವಿಯಲ್ಲಿ ಬಿದ್ದಿರುವ ಜನರನ್ನು ಮೇಲಕ್ಕೆತ್ತಲೂ ಆಧಾರಭೂತವಾಗಿದೆ. ನಿನ್ನ ಆ ಚರಣಕಮಲಗಳ ಸ್ಮರಣೆಯು ನನಗಿರಲಿ ಮತ್ತು ನಾನು ಎಲ್ಲೇ ಇದ್ದರೂ, ಹೇಗಿದ್ದರೂ ಅವುಗಳ ಧ್ಯಾನದಲ್ಲೇ ತನ್ಮಯನಾಗಿರುವಂತೆ ಅನುಗ್ರಹಿಸು. ॥ ೧೮ ॥

ತತೋಽನ್ಯದಾವಿಶದ್ಗೇಹಂ ಕೃಷ್ಣಪತ್ನ್ಯಾಃ ಸ ನಾರದಃ ।
ಯೋಗೇಶ್ವರೇಶ್ವರಸ್ಯಾಂಗ ಯೋಗಮಾಯಾವಿವಿತ್ಸಯಾ ॥ ೧೯ ॥

ದೀವ್ಯಂತಮಕ್ಷೈಸ್ತತ್ರಾಪಿ ಪ್ರಿಯಯಾ ಚೋದ್ಧವೇನ ಚ ।
ಪೂಜಿತಃ ಪರಯಾ ಭಕ್ತ್ಯಾ ಪ್ರತ್ಯುತ್ಥಾನಾಸನಾದಿಭಿಃ ॥ ೨೦ ॥

ಪೃಷ್ಟಶ್ಚಾವಿದುಷೇವಾಸೌ ಕದಾಽಽಯಾತೋ ಭವಾನಿತಿ ।
ಕ್ರಿಯತೇ ಕಿಂ ನು ಪೂರ್ಣಾನಾಮಪೂರ್ಣೈರಸ್ಮದಾದಿಭಿಃ ॥ ೨೧ ॥

ಅಥಾಪಿ ಬ್ರೂಹಿ ನೋ ಬ್ರಹ್ಮನ್ಜನ್ಮೈತಚ್ಛೋಭನಂ ಕುರು ।
ಸ ತು ವಿಸ್ಮಿತ ಉತ್ಥಾಯ ತೂಷ್ಣೀಮನ್ಯದಗಾದ್ಗೃಹಮ್ ॥ ೨೨ ॥

ತತ್ರಾಪ್ಯಚಷ್ಟ ಗೋವಿಂದಂ ಲಾಲಯಂತಂ ಸುತಾನ್ಶಿಶೂನ್ ।
ತತೋಽನ್ಯಸ್ಮಿನ್ಗೃಹೇಽಪಶ್ಯನ್ಮಜ್ಜನಾಯ ಕೃತೋದ್ಯಮಮ್ ॥ ೨೩ ॥

ಜುಹ್ವಂತಂ ಚ ವಿತಾನಾಗ್ನೀನ್ ಯಜಂತಂ ಪಂಚಭಿರ್ಮಖೈಃ ।
ಭೋಜಯಂತಂ ದ್ವಿಜಾನ್ ಕ್ವಾಪಿ ಭುಂಜಾನಮವಶೇಷಿತಮ್ ॥ ೨೪ ॥

ಕ್ವಾಪಿ ಸಂಧ್ಯಾಮುಪಾಸೀನಂ ಜಪಂತಂ ಬ್ರಹ್ಮ ವಾಗ್ಯತಮ್ ।
ಏಕತ್ರ ಚಾಸಿಚರ್ಮಾಭ್ಯಾಂ ಚರಂತಮಸಿವರ್ತ್ಮಸು ॥ ೨೫ ॥

ಅಶ್ವೈರ್ಗಜೈ ರಥೈಃ ಕ್ವಾಪಿ ವಿಚರಂತಂ ಗದಾಗ್ರಜಮ್ ।
ಕ್ವಚಿಚ್ಛಯಾನಂ ಪರ್ಯಂಕೇ ಸ್ತೂಯಮಾನಂ ಚ ವಂದಿಭಿಃ ॥ ೨೬ ॥

ಮಂತ್ರಯಂತಂ ಚ ಕಸ್ಮಿಂಶ್ಚಿನ್ಮಂತ್ರಿಭಿಶ್ಚೋದ್ಧವಾದಿಭಿಃ ।
ಜಲಕ್ರೀಡಾರತಂ ಕ್ವಾಪಿ ವಾರಮುಖ್ಯಾಬಲಾವೃತಮ್ ॥ ೨೭ ॥

ಕುತ್ರಚಿದ್ದ್ವಿಜಮುಖ್ಯೇಭ್ಯೋ ದದತಂ ಗಾಃ ಸ್ವಲಂಕೃತಾಃ ।
ಇತಿಹಾಸಪುರಾಣಾನಿ ಶೃಣ್ವಂತಂ ಮಂಗಲಾನಿ ಚ ॥ ೨೮ ॥

ಹಸಂತಂ ಹಾಸ್ಯಕಥಯಾ ಕದಾಚಿತ್ ಪ್ರಿಯಯಾ ಗೃಹೇ ।
ಕ್ವಾಪಿ ಧರ್ಮಂ ಸೇವಮಾನಮರ್ಥಕಾಮೌ ಚ ಕುತ್ರಚಿತ್ ॥ ೨೯ ॥

ಪರೀಕ್ಷಿತನೇ ! ಅನಂತರ ನಾರದ ಮಹರ್ಷಿಗಳು ಯೋಗೇಶ್ವರರಿಗೂ ಈಶ್ವರನಾದ ಭಗವಾನ್ ಶ್ರೀಕೃಷ್ಣನ ಯೋಗಮಾಯೆಯ ರಹಸ್ಯವನ್ನು ತಿಳಿಯಲು ಮತ್ತೊಬ್ಬ ಪತ್ನಿಯ ಅಂತಃಪುರಕ್ಕೆ ಹೋದರು. ॥ ೧೯ ॥ ಅಲ್ಲಿ ಶ್ರೀಕೃಷ್ಣನು ತನ್ನ ಪ್ರಿಯೆಯೊಂದಿಗೆ ಮತ್ತು ಉದ್ಧವನೊಂದಿಗೆ ಪಗಡೆಯಾಡುತ್ತಿದ್ದುದನ್ನು ನೋಡಿದರು. ಅಲ್ಲಿಯೂ ಭಗವಂತನು ಎದ್ದುನಿಂತು, ನಾರದರನ್ನು ಸ್ವಾಗತಿಸಿ, ಆಸನದಲ್ಲಿ ಕುಳ್ಳಿರಿಸಿ ಬಗೆ-ಬಗೆಯ ಸಾಮಗ್ರಿಗಳಿಂದ ಭಕ್ತಿಯಿಂದ ಪೂಜಿಸಿದನು. ॥ ೨೦ ॥ ಬಳಿಕ ಭಗವಂತನು ಏನೂ ತಿಳಿಯದವನಂತೆ ಕೇಳಿದನು. ಮಹರ್ಷಿಗಳೇ ! ಯಾವಾಗ ತಾವು ದಯಮಾಡಿಸಿದಿರಿ ? ನೀವಾದರೋ ಪರಿಪೂರ್ಣ ಆತ್ಮಾರಾಮರಾಗಿರುವಿರಿ. ಅಪೂರ್ಣರಾದ ನಾವು ನಿಮ್ಮ ಯಾವ ಸೇವೆ ಮಾಡಬಲ್ಲೆವು ? ॥ ೨೧ ॥ ಹೀಗಿದ್ದರೂ ಬ್ರಹ್ಮಸ್ವರೂಪರಾದ ನಾರದರೇ ! ಯಾವ ಕಾರ್ಯವನ್ನು ಮಾಡಿಕೊಡಬೇಕೆಂದು ಅಪ್ಪಣೆಕೊಡಿರಿ. ತಮ್ಮ ಸೇವೆಗೆ ಅವಕಾಶ ಮಾಡಿಕೊಟ್ಟು ನಮ್ಮ ಜನ್ಮವನ್ನು ಸಾರ್ಥಕಗೊಳಿಸಿರಿ. ಇದನ್ನು ನೋಡಿದ ನಾರದರು ಆಶ್ಚರ್ಯಚಕಿತರಾದರು. ಅವರು ಅಲ್ಲಿಂದೆದ್ದು ಏನೂ ಮಾತನಾಡದೆ ಇನ್ನೊಂದು ಅಂತಃಪುರಕ್ಕೆ ಹೊರಟು ಹೋದರು. ॥ ೨೨ ॥ ಆ ಅಂತಃಪುರದಲ್ಲಿ ಭಗವಾನ್ ಶ್ರೀಕೃಷ್ಣನು ಎಳೆಯ ಮಕ್ಕಳನ್ನು ಆಡಿಸುತ್ತಾ ಕುಳಿತಿರುವುದನ್ನು ನೋಡಿದರು. ಅಲ್ಲಿಂದ ಮತ್ತೆ ಮತ್ತೊಂದು ಅಂತಃಪುರಕ್ಕೆ ಹೋದರೆ ಅಲ್ಲಿ ಶ್ರೀಕೃಷ್ಣನು ಸ್ನಾನದ ಸಿದ್ಧತೆ ಮಾಡುತ್ತಿರುವುದನ್ನು ನೋಡಿದರು. ॥ ೨೩ ॥ (ಹೀಗೆಯೇ ದೇವರ್ಷಿನಾರದರು ಬೇರೆ ಬೇರೆ ಅಂತಃಪುರಗಳಲ್ಲಿ ಭಗವಂತನು ಬೇರೆ-ಬೇರೆ ಕಾರ್ಯಗಳನ್ನು ಮಾಡುತ್ತಿರುವುದನ್ನು ನೋಡಿದರು) – ಕೆಲವು ಕಡೆ ಅವನು ಯಜ್ಞಕುಂಡದಲ್ಲಿ ಹೋಮಮಾಡುತ್ತಿದ್ದನು. ಕೆಲವೆಡೆ ಪಂಚಮಹಾಯಜ್ಞಗಳಿಂದ ದೇವತೆ ಮೊದಲಾದವರನ್ನು ಆರಾಧಿಸುತ್ತಿದ್ದನು. ಕೆಲವೆಡೆ ಬ್ರಾಹ್ಮಣರಿಗೆ ಭೋಜನಮಾಡಿಸುತ್ತಿದ್ದನು. ಕೆಲವೆಡೆ ಯಜ್ಞಶೇಷವನ್ನು ಭುಂಜಿಸುತ್ತಿದ್ದನು. ॥ ೨೪ ॥ ಕೆಲವೆಡೆ ಸಂಧ್ಯಾವಂದನೆ ಮಾಡುತ್ತಿದ್ದರೆ, ಕೆಲವೆಡೆ ಮೌನವಾಗಿ ಗಾಯತ್ರೀ ಜಪಮಾಡುತ್ತಿದ್ದನು. ಕೆಲವೆಡೆ ಕತ್ತಿ-ಗುರಾಣಿ ಹಿಡಿದು ಶಸ್ತ್ರಾಭ್ಯಾಸ ಮಾಡುತ್ತಿದ್ದನು. ॥ ೨೫ ॥ ಕೆಲವುಕಡೆ ಆನೆ, ಕುದುರೆ, ರಥಗಳಲ್ಲಿ ಕುಳಿತು ಶ್ರೀಕೃಷ್ಣನು ಸಂಚರಿಸುತ್ತಿದ್ದನು. ಕೆಲವೆಡೆ ಮಂಚದಲ್ಲಿ ಪವಡಿಸಿದ್ದರೆ, ಕೆಲವೆಡೆ ಮಂದಿ-ಮಾಗಧರು ಸುತ್ತಿಸುತ್ತಾ ಇದ್ದಾರೆ. ॥ ೨೬ ॥ ಯಾವುದೋ ಅಂತಃಪುರದಲ್ಲಿ ಉದ್ಧವಾದಿ ಮಂತ್ರಿಗಳೊಡನೆ ಗಂಭೀರವಾದ ಮಂತ್ರಾವಲೋಚನೆ ಮಾಡುತ್ತಿದ್ದರೆ, ಕೆಲವೆಡೆ ಉತ್ತಮೋತ್ತಮ ವಾರಾಂಗನೆಯರೊಡನೆ ಜಲಕ್ರೀಡೆಯಾಡುತ್ತಿದ್ದನು. ॥ ೨೭ ॥ ಕೆಲವೆಡೆ ಶ್ರೇಷ್ಠವಾದ ಬ್ರಾಹ್ಮಣರಿಗೆ ವಸ್ತ್ರಾಭೂಷಣಗಳಿಂದ ಅಲಂಕೃತವಾದ ಗೋವುಗಳನ್ನು ದಾನಮಾಡುತ್ತಿದ್ದ ಕೆಲವೆಡೆ ಮಂಗಲಮಯ ಇತಿಹಾಸ ಪುರಾಣಗಳನ್ನು ಶ್ರವಣಿಸುತ್ತಿದ್ದನು. ॥ ೨೮ ॥ ಕೆಲವು ಪತ್ನಿಯರ ಅಂತಃಪುರಗಳಲ್ಲಿ ತನ್ನ ಪ್ರೇಯಸಿಯರೊಡನೆ ಹಾಸ್ಯ-ವಿನೋದದ ಮಾತುಗಳನ್ನಾಡುತ್ತಾ ನಗುತ್ತಿದ್ದನು. ಕೆಲವೆಡೆ ಧರ್ಮಕ್ಕೆ ಸಂಬಂಧಿಸಿದ ಕಾರ್ಯಗಳಲ್ಲಿ ನಿರತನಾಗಿದ್ದರೆ, ಕೆಲವೆಡೆ ಅರ್ಥಸಂಗ್ರಹದ ವಿಷಯವಾಗಿ ಮಂತ್ರಿಗಳೊಡನೆ ಸಮಾಲೋಚಿಸುತ್ತಿದ್ದನು. ಕೆಲವು ಕಡೆ ಧರ್ಮಾನುಕೂಲ ಗೃಹಸ್ಥೋಚಿತ ವಿಷಯಭೋಗಗಳನ್ನು ಅನುಭವಿಸುತ್ತಿದ್ದನು. ॥ ೨೯ ॥

ಧ್ಯಾಯಂತಮೇಕಮಾಸೀನಂ ಪುರುಷಂ ಪ್ರಕೃತೇಃ ಪರಮ್ ।
ಶುಶ್ರೂಷಂತಂ ಗುರೂನ್ ಕ್ವಾಪಿ ಕಾಮೈರ್ಭೋಗೈಃ ಸಪರ್ಯಯಾ ॥ ೩೦ ॥

ಕುರ್ವಂತಂ ವಿಗ್ರಹಂ ಕೈಶ್ಚಿತ್ಸಂಧಿಂ ಚಾನ್ಯತ್ರ ಕೇಶವಮ್ ।
ಕುತ್ರಾಪಿ ಸಹ ರಾಮೇಣ ಚಿಂತಯಂತಂ ಸತಾಂ ಶಿವಮ್ ॥ ೩೧ ॥

ಪುತ್ರಾಣಾಂ ದುಹಿತೄಣಾಂ ಚ ಕಾಲೇ ವಿಧ್ಯುಪಯಾಪನಮ್ ।
ದಾರೈರ್ವರೈಸ್ತತ್ಸದೃಶೈಃ ಕಲ್ಪಯಂತಂ ವಿಭೂತಿಭಿಃ ॥ ೩೨ ॥

ಪ್ರಸ್ಥಾಪನೋಪಾನಯನೈರಪತ್ಯಾನಾಂ ಮಹೋತ್ಸವಾನ್ ।
ವೀಕ್ಷ್ಯ ಯೋಗೇಶ್ವರೇಶಸ್ಯ ಯೇಷಾಂ ಲೋಕಾ ವಿಸಿಸ್ಮಿರೇ ॥ ೩೩ ॥

ಯಜಂತಂ ಸಕಲಾನ್‌ದೇವಾನ್ ಕ್ವಾಪಿ ಕ್ರತುಭಿರೂರ್ಜಿತೈಃ ।
ಪೂರ್ತಯಂತಂ ಕ್ವಚಿದ್ಧರ್ಮಂ ಕೂಪಾರಾಮಮಠಾದಿಭಿಃ ॥ ೩೪ ॥

ಚರಂತಂ ಮೃಗಯಾಂ ಕ್ವಾಪಿ ಹಯಮಾರುಹ್ಯ ಸೈಂಧವಮ್ ।
ಘ್ನಂತಂ ತತಃ ಪಶೂನ್ ಮೇಧ್ಯಾನ್ ಪರೀತಂ ಯದುಪುಂಗವೈಃ ॥ ೩೫ ॥

ಅವ್ಯಕ್ತಲಿಂಗಂ ಪ್ರಕೃತಿಷ್ವಂತಃಪುರಗೃಹಾದಿಷು ।
ಕ್ವಚಿಚ್ಚರಂತಂ ಯೋಗೇಶಂ ತತ್ತದ್ಭಾವಬುಭುತ್ಸಯಾ ॥ ೩೬ ॥

ಅಥೋವಾಚ ಹೃಷೀಕೇಶಂ ನಾರದಃ ಪ್ರಹಸನ್ನಿವ ।
ಯೋಗಮಾಯೋದಯಂ ವೀಕ್ಷ್ಯ ಮಾನುಷೀಮೀಯುಷೋ ಗತಿಮ್ ॥ ೩೭ ॥

ವಿದಾಮ ಯೋಗಮಾಯಾಸ್ತೇ ದುರ್ದರ್ಶಾ ಅಪಿ ಮಾಯಿನಾಮ್ ।
ಯೋಗೇಶ್ವರಾತ್ಮನ್ ನಿರ್ಭಾತಾ ಭವತ್ಪಾದನಿಷೇವಯಾ ॥ ೩೮ ॥

ಅನುಜಾನೀಹಿ ಮಾಂ ದೇವ ಲೋಕಾಂಸ್ತೇ ಯಶಸಾಽಽಪ್ಲುತಾನ್ ।
ಪರ್ಯಟಾಮಿ ತವೋದ್ಗಾಯನ್ ಲೀಲಾಂ ಭುವನಪಾವನೀಮ್ ॥ ೩೯ ॥

ಶ್ರೀಭಗವಾನುವಾಚ

ಬ್ರಹ್ಮನ್ ಧರ್ಮಸ್ಯ ವಕ್ತಾಹಂ ಕರ್ತಾ ತದನುಮೋದಿತಾ ।
ತಚ್ಛಿಕ್ಷಯನ್ಲೋಕಮಿಮಮಾಸ್ಥಿತಃ ಪುತ್ರ ಮಾ ಖಿದಃ ॥ ೪೦ ॥

ಕೆಲವೆಡೆ ಏಕಾಂತದಲ್ಲಿ ಕುಳಿತು ಪ್ರಕೃತಿಗೆ ಅತೀತನಾದ ಪುರಾಣ ಪುರುಷನನ್ನು ಧ್ಯಾನಿಸುತ್ತಿದ್ದನು. ಕೆಲವೆಡೆ ಗುರು-ಹಿರಿಯರಿಗೆ ಇಚ್ಛಿತ ಭೋಗ ಸಾಮಗ್ರಿಗಳನ್ನಿತ್ತು ಅವರ ಸೇವೆ-ಶುಶ್ರೂಷೆ ಮಾಡುತ್ತಿದ್ದನು. ॥ ೩೦ ॥ ದೇವಋಷಿ ನಾರದರು ನೋಡುತ್ತಾರೆ ಭಗವಾನ್ ಶ್ರೀಕೃಷ್ಣನು ಯಾರೊಂದಿಗೋ ಯುದ್ಧದ ಮಾತನ್ನಾಡುತ್ತಿದ್ದರೆ, ಯಾರೊಂದಿಗೋ ಸಂಧಿಯ ಪ್ರಸ್ತಾಪವನ್ನು ಮಾಡುತ್ತಿದ್ದನು. ಕೆಲವು ಕಡೆ ಬಲರಾಮನೊಂದಿಗೆ ಕುಳಿತುಕೊಂಡು ಸತ್ಪುರುಷರ ಕಲ್ಯಾಣದ ಕುರಿತು ಯೋಚಿಸುತ್ತಿದ್ದನು. ॥ ೩೧ ॥ ಕೆಲವೆಡೆ ಉಚಿತ ಸಮಯದಲ್ಲಿ ಪುತ್ರ-ಪುತ್ರಿಯರು ಅವರಿಗೆ ಅನುರೂಪರಾದ ವಧೂ-ವರರೊಂದಿಗೆ ಸಂಭ್ರದಿಂದ ವಿಧಿವತ್ತಾಗಿ ವಿವಾಹ ಮಾಡುತ್ತಿದ್ದನು. ॥ ೩೨ ॥ ಕೆಲವು ಕಡೆ ವಿವಾಹಿತ ಕನ್ಯೆಯನ್ನು ಅತ್ತೆ ಮನೆಗೆ ಕಳಿಸುತ್ತಿದ್ದರೆ, ಕೆಲವೆಡೆ ಕನ್ಯೆಯರನ್ನು ಕರೆಸುವ ಸಿದ್ಧತೆ ಮಾಡುತ್ತಿದ್ದನು. ಯೋಗೇಶ್ವರ ಭಗವಾನ್ ಶ್ರೀಕೃಷ್ಣನ ಈ ವಿರಾಟ್ ಉತ್ಸವವನ್ನು ನೋಡಿ ಎಲ್ಲ ಜನರು ಆಶ್ಚರ್ಯಚಕಿತರಾಗುತ್ತಿದ್ದರು. ॥ ೩೩ ॥ ಕೆಲವೆಡೆ ದೊಡ್ಡ-ದೊಡ್ಡ ಯಜ್ಞಗಳ ಮೂಲಕ ದೇವತೆಗಳನ್ನು ಪೂಜಿಸುತ್ತಿದ್ದರೆ, ಕೆಲವು ಕಡೆ ಬಾವಿ, ಉದ್ಯಾನ, ಅಗ್ರಹಾರ ಮುಂತಾದುವನ್ನು ಮಾಡಿಸಿ ಇಷ್ಟಾಪೂರ್ತ ಧರ್ಮವನ್ನು ಆಚರಿಸುತ್ತಿದ್ದನು. ॥ ೩೪ ॥ ಕೆಲವೆಡೆ ಶ್ರೇಷ್ಠ ಯಾದವರಿಂದ ಸುತ್ತುವರಿದು ಸಿಂಧುದೇಶದ ಕುದುರೆಯ ಮೇಲೆ ಕುಳಿತುಕೊಂಡು ಬೇಟೆಯಾಡುತ್ತಾ ಯಜ್ಞಕ್ಕಾಗಿ ವಸ್ತುಗಳನ್ನು ಸಂಗ್ರಹಿಸುತ್ತಾ ॥ ೩೫ ॥ ಕೆಲವೆಡೆ ಅಂತಃಪುರಗಳಲ್ಲಿ ಹಾಗೂ ಪ್ರಜೆಗಳ ಮಧ್ಯದಲ್ಲಿಯೂ ವೇಷವನ್ನು ಬದಲಿಸಿ ಅಡಗಿಕೊಂಡು ಎಲ್ಲರ ಅಭಿಪ್ರಾಯವನ್ನು ತಿಳಿಯಲು ಸಂಚರಿಸುತ್ತಿದ್ದ ಮಹಾಯೋಗಿಯಾದ ಶ್ರೀಕೃಷ್ಣನನ್ನು ನೋಡಿ ನಾರದರು ಮೂಕರಾದರು. ॥ ೩೬ ॥

ಪರೀಕ್ಷಿತನೇ ! ಹೀಗೆ ಮನುಷ್ಯರಂತೆ ಲೀಲೆ ಮಾಡುವ ಹೃಷಿಕೇಶ ಭಗವಂತನ ಯೋಗಮಾಯೆಯ ವೈಭವವನ್ನು ನೋಡಿ ದೇವರ್ಷಿ ನಾರದರು ಮುಗುಳ್ನಗುತ್ತಾ ಹೇಳಿದರು - ॥ ೩೭ ॥ ಯೋಗೇಶ್ವರರಿಗೂ ಆತ್ಮಸ್ವರೂಪನಾದವನೇ ! ನಿನ್ನ ಯೋಗಮಾಯೆಯನ್ನು ಬ್ರಹ್ಮಾದಿ ಮಹಾ-ಮಹಾ ಮಾಯಾವಿಗಳಿಗೂ ತಿಳಿಯಲು ಅಗಮ್ಯವಾಗಿದೆ. ಆದರೆ ನಿನ್ನ ಚರಣಕಮಲಗಳ ಸೇವೆಯಿಂದ ನಾವು ಆ ಯೋಗಮಾಯೆಯನ್ನು ತಿಳಿದುಕೊಂಡೆವು. ॥ ೩೮ ॥ ದೇವದೇವನೇ! ನನಗೆ ಹೋಗಲು ಅನುಮತಿಯನ್ನು ದಯಪಾಲಿಸು. ನಿನ್ನ ಯಶಸ್ಸಿನಿಂದ ತುಂಬಿಹೋಗಿರುವ ಮೂರು ಲೋಕಗಳಲ್ಲಿಯೂ, ತ್ರಿಭುವನ ಪಾವನಿಯಾದ ನಿನ್ನ ಲೀಲೆಗಳನ್ನು ಹಾಡುತ್ತಾ ಸಂಚರಿಸುತ್ತೇನೆ. ॥ ೩೯ ॥

**ಭಗವಾನ್ ಶ್ರೀಕೃಷ್ಣನು ಹೇಳಿದನು** - ಬ್ರಾಹ್ಮಣ ಶ್ರೇಷ್ಠನೇ! ನಾನೇ ಧರ್ಮದ ಉಪದೇಶಕನೂ, ಪಾಲನೆ ಮಾಡುವವನೂ, ಅದನ್ನು ಅನುಷ್ಠಾನ ಮಾಡುವವರನ್ನು ಅನುಮೋದಿಸುವವನೂ ಆಗಿದ್ದೇನೆ. ಪ್ರಪಂಚಕ್ಕೆ ಧರ್ಮದ ಶಿಕ್ಷಣವನ್ನು ಕೊಡಬೇಕೆನ್ನುವ ಉದ್ದೇಶದಿಂದಲೇ ನಾನು ಈ ಪ್ರಕಾರ ಧರ್ಮವನ್ನು ಆಚರಿಸುತ್ತಿದ್ದೇನೆ. ಪ್ರಿಯ ಪುತ್ರನೇ ! ನೀನು ನನ್ನ ಈ ಯೋಗ ಮಾಯೆಯನ್ನು ನೋಡಿ ಮೋಹಿತನಾಗಬೇಡ. ॥ ೪೦ ॥

ಶ್ರೀಶುಕ ಉವಾಚ

**ಇತ್ಥಾಚರಂತಂ ಸದ್ಧರ್ಮಾನ್ ಪಾವನಾನ್ಗೃಹಮೇಧಿನಾಮ್ ।**
**ತಮೇವ ಸರ್ವಗೇಹೇಷು ಸಂತಮೇಕಂ ದದರ್ಶ ಹ**
**॥ ೪೧ ॥**

**ಕೃಷ್ಣಸ್ಯಾನಂತವೀರ್ಯಸ್ಯ ಯೋಗಮಾಯಾಮಹೋದಯಮ್ ।**
**ಮುಹುರ್ದೃಷ್ಟ್ವಾ ಋಷಿರಭೂದ್ವಿಸ್ಮಿತೋ ಜಾತಕೌತುಕಃ**
**॥ ೪೨ ॥**

**ಇತ್ಯರ್ಥಕಾಮಧರ್ಮೇಷು ಕೃಷ್ಣೇನ ಶ್ರದ್ಧಿತಾತ್ಮನಾ ।**
**ಸಮ್ಯಕ್ಸಭಾಜಿತಃ ಪ್ರೀತಸ್ತಮೇವಾನುಸ್ಮರನ್ಯಯೌ**
**॥ ೪೩ ॥**

**ಏವಂ ಮನುಷ್ಯಪದವೀಮನುವರ್ತಮಾನೋ**
**ನಾರಾಯಣೋಽಖಿಲಭವಾಯ ಗೃಹೀತಶಕ್ತಿಃ ।**
**ರೇಮೇಂಗ ಷೋಡಶಸಹಸ್ರವರಾಂಗನಾನಾಂ**
**ಸವ್ರೀಡಸೌಹೃದನಿರೀಕ್ಷಣಹಾಸಜುಷ್ಟಃ ॥ ೪೪ ॥**

**ಯಾನೀಹ ವಿಶ್ವವಿಲಯೋದ್ಭವವೃತ್ತಿಹೇತುಃ**
**ಕರ್ಮಾಣ್ಯನನ್ಯವಿಷಯಾಣಿ ಹರಿಶ್ಚಕಾರ ।**
**ಯಸ್ತ್ವಂಗ ಗಾಯತಿ ಶೃಣೋತ್ಯನುಮೋದತೇ ವಾ**
**ಭಕ್ತಿರ್ಭವೇದ್ಭಗವತಿ ಹ್ಯಪವರ್ಗಮಾರ್ಗೇ ॥ ೪೫ ॥**

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** - ಪರೀಕ್ಷಿತನೇ! ಹೀಗೆ ಭಗವಾನ್ ಶ್ರೀಕೃಷ್ಣನು ಗೃಹಸ್ಥಾಶ್ರಮಿಗಳನ್ನು ಪವಿತ್ರಗೊಳಿಸುವ ಶ್ರೇಷ್ಠವಾದ ಧರ್ಮಗಳನ್ನು ಆಚರಿಸುತ್ತಿದ್ದನು - ಅವನು ಒಬ್ಬನೇ ಆಗಿದ್ದರೂ ನಾರದ ಮಹರ್ಷಿಗಳು ಅವನನ್ನು ಅವನ ಪ್ರತಿಯೊಬ್ಬ ಪತ್ನಿಯರ ಅಂತಃಪುರಗಳಲ್ಲಿ ಬೇರೆ-ಬೇರೆಯಾಗಿ ನೋಡಿದರು. ॥ ೪೧ ॥ ಅನಂತಶಕ್ತಿಯುಳ್ಳ ಭಗವಾನ್ ಶ್ರೀಕೃಷ್ಣನ ಯೋಗಮಾಯೆಯ ಪರಮೈಶ್ವರ್ಯವನ್ನು ಪದೇ-ಪದೇ ನೋಡಿ ದೇವರ್ಷಿ ನಾರದರು ಕುತೂಹಲವಿಷ್ಟರಾಗಿ ವಿಸ್ಮಿತರಾದರು. ॥ ೪೨ ॥ ದ್ವಾರಕೆಯಲ್ಲಿ ಭಗವಾನ್ ಶ್ರೀಕೃಷ್ಣನು ಗೃಹಸ್ಥರಂತೆಯೇ ಧರ್ಮ, ಅರ್ಥ, ಕಾಮಗಳೆಂಬ ಪುರುಷಾರ್ಥಗಳನ್ನು ಅತ್ಯಂತ ಶ್ರದ್ಧೆಯಿಂದ ಆಚರಿಸುತ್ತಿದ್ದನು. ಅವನು ದೇವರ್ಷಿ ನಾರದರನ್ನು ಬಹಳವಾಗಿ ಸನ್ಮಾನಿಸಿದನು. ನಾರದರು ಸುಪ್ರೀತರಾಗಿ ಭಗವಂತನನ್ನು ಸ್ಮರಿಸುತ್ತಾ ಅಲ್ಲಿಂದ ಹೊರಟು ಹೋದರು. ॥ ೪೩ ॥

ಪರೀಕ್ಷಿತ ಮಹಾರಾಜ! ಭಗವಾನ್ ನಾರಾಯಣನು ಅಖಿಲ ಜಗತ್ತಿನ ಕಲ್ಯಾಣಕ್ಕಾಗಿ ತನ್ನ ಅಚಿಂತ್ಯ ಮಹಾಶಕ್ತಿಯಾದ ಯೋಗಮಾಯೆಯನ್ನು ಸ್ವೀಕರಿಸಿಕೊಂಡು ಮನುಷ್ಯರಂತೆ ಲೀಲೆ ಮಾಡುತ್ತಿದ್ದನು. ಹದಿನಾರು ಸಾವಿರಕ್ಕಿಂತಲೂ ಹೆಚ್ಚಾಗಿದ್ದ ಪತ್ನಿಯರು ಲಜ್ಜೆ ಸೌಹಾರ್ದ, ಕಟಾಕ್ಷವೀಕ್ಷಣೆ, ಮಂದಹಾಸ ಇವುಗಳಿಂದ ಅವನ ಸೇವೆ ಮಾಡುತ್ತಿದ್ದರು. ಅಂತಹ ತನ್ನ ಪ್ರೇಯಸಿಯರೊಡನೆ ಶ್ರೀಕೃಷ್ಣನು ವಿಹರಿಸುತ್ತಿದ್ದನು. ॥ ೪೪ ॥ ಮಹಾರಾಜ! ಭಗವಾನ್ ಶ್ರೀಕೃಷ್ಣನು ಮಾಡಿತೋರಿದ ಲೀಲೆಗಳನ್ನು ಬೇರೆ ಯಾರೂ ಮಾಡಲಾರರು. ಅವನೇ ವಿಶ್ವದ ಉತ್ಪತ್ತಿ, ಸ್ಥಿತಿ, ಪ್ರಳಯಗಳಿಗೆ ಪರಮ ಕಾರಣನಾಗಿದ್ದಾನೆ. ಅವನ ಲೀಲೆಗಳನ್ನು ಹಾಡುವವನು, ಕೇಳುವವನು ಮತ್ತು ಗಾನಮಾಡಲು ಪ್ರೋತ್ಸಾಹಿಸುವವನು ಮೋಕ್ಷಕ್ಕೆ ಮಾರ್ಗಸ್ವರೂಪನಾದ ಶ್ರೀಕೃಷ್ಣನಲ್ಲಿ ಪರಮ ಭಕ್ತಿಯುಳ್ಳವನಾಗುವನು. ॥ ೪೫ ॥

ಅರವತ್ತೊಂಭತ್ತನೆಯ ಅಧ್ಯಾಯವು ಮುಗಿಯಿತು. ॥ ೬೯ ॥
ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಉತ್ತರಾರ್ಧೇ
ಕೃಷ್ಣಗಾರ್ಹಸ್ಥ್ಯದರ್ಶನಂ ನಾಮೈಕೋನಸಪ್ತತಿತಮೋಽಧ್ಯಾಯಃ ॥ ೬೯ ॥

# ಎಪ್ಪತ್ತನೆಯ ಅಧ್ಯಾಯ

## ಶ್ರೀಕೃಷ್ಣನ ದಿನಚರ್ಯೆ ಮತ್ತು ಜರಾಸಂಧನ ಬಂದಿಗಳಾಗಿದ್ದ ರಾಜರ ದೂತನ ಆಗಮನ

ಶ್ರೀಶುಕ ಉವಾಚ

**ಅಥೋಷಸ್ಯುಪವೃತ್ತಾಯಾಂ ಕುಕ್ಕುಟಾನ್ ಕೂಜತೋಽಶಪನ್ ।**
**ಗೃಹೀತಕಂಠ್ಯಃ ಪತಿಭಿರ್ಮಾಧವ್ಯೋ ವಿರಹಾತುರಾಃ**
**॥ ೧ ॥**

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** - ಪರೀಕ್ಷಿದ್ರಾಜನೇ! ಬೆಳಗಾಗಿ ಕೋಳಿ ಕೂಗುತ್ತಲೇ ಶ್ರೀಕೃಷ್ಣನ ಬಾಹುಲತೆಗಳಿಂದ ಬಳಸಲ್ಪಟ್ಟ ಕಂಠಗಳುಳ್ಳ ಶ್ರೀಕೃಷ್ಣನ ಪತ್ನಿಯರು ಕಾಂತನು ನಮ್ಮನ್ನು ಅಗಲುವನೆಂಬ ಆಶಂಕೆಯಿಂದ ವ್ಯಾಕುಲರಾಗಿ ಕೋಳಿಗಳನ್ನೇ ಬೈಯ್ಯುತ್ತಿದ್ದರು. ॥ ೧ ॥

ವಯಾಂಸ್ಯರೂರುವನ್ ಕೃಷ್ಣಂ ಬೋಧಯಂತೀವ ವಂದಿನಃ ।
ಗಾಯತ್ಸ್ವಲಿಷ್ವನಿದ್ರಾಣಿ ಮಂದಾರವನವಾಯುಭಿಃ ॥ ೨ ॥

ಮುಹೂರ್ತಂ ತಂ ತು ವೈದರ್ಭೀ ನಾಮೃಷ್ಯದತಿಶೋಭನಮ್ ।
ಪರಿರಂಭಣವಿಶ್ಲೇಷಾತ್ ಪ್ರಿಯಬಾಹ್ವಂತರಂ ಗತಾ ॥ ೩ ॥

ಬ್ರಾಹ್ಮೇ ಮುಹೂರ್ತ ಉತ್ಥಾಯ ವಾರ್ಯುಪಸ್ಪೃಶ್ಯ ಮಾಧವಃ ।
ದಧ್ಯೌ ಪ್ರಸನ್ನಕರಣ ಆತ್ಮಾನಂ ತಮಸಃ ಪರಮ್ ॥ ೪ ॥

ಏಕಂ ಸ್ವಯಂಜ್ಯೋತಿರನನ್ಯಮವ್ಯಯಂ
ಸ್ವಸಂಸ್ಥಯಾ ನಿತ್ಯನಿರಸ್ತಕಲ್ಮಷಮ್ ।
ಬ್ರಹ್ಮಾಖ್ಯಮಸ್ಯೋದ್ಭವನಾಶಹೇತುಭಿಃ
ಸ್ವಶಕ್ತಿಭಿರ್ಲಕ್ಷಿತಭಾವನಿರ್ವೃತಿಮ್ ॥ ೫ ॥

ಅಥಾಪ್ಲುತೋಽಂಭಸ್ಯಮಲೇ ಯಥಾವಿಧಿ
ಕ್ರಿಯಾಕಲಾಪಂ ಪರಿಧಾಯ ವಾಸಸೀ ।
ಚಕಾರ ಸಂಧ್ಯೋಪಗಮಾದಿ ಸತ್ತಮೋ
ಹುತಾನಲೋ ಬ್ರಹ್ಮ ಜಜಾಪ ವಾಗ್ಯತಃ ॥ ೬ ॥

ಉಪಸ್ಥಾಯಾರ್ಕಮುದ್ಯಂತಂ ತರ್ಪಯಿತ್ವಾಽಽತ್ಮನಃ ಕಲಾಃ ।
ದೇವಾನೃಷೀನ್ ಪಿತೄನ್ವೃದ್ಧಾನ್ ವಿಪ್ರಾನಭ್ಯರ್ಚ್ಯ ಚಾತ್ಮವಾನ್ ॥ ೭ ॥

ಧೇನೂನಾಂ ರುಕ್ಮಶೃಂಗೀಣಾಂ ಸಾಧ್ವೀನಾಂ ಮೌಕ್ತಿಕಸ್ರಜಾಮ್ ।
ಪಯಸ್ವಿನೀನಾಂ ಗೃಷ್ಟೀನಾಂ ಸವತ್ಸಾನಾಂ ಸುವಾಸಸಾಮ್ ॥ ೮ ॥

ಆ ಸಮಯದಲ್ಲಿ ಪಾರಿಜಾತಪುಷ್ಪದ ಸುಗಂಧಿತ ಗಾಳಿಯು ಮಂದ-ಮಂದವಾಗಿ ಬೀಸುತ್ತಿತ್ತು. ದುಂಬಿಗಳು ಝೇಂಕರಿಸುತ್ತಾ ಸುಪ್ರಭಾತವನ್ನು ಹಾಡುತ್ತಿದ್ದವು. ನಿದ್ದೆಯಿಂದ ಎಚ್ಚೆತ್ತ ಪಕ್ಷಿಗಳು ವಂದಿ-ಮಾಗಧರಂತೆ ಮಧುರ ಸ್ವರಗಳಿಂದ ಶ್ರೀಕೃಷ್ಣನನ್ನು ಎಚ್ಚರಿಸುತ್ತಿವೆಯೋ ಎಂಬಂತೆ ಚಿಲಿ-ಪಿಲಿಗುಟ್ಟುತ್ತಿದ್ದವು. ॥ ೨ ॥ ಪ್ರಿಯತಮನ ಬಾಹುಪಾಶಗಳ ಅಂತರ್ಗತಳಾಗಿದ್ದ ರುಕ್ಮಿಣೀ ದೇವಿಯು ಆಲಿಂಗನಕ್ಕೆ ವಿಚ್ಛಿತ್ತಿಯುಂಟಾಗುವುದೆಂಬ ಭಯದಿಂದ ಮಂಗಳಕರವಾದ ಬ್ರಾಹ್ಮಮುಹೂರ್ತವು ಬಂದುದನ್ನು ಸಹಿಸದೇ ಹೋದಳು. ॥ ೩ ॥ ಭಗವಾನ್ ಶ್ರೀಕೃಷ್ಣನು ಪ್ರತಿದಿನವೂ ಬ್ರಾಹ್ಮ ಮುಹೂರ್ತದಲ್ಲೇ ಎದ್ದು ಕೈ-ಕಾಲುಗಳನ್ನು ತೊಳೆದು ಕೊಂಡು, ಆಚಮನಮಾಡಿ, ಮಾಯಾತೀತವಾದ ಚಿದಾತ್ಮ ಸ್ವರೂಪವನ್ನು ಧ್ಯಾನಮಾಡಲು ತೊಡಗುವನು. ಆ ಸಮಯದಲ್ಲಿ ಅವನ ರೋಮ-ರೋಮಗಳು ಆನಂದದಿಂದ ಪ್ರಸನ್ನವಾಗಿ ಇರುತ್ತಿದ್ದವು. ॥ ೪ ॥ ಪರೀಕ್ಷಿದ್ರಾಜನೇ ! ಭಗವಂತನ ಆ ಆತ್ಮ ಸ್ವರೂಪವು ಅದ್ವಿತೀಯವೂ, ಅಖಂಡವೂ, ಅವಿನಾಶಿಯೂ ಆದ ಸತ್ಯ ಸ್ವರೂಪವಾಗಿದೆ. ಚಂದ್ರಸೂರ್ಯರು ನೇತ್ರೇಂದ್ರಿಯದ ಮೂಲವಾಗಿಯೂ, ನೇತ್ರೇಂದ್ರಿಯವು ಚಂದ್ರ-ಸೂರ್ಯರ ಮೂಲಕವಾಗಿಯೂ ಪ್ರಕಾಶಗೊಳ್ಳುವಂತೆ ಆತ್ಮಸ್ವರೂಪವು ಬೇರೆ ಯಾವುದರಿಂದಲೂ ಪ್ರಕಾಶಿಸುವುದಿಲ್ಲ. ಸ್ವಯಂ ಪ್ರಕಾಶವಾಗಿದೆ. ಅದು ಸ್ವಸ್ವರೂಪದಲ್ಲಿ ಸದಾ-ಸರ್ವದಾ ಕಾಲಾತೀತವಾಗಿ ಏಕರಸವಾಗಿ ಇರುವುದರಿಂದ ಅವಿದ್ಯೆಯು ಅದನ್ನು ಸ್ಪರ್ಶಿಸಲೂ ಕೂಡ ಸಮರ್ಥವಾಗುವುದಿಲ್ಲ. ಜಗತ್ತಿನ ಉತ್ಪತ್ತಿ, ಸ್ಥಿತಿ ಮತ್ತು ನಾಶಕ್ಕೆ ಕಾರಣಭೂತರಾದ ಬ್ರಹ್ಮಶಕ್ತಿ, ವಿಷ್ಣುಶಕ್ತಿ, ರುದ್ರಶಕ್ತಿಗಳ ಮೂಲಕವಾಗಿ ಆ ಆತ್ಮಸ್ವರೂಪವು ಏಕರಸ ಸತ್ತ್ವರೂಪವಾಗಿ ಆನಂದ ಸ್ವರೂಪವಾಗಿರುವುದೆಂದು ಊಹಿಸಬಹುದು. ಅದನ್ನು ತಿಳಿಸುವುದಕ್ಕಾಗಿಯೇ 'ಬ್ರಹ್ಮ' ಎಂಬ ಹೆಸರಿನಿಂದ ಹೇಳಲಾಗಿದೆ. ಭಗವಾನ್ ಶ್ರೀಕೃಷ್ಣನು ತನ್ನ ಆ ಆತ್ಮಸ್ವರೂಪವನ್ನೇ ಧ್ಯಾನಮಾಡುತ್ತಾನೆ. ॥ ೫ ॥ ಅನಂತರ ಅವನು ವಿಧಿಪೂರ್ವಕವಾಗಿ ನಿರ್ಮಲವೂ ಪವಿತ್ರವೂ ಆದ ನೀರಿನಲ್ಲಿ ಮುಳುಗಿ ಸ್ನಾನಮಾಡುವನು. ಮತ್ತೆ ಶುದ್ಧವಾದ ಧೋತಿಯನ್ನುಟ್ಟು ಉತ್ತರೀಯವನ್ನು ಹೊದ್ದು ಸಂಧ್ಯಾ ವಂದನೆಯೇ ಮೊದಲಾದ ನಿತ್ಯಕರ್ಮಗಳನ್ನು ಮಾಡುತ್ತಾನೆ. ಬಳಿಕ ಹವನ ಮಾಡಿ, ಮೌನವಾಗಿ ಗಾಯತ್ರಿಯನ್ನು ಜಪಿಸುವನು. ॥ ೬ ॥ ಬಳಿಕ ಸೂರ್ಯನು ಉದಯಿಸುವವರೆಗೆ ಸೂರ್ಯೋಪಸ್ಥಾನವನ್ನು ಮಾಡಿ, ತನ್ನ ಕಲಾಸ್ವರೂಪರಾದ ದೇವತೆಗಳಿಗೆ, ಋಷಿಗಳಿಗೆ ಮತ್ತು ಪಿತೃಗಳಿಗೆ ತರ್ಪಣಗಳನ್ನು ಕೊಡುತ್ತಿದ್ದನು. ಮತ್ತೆ ಕುಲವೃದ್ಧರನ್ನು, ಬ್ರಾಹ್ಮಣರನ್ನು ಯಥಾವಿಧಿಯಾಗಿ ಪೂಜಿಸುವನು. ಆನಂತರ ಮನನಶೀಲನಾದ ಶ್ರೀಕೃಷ್ಣನು ಹಾಲು ಕೊಡುವ, ಸಾಧು ಸ್ವಭಾವದ ಸವತ್ಸಗೋವುಗಳನ್ನು ದಾನ ಮಾಡುತ್ತಿದ್ದನು. ಆಗ ಆ ಗೋವುಗಳನ್ನು ಸುಂದರವಾದ ವಸ್ತ್ರಗಳಿಂದ, ಮುತ್ತಿನಹಾರಗಳಿಂದ ಅಲಂಕರಿಸಿ, ಅವುಗಳ ಕೊಂಬುಗಳಿಗೆ ಚಿನ್ನವನ್ನು ಅಲಂಕರಿಸಿ, ಗೊರಸುಗಳಿಗೆ ಬೆಳ್ಳಿಯ ಕವಚ

ದದೌ ರೂಪ್ಯಖುರಾಗ್ರಾಣಾಂ ಕ್ಷೌಮಾಜಿನತಿಲೈಃ ಸಹ ।
ಅಲಂಕೃತೇಭ್ಯೋ ವಿಪ್ರೇಭ್ಯೋ ಬದ್ವಂ ಬದ್ವಂ ದಿನೇ ದಿನೇ
॥ ೯ ॥

ಗೋವಿಪ್ರದೇವತಾವೃದ್ಧಗುರೂನ್ ಭೂತಾನಿ ಸರ್ವಶಃ ।
ನಮಸ್ಕೃತ್ಯಾತ್ಮಸಂಭೂತೀರ್ಮಂಗಲಾನಿ ಸಮಸ್ಪೃಶತ್
॥ ೧೦ ॥

ಆತ್ಮಾನಂ ಭೂಷಯಾಮಾಸ ನರಲೋಕವಿಭೂಷಣಮ್ ।
ವಾಸೋಭಿರ್ಭೂಷಣೈಃ ಸ್ವೀಯೈರ್ದಿವ್ಯಸ್ರಗನುಲೇಪನೈಃ
॥ ೧೧ ॥

ಅವೇಕ್ಷ್ಯಾಜ್ಯಂ ತಥಾಽಽದರ್ಶಂ ಗೋವೃಷದ್ವಿಜದೇವತಾಃ ।
ಕಾಮಾಂಶ್ಚ ಸರ್ವವರ್ಣಾನಾಂ ಪೌರಾಂತಃಪುರಚಾರಿಣಾಮ್ ।
ಪ್ರದಾಪ್ಯ ಪ್ರಕೃತೀಃ ಕಾಮೈಃ ಪ್ರತೋಷ್ಯ ಪ್ರತ್ಯನಂದತ
॥ ೧೨ ॥

ಸಂವಿಭಜ್ಯಾಗ್ರತೋ ವಿಪ್ರಾನ್ ಸ್ರಕ್‌ತಾಂಬೂಲಾನುಲೇಪನೈಃ ।
ಸುಹೃದಃ ಪ್ರಕೃತೀರ್ದಾರಾನುಪಾಯುಂಕ್ತ ತತಃ ಸ್ವಯಮ್
॥ ೧೩ ॥

ತಾವತ್ಸೂತ ಉಪಾನೀಯ ಸ್ಯಂದನಂ ಪರಮಾದ್ಭುತಮ್ ।
ಸುಗ್ರೀವಾದ್ಯೈರ್ಹಯೈರ್ಯುಕ್ತಂ ಪ್ರಣಮ್ಯಾವಸ್ಥಿತೋಽಗ್ರತಃ
॥ ೧೪ ॥

ಗೃಹೀತ್ವಾ ಪಾಣಿನಾ ಪಾಣೀ ಸಾರಥೇಸ್ತಮಥಾರುಹತ್ ।
ಸಾತ್ಯಕ್ಯುದ್ಧವಸಂಯುಕ್ತಃ ಪೂರ್ವಾದ್ರಿಮಿವ ಭಾಸ್ಕರಃ
॥ ೧೫ ॥

ಈಕ್ಷಿತೋಽಂತಃಪುರಸ್ತ್ರೀಣಾಂ ಸವ್ರೀಡಪ್ರೇಮವೀಕ್ಷಿತೈಃ ।
ಕೃಚ್ಛ್ರಾದ್ವಿಸೃಷ್ಟೋ ನಿರಗಾಜ್ಜಾತಹಾಸೋ ಹರನ್ ಮನಃ
॥ ೧೬ ॥

ಸುಧರ್ಮಾಖ್ಯಾಂ ಸಭಾಂ ಸರ್ವೈರ್ವೃಷ್ಣಿಭಿಃ ಪರಿವಾರಿತಃ ।
ಪ್ರಾವಿಶದ್ಯನ್ನಿವಿಷ್ಟಾನಾಂ ನ ಸಂತ್ಯಂಗ ಷಡೂರ್ಮಯಃ
॥ ೧೭ ॥

ತತ್ರೋಪವಿಷ್ಟಃ ಪರಮಾಸನೇ ವಿಭು-
ರ್ಬಭೌ ಸ್ವಭಾಸಾ ಕಕುಭೋಽವಭಾಸಯನ್ ।
ವೃತೋ ನೃಸಿಂಹೈರ್ಯದುಭಿರ್ಯದೂತ್ತಮೋ
ಯಥೋಡುರಾಜೋ ದಿವಿ ತಾರಕಾಗಣೈಃ ॥ ೧೮ ॥

ಗಳನ್ನು ತೊಡಿಸಲಾಗುತ್ತಿತ್ತು. ಶ್ರೀಕೃಷ್ಣನು ಬ್ರಾಹ್ಮಣರನ್ನು ವಸ್ತ್ರಾಭೂಷಣಗಳಿಂದ ಸತ್ಕರಿಸಿ, ರೇಷ್ಮೆ ವಸ್ತ್ರ, ಮೃಗಚರ್ಮ ಮತ್ತು ಎಳ್ಳಿನೊಂದಿಗೆ ಪ್ರತಿದಿನವೂ ಹದಿ ಮೂರುಸಾವಿರದ ಎಂಭತ್ತನಾಲ್ಕು (ಒಂದು ಬದ್ವ) ಗೋವುಗಳನ್ನು ದಾನಮಾಡುತ್ತಿದ್ದನು. ॥ ೮-೯ ॥ ಬಳಿಕ ತನ್ನ ವಿಭೂತಿರೂಪವಾದ ಗೋವು, ಬ್ರಾಹ್ಮಣ, ದೇವತೆ, ಕುಲವೃದ್ಧರು, ಗುರುಗಳು ಮತ್ತು ಸಮಸ್ತ ಪ್ರಾಣಿಗಳನ್ನು ನಮಸ್ಕರಿಸಿ ಮಾಂಗಲಿಕ ವಸ್ತುಗಳನ್ನು ಸ್ಪರ್ಶಿಸುತ್ತಿದ್ದನು. ॥ ೧೦ ॥ ಪರೀಕ್ಷಿತನೇ ! ಭಗವಂತನ ಶರೀರದ ಸಹಜ ಸೌಂದರ್ಯವೇ ಮನುಷ್ಯಲೋಕದ ಅಲಂಕಾರವಾಗಿದ್ದರೂ ಅವನು ಪೀತಾಂಬರವೇ ಮೊದಲಾದ ದಿವ್ಯ ವಸ್ತ್ರಗಳನ್ನು, ಕೌಸ್ತುಭಾದಿ ಆಭೂಷಣಗಳನ್ನು, ಪುಷ್ಪಹಾರಗಳನ್ನು ಧರಿಸಿಕೊಂಡು, ಚಂದನವೇ ಮುಂತಾದ ದಿವ್ಯ ಪರಿಮಳ ದ್ರವ್ಯಗಳಿಂದ ತನ್ನನ್ನು ಅಲಂಕರಿಸಿಕೊಳ್ಳುತ್ತಿದ್ದನು. ॥ ೧೧ ॥ ಮತ್ತೆ ಅವನು ತುಪ್ಪದಲ್ಲಿಯೂ, ದರ್ಪಣದಲ್ಲಿಯೂ ತನ್ನ ಮುಖಾರವಿಂದವನ್ನು ನೋಡಿಕೊಂಡು, ಗೋ, ವೃಷಭ, ಬ್ರಾಹ್ಮಣ, ದೇವತಾ ಪ್ರತಿಮೆಗಳನ್ನು ದರ್ಶಿಸುವನು. ಪುನಃ ಪುರವಾಸಿಗಳ ಮತ್ತು ಅಂತಃಪುರದಲ್ಲಿ ವಾಸಿಸುವ ನಾಲ್ಕು ವರ್ಣದ ಜನರುಗಳ ಅಭಿಲಾಷೆಯನ್ನು ಪೂರ್ಣಗೊಳಿಸಿ, ಅವರನ್ನು ಸಂತುಷ್ಟಗೊಳಿಸಿ, ಬೇರೆ ಗ್ರಾಮವಾಸಿ ಪ್ರಜೆಗಳ ಕಾಮನೆಗಳನ್ನು ಪೂರ್ಣಗೊಳಿಸಿ, ಹೀಗೆ ಎಲ್ಲರನ್ನು ಸಂತೋಷಪಡಿಸಿ, ಅವರನ್ನು ನೋಡಿ ತಾನು ಸಂತೋಷ ಗೊಳ್ಳುವನು. ॥ ೧೨ ॥ ಅವನು ಪುಷ್ಪಮಾಲೆ, ತಾಂಬೂಲ, ಚಂದನ ಮತ್ತು ಅಂಗರಾಗ ಮೊದಲಾದ ವಸ್ತುಗಳನ್ನು ಮೊದಲಿಗೆ ಬ್ರಾಹ್ಮಣರಿಗೆ, ಸ್ವಜನ-ಸಂಬಂಧಿಗಳಿಗೆ, ಮಂತ್ರಿ, ರಾಣಿಯರಿಗೆ ಹಂಚಿಕೊಟ್ಟು ಉಳಿದುದನ್ನು ತಾನು ಉಪಯೋಗಿಸುತ್ತಿದ್ದನು. ॥ ೧೩ ॥ ಭಗವಂತನು ಇಷ್ಟೆಲ್ಲ ಮಾಡುವಷ್ಟರಲ್ಲಿ ಸಾರಥಿಯಾದ ದಾರುಕನು ಸುಗ್ರೀವಾದಿ ಕುದುರೆಗಳನ್ನು ಹೂಡಿದ ಅತ್ಯಂತ ಅದ್ಭುತವಾದ ರಥವನ್ನು ತಂದು ನಿಲ್ಲಿಸಿ ಶ್ರೀಕೃಷ್ಣನಿಗೆ ವಂದಿಸಿ ಅವನ ಮುಂದೆ ನಿಲ್ಲುತ್ತಿದ್ದನು. ॥ ೧೪ ॥ ಅನಂತರ ಭಗವಾನ್ ಶ್ರೀಕೃಷ್ಣನು ಸಾತ್ಯಕಿ ಮತ್ತು ಉದ್ಧವರೊಂದಿಗೆ, ಸಾರಥಿಯ ಕೈಯನ್ನು ಹಿಡಿದುಕೊಂಡು ಭುವನ ಭಾಸ್ಕರ ಭಗವಾನ್ ಸೂರ್ಯನು ಉದಯಾಚಲದಲ್ಲಿ ಆರೂಢನಾಗುವಂತೆಯೇ ರಥಾರೂಢನಾಗುವನು. ॥ ೧೫ ॥ ಆ ಸಮಯದಲ್ಲಿ ರಾಣಿವಾಸದ ಸ್ತ್ರೀಯರು ನಾಚಿಕೆ ಮತ್ತು ಪ್ರೇಮಪೂರ್ಣವಾದ ನೋಟದಿಂದ ಅವನನ್ನು ನೋಡುತ್ತಾ ಬಹಳ ಕಷ್ಟದಿಂದ ಬೀಳ್ಕೊಡುತ್ತಿದ್ದರು. ಭಗವಂತನು ಅವರ ಚಿತ್ತವನ್ನು ಅಪಹರಿಸಿಕೊಂಡು ಅರಮನೆಯಿಂದ ಹೊರಡುತ್ತಿದ್ದನು. ॥ ೧೬ ॥

ಪರೀಕ್ಷಿತನೇ ! ಅನಂತರ ಭಗವಾನ್ ಶ್ರೀಕೃಷ್ಣನು ಸಮಸ್ತ ಯದುವಂಶೀಯರೊಂದಿಗೆ ಸುಧರ್ಮಾ ಎಂಬ ಸಭೆಯನ್ನು ಪ್ರವೇಶಿಸುವನು. ಆ ಸಭೆಯ ಮಹಿಮೆ ಎಂದರೆ ಅದರಲ್ಲಿ ಕುಳಿತಿರುವವರಿಗೆ ಹಸಿವು-ಬಾಯಾರಿಕೆ, ಶೋಕ-ಮೋಹ, ಜರಾಮೃತ್ಯುವೆಂಬ ಆರು ಊರ್ಮಿಗಳು ಬಾಧಿಸುವುದಿಲ್ಲ. ॥ ೧೭ ॥ ಭಗವಾನ್ ಶ್ರೀಕೃಷ್ಣನು ತನ್ನ ಅಂಗಕಾಂತಿಯಿಂದ ದಶದಿಕ್ಕುಗಳನ್ನು ಬೆಳಗಿಸುತ್ತಾ ಶ್ರೇಷ್ಠ ಸಿಂಹಾಸನದಲ್ಲಿ ವಿರಾಜಿಸುವನು. ಆ ಸಮಯದಲ್ಲಿ ಯದುವಂಶೀಯ ವೀರರ ನಡುವೆ ಯದುವಂಶಶಿರೋಮಣಿ ಭಗವಾನ್ ಶ್ರೀಕೃಷ್ಣನು ಆಕಾಶದಲ್ಲಿ ತಾರೆಯರಿಂದ ಸುತ್ತುವರಿಯಲ್ಪಟ್ಟ ಚಂದ್ರನಂತೇ ಆ ಸಭೆಯಲ್ಲಿ ಶೋಭಿಸುತ್ತಿದ್ದನು. ॥ ೧೮ ॥

ತತ್ರೋಪಮಂತ್ರಿಣೋ ರಾಜನ್ ನಾನಾಹಾಸ್ಯರಸೈರ್ವಿಭುಮ್ ।
ಉಪತಸ್ಥುರ್ನಟಾಚಾರ್ಯಾ ನರ್ತಕ್ಯಸ್ತಾಂಡವೈಃ ಪೃಥಕ್ ॥ ೧೯ ॥

ಮೃದಂಗವೀಣಾಮುರಜವೇಣುತಾಲದರಸ್ವನೈಃ ।
ನನೃತುರ್ಜಗುಸ್ತುಷ್ಟುವುಶ್ಚ ಸೂತಮಾಗಧವಂದಿನಃ ॥ ೨೦ ॥

ತತ್ರಾಹುರ್ಬ್ರಾಹ್ಮಣಾಃ ಕೇಚಿದಾಸೀನಾ ಬ್ರಹ್ಮವಾದಿನಃ ।
ಪೂರ್ವೇಷಾಂ ಪುಣ್ಯಯಶಸಾಂ ರಾಜ್ಞಾಂ ಚಾಕಥಯನ್ಕಥಾಃ ॥ ೨೧ ॥

ತತ್ರೈಕಃ ಪುರುಷೋ ರಾಜನ್ನಾಗತೋಽಪೂರ್ವದರ್ಶನಃ ।
ವಿಜ್ಞಾಪಿತೋ ಭಗವತೇ ಪ್ರತೀಹಾರೈಃ ಪ್ರವೇಶಿತಃ ॥ ೨೨ ॥

ಸ ನಮಸ್ಕೃತ್ಯ ಕೃಷ್ಣಾಯ ಪರೇಶಾಯ ಕೃತಾಂಜಲಿಃ ।
ರಾಜ್ಞಾಮಾವೇದಯದ್ದುಃಖಂ ಜರಾಸಂಧನಿರೋಧಜಮ್ ॥ ೨೩ ॥

ಯೇ ಚ ದಿಗ್ವಿಜಯೇ ತಸ್ಯ ಸಂನತಿಂ ನ ಯಯುರ್ನೃಪಾಃ ।
ಪ್ರಸಹ್ಯ ರುದ್ಧಾಸ್ತೇನಾಸನ್ನಯುತೇ ದ್ವೇ ಗಿರಿವ್ರಜೇ ॥ ೨೪ ॥

ಕೃಷ್ಣ ಕೃಷ್ಣಾಪ್ರಮೇಯಾತ್ಮನ್ ಪ್ರಪನ್ನಭಯಭಂಜನ ।
ವಯಂ ತ್ವಾಂ ಶರಣಂ ಯಾಮೋ ಭವಭೀತಾಃ ಪೃಥಗ್ಧಿಯಃ ॥ ೨೫ ॥

ಲೋಕೋ ವಿಕರ್ಮನಿರತಃ ಕುಶಲೇ ಪ್ರಮತ್ತಃ
ಕರ್ಮಣ್ಯಯಂ ತ್ವದುದಿತೇ ಭವದರ್ಚನೇ ಸ್ವೇ ।
ಯಸ್ತಾವದಸ್ಯ ಬಲವಾನಿಹ ಜೀವಿತಾಶಾಂ
ಸದ್ಯಶ್ಛಿನತ್ತ್ಯನಿಮಿಷಾಯ ನಮೋಽಸ್ತು ತಸ್ಮೈ ॥ ೨೬ ॥

ಲೋಕೇ ಭವಾಞ್ಜಗದಿನಃ ಕಲಯಾವತೀರ್ಣಃ
ಸದ್ರಕ್ಷಣಾಯ ಖಲನಿಗ್ರಹಣಾಯ ಚಾನ್ಯಃ ।
ಕಶ್ಚಿತ್ತ್ವದೀಯಮತಿಯಾತಿ ನಿದೇಶಮೀಶ
ಕಿಂ ವಾ ಜನಃ ಸ್ವಕೃತಮೃಚ್ಛತಿ ತನ್ನ ವಿದ್ಮಃ ॥ ೨೭ ॥

ಪರೀಕ್ಷಿತನೇ! ಆ ಸಭೆಯಲ್ಲಿ ವಿದೂಷಕರು ನಾನಾ ವಿಧದ ಹಾಸ್ಯಚಟಾಕಿಗಳಿಂದ, ನಾಟ್ಯಾಚಾರ್ಯರು ನಟನೆಯಿಂದ, ನರ್ತಕಿಯರು ಬೇರೆ-ಬೇರೆ ಗುಂಪು-ಗುಂಪಾಗಿ ಕಲಾಪೂರ್ಣ ನೃತ್ಯಗಳಿಂದ ಭಗವಂತನ ಸೇವೆ ಮಾಡುತ್ತಿದ್ದರು. ॥ ೧೯ ॥ ಆಗ ಮೃದಂಗ, ವೀಣೆ, ಪಖವಾಜ್, ಕೊಳಲು, ಕರತಾಳ, ಶಂಖ ಮೊದಲಾದ ವಾದ್ಯಗಳು ಮೊಳಗುತ್ತಿದ್ದವು. ಸೂತ-ಮಾಗಧ ವಂದೀ ಜನರು ಹಾಡುತ್ತಾ-ಕುಣಿಯುತ್ತಾ ಭಗವಂತನನ್ನು ಸ್ತುತಿಸುತ್ತಿದ್ದರು. ॥ ೨೦ ॥ ಕೆಲವು ವ್ಯಾಖ್ಯಾನ ಕುಶಲರಾದ ಬ್ರಾಹ್ಮಣರು ಅಲ್ಲಿ ಕುಳಿತು ಬ್ರಹ್ಮತತ್ತ್ವವನ್ನು ಪ್ರತಿಪಾದಿಸುತ್ತಿದ್ದರು. ಮತ್ತೆ ಕೆಲವರು ಪೂರ್ವಕಾಲದ ಪವಿತ್ರಕೀರ್ತಿಗಳಾದ ರಾಜರ ಕಥೆಗಳನ್ನು ಹೇಳುತ್ತಿದ್ದರು. ಹೀಗೆಯೇ ಶ್ರೀಕೃಷ್ಣನ ದಿನಚರಿಯು ಅನುದಿನವೂ ನಡೆಯುತ್ತಿತ್ತು. ॥ ೨೧ ॥

ಹೀಗೆಯೇ ಒಂದು ದಿನ ಭಗವಂತನು ಸುಧರ್ಮಾ ಸಭೆಯಲ್ಲಿ ಸಿಂಹಾಸನಾರೂಢನಾಗಿ ಕುಳಿತಿರುವಾಗ ಸಭಾದ್ವಾರಕ್ಕೆ ಒಬ್ಬ ಅಪರಿಚಿತ ವ್ಯಕ್ತಿಯು ಬಂದನು. ದ್ವಾರಪಾಲಕರು ಶ್ರೀಕೃಷ್ಣನಿಗೆ ಇದರ ಸೂಚನೆಯಿತ್ತು ಅವನನ್ನು ಸಭೆಗೆ ಕರೆತಂದರು. ॥ ೨೨ ॥ ಆ ಮನುಷ್ಯನು ಪರಮೇಶ್ವರನಾದ ಶ್ರೀಕೃಷ್ಣನಿಗೆ ಕೈಜೋಡಿಸಿ ನಮಸ್ಕರಿಸಿ ಜರಾಸಂಧನಿಂದ ಸೆರೆಹಿಡಿಯಲ್ಪಟ್ಟ ರಾಜರಿಗೆ ಉಂಟಾದ ದುಃಖವನ್ನು ವಿವರಿಸಿ ಹೇಳಿದನು. ಜರಾಸಂಧನು ದಿಗ್ವಿಜಯದ ಸಮಯದಲ್ಲಿ ಆತನಿಗೆ ತಲೆಬಾಗದಿದ್ದ ರಾಜರನ್ನು ಯುದ್ಧದಲ್ಲಿ ಪರಾಜಯಗೊಳಿಸಿ ಗಿರಿವ್ರಜದ ಸೆರೆಮನೆಯಲ್ಲಿಡುತ್ತಿದ್ದನು. ಅಂತಹವರ ಸಂಖ್ಯೆಯು ಇಪ್ಪತ್ತು ಸಾವಿರದಷ್ಟಿದೆ. ಅಂತಹ ರಾಜರು ತಮ್ಮ ಪ್ರಾರ್ಥನೆಯನ್ನು ಹೀಗೆ ಕಳಿಸಿದ್ದಾರೆ - ॥ ೨೩-೨೪ ॥ ಸಚ್ಚಿದಾನಂದ ಸ್ವರೂಪನಾದ ಶ್ರೀಕೃಷ್ಣನೇ! ಅಪ್ರಮೇಯಾತ್ಮನೇ! ಶರಣಾಗತರಾದವರ ಭಯವನ್ನು ಧ್ವಂಸಮಾಡುವವನೇ! ನಮ್ಮ ಭೇದ ಬುದ್ಧಿಯು ಅಳಿಸಿಹೋಗಿಲ್ಲ, ನಾವು ಜನ್ಮ-ಮೃತ್ಯುರೂಪವಾದ ಸಂಸಾರಚಕ್ರದಿಂದ ಭಯಗೊಂಡು ನಿನಗೆ ಶರಣು ಬಂದಿದ್ದೇವೆ. ॥ ೨೫ ॥ ಭಗವಂತಾ! ಲೋಕದಲ್ಲಿ ಅಧಿಕಾಂಶ ಜನರು ಸಕಾಮಕರ್ಮಗಳಲ್ಲಿ ಮತ್ತು ನಿಷಿದ್ಧಕರ್ಮಗಳಲ್ಲಿ ತೊಡಗಿದ್ದು ಕ್ಷೇಮಕರವಾದ ಸ್ವಧರ್ಮಗಳಲ್ಲಿ ವಿಸ್ಮರಣೆಯನ್ನು ಹೊಂದಿರುವರು. ನಿನ್ನಿಂದಲೇ ಹೇಳಲ್ಪಟ್ಟ ಪಾಂಚರಾತ್ರಾದ್ಯಾಗಮದ ಮೂಲಕ ನಿನ್ನ ಪೂಜಾದ್ಯುಪಚಾರಗಳನ್ನು ಮಾಡುವ ಮನಸ್ಸುಳ್ಳವರಾಗುವುದಿಲ್ಲ. ನೀನು ಮಹಾಬಲಿಷ್ಠನಾಗಿರುವೆ. ಕಾಲರೂಪದಿಂದ ನೀನು ಸದಾ-ಸರ್ವದಾ ಸಾವಧಾನದಿಂದಿರುತ್ತಾ ಅಂತಹವರ ಆಶಾಲತೆಯನ್ನು ಕ್ಷಣಮಾತ್ರದಲ್ಲಿ ಕತ್ತರಿಸಿ ಹಾಕುವೆ. ಅಂತಹ ಕಾಲರೂಪವಾದ ನಿನಗೆ ನಮಸ್ಕರಿಸುತ್ತೇವೆ. ॥ ೨೬ ॥ ಪ್ರಭುವೇ! ನೀನು ಜಗದೀಶ್ವರನೇ ಆಗಿರುವೆ. ಸತ್ಪುರುಷರ ರಕ್ಷಣೆಗಾಗಿಯೂ, ದುಷ್ಟರ ನಿಗ್ರಹಕ್ಕಾಗಿಯೂ ಜ್ಞಾನ-ಬಲ ಇವೇ ಮುಂತಾದ ಕಲೆಗಳೊಡನೆ ನೀನು ಅವತರಿಸಿರುವೆ. ಇಂತಹ ಸ್ಥಿತಿಯಲ್ಲಿ ಜರಾಸಂಧನಾಗಲೀ ಇತರ ರಾಜರಾಗಲೀ ನಿನ್ನ ಇಚ್ಛೆಗೆ ಮತ್ತು ಆಜ್ಞೆಗೆ ವಿರುದ್ಧವಾಗಿ ನಮ್ಮನ್ನು ಹೀಗೆ ತೊಂದರೆಪಡಿಸುತ್ತಿದ್ದಾರೆ? ಇದನ್ನು ನಾವು ಅರಿಯೆವು. ಒಂದು ವೇಳೆ 'ಜರಾಸಂಧನು ಕಷ್ಟವನ್ನು ಕೊಡುತ್ತಿಲ್ಲ, ಅವನ

ಸ್ವಪ್ನಾಯಿತಂ ನೃಪಸುಖಂ ಪರತಂತ್ರಮೀಶ
ಶಶ್ವದ್ಭಯೇನ ಮೃತಕೇನ ಧುರಂ ವಹಾಮಃ ।
ಹಿತ್ವಾ ತದಾತ್ಮನಿ ಸುಖಂ ತ್ವದನೀಹಲಭ್ಯಂ
ಕ್ಲಿಶ್ಯಾಮಹೇಽತಿಕೃಪಣಾಸ್ತವ ಮಾಯಯೇಹ ॥ ೨೮ ॥

ತನ್ನೋ ಭವಾನ್ಪ್ರಣತಶೋಕಹರಾಂಘ್ರಿಯುಗ್ಮೋ
ಬದ್ಧಾನ್ವಿಯುಂಕ್ಷ್ವ ಮಗಧಾಹ್ವಯಕರ್ಮಪಾಶಾತ್ ।
ಯೋ ಭೂಭುಜೋಽಯುತಮತಂಗಜವೀರ್ಯಮೇಕೋ
ಬಿಭ್ರದ್ರುರೋಧ ಭವನೇ ಮೃಗರಾಡಿವಾವೀಃ ॥ ೨೯ ॥

ಯೋ ವೈ ತ್ವಯಾ ದ್ವಿನವಕೃತ್ವ ಉದಾತ್ತಚಕ್ರ
ಭಗ್ನೋ ಮೃಧೇ ಖಲು ಭವಂತಮನಂತವೀರ್ಯಮ್ ।
ಜಿತ್ವಾ ನೃಲೋಕನಿರತಂ ಸಕೃದೂಢದರ್ಪೋ
ಯುಷ್ಮತ್ಪ್ರಜಾ ರುಜತಿ ನೋಽಜಿತ ತದ್ವಿಧೇಹಿ ॥ ೩೦ ॥

ದೂತ ಉವಾಚ

ಇತಿ ಮಾಗಧಸಂರುದ್ಧಾ ಭವದ್ದರ್ಶನಕಾಂಕ್ಷಿಣಃ ।
ಪ್ರಪನ್ನಾಃ ಪಾದಮೂಲಂ ತೇ ದೀನಾನಾಂ ಶಂ ವಿಧೀಯತಾಮ್ ॥ ೩೧ ॥

ಶ್ರೀಶುಕ ಉವಾಚ

ರಾಜದೂತೇ ಬ್ರುವತ್ಯೇವಂ ದೇವರ್ಷಿಃ ಪರಮದ್ಯುತಿಃ ।
ಬಿಭ್ರತ್ ಪಿಂಗಜಟಾಭಾರಂ ಪ್ರಾದುರಾಸೀದ್ಯಥಾ ರವಿಃ ॥ ೩೨ ॥

ತಂ ದೃಷ್ಟ್ವಾ ಭಗವಾನ್ ಕೃಷ್ಣಃ ಸರ್ವಲೋಕೇಶ್ವರೇಶ್ವರಃ ।
ವವಂದ ಉತ್ಥಿತಃ ಶೀರ್ಷ್ಣಾ ಸಸಭ್ಯಃ ಸಾನುಗೋ ಮುದಾ ॥ ೩೩ ॥

ರೂಪದಿಂದ, ಅವನನ್ನು ನಿಮಿತ್ತವಾಗಿಸಿಕೊಂಡು ನಮ್ಮ ಅಶುಭ ಕರ್ಮಗಳೇ ನಮಗೆ ದುಃಖಕೊಡುತ್ತಿವೆ' ಎಂದು ಹೇಳಿದರೂ ಇದು ಸರಿಯಲ್ಲ. ಏಕೆಂದರೆ, ನಾವುಗಳು ನಿನ್ನವರಾದಾಗ ನಮ್ಮ ದುಷ್ಕರ್ಮಗಳು ನಮಗೆ ಫಲಕೊಡಲು ಹೇಗೆ ಸಮರ್ಥವಾದಾವು? ಆದ್ದರಿಂದ ನೀನು ದಯೆತೋರಿ ಅವಶ್ಯವಾಗಿ ನಮ್ಮನ್ನು ಈ ಕ್ಲೇಶಗಳಿಂದ ಬಿಡುಗಡೆಗೊಳಿಸು. ॥ ೨೭ ॥ ಪ್ರಭುವೇ! ರಾಜಸೌಖ್ಯವೆಂಬುದು ಸ್ವಪ್ನಪ್ರಾಯವಾದುದು ಮತ್ತು ಪರಾಧೀನವಾದುದು. ರಾಜಸುಖವನ್ನು ಉಪಭೋಗಿಸುವ ಈ ಶರೀರವು ಜೀವಚ್ಛವದಂತಿದೆ. ಸದಾ ಭಯಗೊಂಡೇ ಹೆಣದಂತಿರುವ ಈ ಶರೀರದಿಂದ ರಾಜ್ಯದ ಹೊರೆಯನ್ನು ಹೊರುತ್ತೇವೆ. ನಿನ್ನ ಕೃಪೆಯಿಂದ ನಿಷ್ಕಾಮಕರ್ಮಗಳಿಗೆ ಪ್ರಾಪ್ತವಾಗುವ ಸ್ವತಂತ್ರವಾದ ಆತ್ಮಸುಖವನ್ನು ತ್ಯಜಿಸಿದ್ದೇವೆ. ಅಜ್ಞಾನಿಗಳಾದ ನಾವು ನಿನ್ನ ಮಾಯೆಯಿಂದ ವಿಮೋಹಿತರಾಗಿ ಬಹಳವಾಗಿ ಕ್ಲೇಶಗಳನ್ನು ಅನುಭವಿಸುತ್ತಿದ್ದೇವೆ. ॥ ೨೮ ॥ ಭಗವಂತ! ನಿನ್ನ ಚರಣಕಮಲಗಳು ಶರಣಾಗತರಾದವರ ಸಮಸ್ತ ಶೋಕಗಳನ್ನೂ, ಮೋಹಗಳನ್ನೂ ನಾಶಗೊಳಿಸುತ್ತವೆ. ಆದುದರಿಂದ ಜರಾಸಂಧರೂಪವಾದ ಕರ್ಮಬಂಧನದಿಂದ ನಮ್ಮನ್ನು ಬಿಡುಗಡೆಗೊಳಿಸು. ಪ್ರಭೋ! ಈ ಜರಾಸಂಧನು ಹತ್ತು ಸಾವಿರ ಆನೆಗಳ ಬಲವನ್ನು ಒಬ್ಬನೇ ಹೊಂದಿದ್ದಾನೆ. ಸಿಂಹವು ಕುರಿಗಳನ್ನು ತಡೆಹಿಡಿದಿರುವಂತೆ ಇವನು ನಮ್ಮನ್ನು ಬಂಧನದಲ್ಲಿರಿಸಿದ್ದಾನೆ. ॥ ೨೯ ॥ ಚಕ್ರಪಾಣಿಯೇ! ಜರಾಸಂಧನು ಹದಿನೆಂಟು ಬಾರಿ ನಿನ್ನೊಡನೆ ಯುದ್ಧಮಾಡಿ ಹದಿನೇಳು ಬಾರಿ ಪರಾಜಿತನಾಗಿ ಓಡಿದ್ದಾನೆ. ಆದರೇ ಒಂದೇ ಸಲ ನಿನ್ನನ್ನು ಗೆದ್ದಿರುವನು. ನಿನ್ನ ಶಕ್ತಿ-ಬಲ-ಪೌರುಷಗಳು ಅನಂತವಾಗಿವೆ ಎಂಬುದನ್ನು ನಾವು ಬಲ್ಲೆವು. ಹೀಗಿದ್ದರೂ ಮನುಷ್ಯರಂತೆ ಆಚರಿಸಿ ನೀನೇ ಸೋತವನಂತೆ ಅಭಿನಯಿಸಿದೆ. ಆದರೆ ಇದರಿಂದ ಅವನ ಅಹಂಕಾರವು ಬೆಳೆದು ಹೋಯಿತು. ಓ ಅಜಿತನೇ! ನಾವೆಲ್ಲರೂ ನಿನ್ನ ಭಕ್ತರಾಗಿ ಇದ್ದೇವೆ, ನಿನ್ನ ಪ್ರಜೆಗಳಾಗಿದ್ದೇವೆ ಎಂದು ತಿಳಿದು ನಮಗೆಲ್ಲ ಇನ್ನೂ ಜಾಸ್ತಿ ಕಷ್ಟಗಳನ್ನು ಕೊಡುತ್ತಿದ್ದಾನೆ. ಈಗ ನಿನಗೆ ಉಚಿತವೆನಿಸಿದಂತೆ ಮಾಡು. ॥ ೩೦ ॥

**ದೂತನು ಹೇಳಿದನು** - ಭಗವಂತಾ! ಜರಾಸಂಧನಲ್ಲಿ ಬಂದಿಯಾದ ರಾಜರು ಹೀಗೆ ನಿನ್ನಲ್ಲಿ ಪ್ರಾರ್ಥಿಸಿದ್ದಾರೆ. ಅವರೆಲ್ಲರೂ ನಿನ್ನ ಚರಣಕಮಲಗಳಲ್ಲಿ ಶರಣಾಗಿದ್ದಾರೆ ಮತ್ತು ನಿನ್ನ ದರ್ಶನವನ್ನು ಅಪೇಕ್ಷಿಸುತ್ತಿದ್ದಾರೆ. ನೀನು ದಯತೋರಿ ಆ ದೀನರಿಗೆ ಸುಖವನ್ನು ಉಂಟುಮಾಡು. ॥ ೩೧ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** - ಪರೀಕ್ಷಿತನೇ! ರಾಜದೂತನು ಹೀಗೆ ಹೇಳುತ್ತಿರುವಂತೆಯೇ ಪರಮ ತೇಜಸ್ವಿಗಳಾದ ನಾರದಮಹರ್ಷಿಗಳು ಹೊಂಬಣ್ಣದ ಜಟಾಭಾರವನ್ನು ಧರಿಸಿದ್ದ ಸೂರ್ಯನಂತೇ ತೇಜಃಪುಂಜರಾಗಿ ಶ್ರೀಕೃಷ್ಣನ ಸಭೆಗೆ ಆಗಮಿಸಿದರು. ॥ ೩೨ ॥ ಬ್ರಹ್ಮನೇ ಮೊದಲಾದ ಸಮಸ್ತ ಲೋಕಪಾಲರಿಗೂ ಏಕಮಾತ್ರಸ್ವಾಮಿಯಾದ ಶ್ರೀಕೃಷ್ಣನು ನಾರದರನ್ನು ನೋಡುತ್ತಲೇ ಹರ್ಷಗೊಂಡು ಸಭ್ಯರೊಡನೆಯೂ, ಸೇವಕರೊಡನೆಯೂ ಎದ್ದುನಿಂತು ತಲೆಬಾಗಿ ನಮಸ್ಕರಿಸಿದನು. ॥ ೩೩ ॥

ಸಭಾಜಯಿತ್ವಾ ವಿಧಿವತ್ ಕೃತಾಸನಪರಿಗ್ರಹಮ್ ।
ಬಭಾಷೇ ಸೂನೃತೈರ್ವಾಕ್ಯೈಃ ಶ್ರದ್ಧಯಾ ತರ್ಪಯನ್ ಮುನಿಮ್
॥ ३४ ॥

ಅಪಿ ಸ್ವಿದದ್ಯ ಲೋಕಾನಾಂ ತ್ರಯಾಣಾಮಕುತೋಭಯಮ್ ।
ನನು ಭೂಯಾನ್ ಭಗವತೋ ಲೋಕಾನ್ಪರ್ಯಟತೋ ಗುಣಃ
॥ ३५ ॥

ನ ಹಿ ತೇಽವಿದಿತಂ ಕಿಂಚಿತ್ ಲೋಕೇಷ್ವೀಶ್ವರಕರ್ತೃಷು ।
ಅಥ ಪೃಚ್ಛಾಮಹೇ ಯುಷ್ಮಾನ್ ಪಾಂಡವಾನಾಂ ಚಿಕೀರ್ಷಿತಮ್
॥ ३६ ॥

ಶ್ರೀನಾರದ ಉವಾಚ

ದೃಷ್ಟಾ ಮಯಾ ತೇ ಬಹುಶೋ ದುರತ್ಯಯಾ
ಮಾಯಾ ವಿಭೋ ವಿಶ್ವಸೃಜಶ್ಚ ಮಾಯಿನಃ ।
ಭೂತೇಷು ಭೂಮಂಶ್ಚರತಃ ಸ್ವಶಕ್ತಿಭಿ-
ರ್ವಹ್ನೇರಿವಚ್ಛನ್ನರುಚೋ ನ ಮೇಽದ್ಭುತಮ್ ॥ ३७ ॥

ತವೇಹಿತಂ ಕೋಽರ್ಹತಿ ಸಾಧು ವೇದಿತುಂ
ಸ್ವಮಾಯಯೇದಂ ಸೃಜತೋ ನಿಯಚ್ಛತಃ ।
ಯದ್ವಿದ್ಯಮಾನಾತ್ಮತಯಾವಭಾಸತೇ
ತಸ್ಮೈ ನಮಸ್ತೇ ಸ್ವವಿಲಕ್ಷಣಾತ್ಮನೇ ॥ ३८ ॥

ಜೀವಸ್ಯ ಯಃ ಸಂಸರತೋ ವಿಮೋಕ್ಷಣಂ
ನ ಜಾನತೋಽನರ್ಥವಹಾಚ್ಛರೀರತಃ ।
ಲೀಲಾವತಾರೈಃ ಸ್ವಯಶಃ ಪ್ರದೀಪಕಂ
ಪ್ರಾಜ್ವಾಲಯತ್ತ್ವಾ ತಮಹಂ ಪ್ರಪದ್ಯೇ ॥ ३९ ॥

ಅಥಾಪ್ಯಾಶ್ರಾವಯೇ ಬ್ರಹ್ಮ ನರಲೋಕವಿಡಂಬನಮ್ ।
ರಾಜ್ಞಃ ಪೈತೃಷ್ವಸೇಯಸ್ಯ ಭಕ್ತಸ್ಯ ಚ ಚಿಕೀರ್ಷಿತಮ್
॥ ४० ॥

ನಾರದಮಹರ್ಷಿಗಳು ಆಸನವನ್ನು ಪರಿಗ್ರಹಿಸಿ ಆಸೀನರಾದ ನಂತರ ಭಗವಂತನು ಅವರನ್ನು ಯಥಾವಿಧಿಯಾಗಿ ಪೂಜಿಸಿ ಸಂತುಷ್ಟಗೊಳಿಸಿ ಸವಿಯಾದ ಮಾತುಗಳಿಂದ ಹೀಗೆ ಹೇಳಿದನು – ॥ ३४ ॥ ದೇವರ್ಷಿಗಳೇ! ಈ ಸಮಯದಲ್ಲಿ ಮೂರು ಲೋಕಗಳೂ ನಿರ್ಭಯವಾಗಿ ಸಕುಶಲರಾಗಿರುವುದಲ್ಲವೇ ? ನೀವು ತ್ರಿಲೋಕ ಸಂಚಾರಿಗಳು. ಇದರಿಂದ ನಮಗೆ ಮನೆಯಲ್ಲಿದ್ದೇ ಎಲ್ಲ ಸಮಾಚಾರಗಳು ತಿಳಿಯುತ್ತಿರುವುದು ದೊಡ್ಡಲಾಭವಾಗಿದೆ. ॥ ३५ ॥ ಈಶ್ವರನಿಂದ ರಚಿಸಲ್ಪಟ್ಟ ಮೂರು ಲೋಕಗಳಲ್ಲಿಯೂ ನಿಮಗೆ ತಿಳಿಯದಿರುವ ಯಾವುದೇ ವಿಷಯವಿಲ್ಲ. ಆದ್ದರಿಂದ ಯುಧಿಷ್ಠಿರಾದಿ ಪಾಂಡವರು ಈಗ ಏನು ಮಾಡಬೇಕೆಂದಿರುವರು ? ಇದನ್ನು ನಿಮ್ಮಿಂದ ತಿಳಿಯಲು ನಾನು ಬಯಸುತ್ತೇನೆ. ॥ ३६ ॥

ದೇವರ್ಷಿಗಳಾದ ನಾರದರು ಹೇಳಿದರು – ಸರ್ವವ್ಯಾಪಕನಾದ ಅನಂತನೇ! ವಿಶ್ವಕರ್ತೃವಾದ ನೀನು ಮಹಾಮಾಯಾವಿಯು. ಬ್ರಹ್ಮನೇ ಮೊದಲಾದ ದೊಡ್ಡ-ದೊಡ್ಡ ಮಾಯಾವಿಗಳೂ ಕೂಡ ನಿನ್ನ ಮಾಯೆಯ ಕೊನೆಯನ್ನು ಕಾಣರು. ಕಟ್ಟಿಗೆಯಲ್ಲಿ ಅಗ್ನಿಯು ಅಡಗಿರುವಂತೆಯೇ ನೀನು ಸಮಸ್ತ ಪ್ರಾಣಿಗಳ ಶರೀರಗಳಲ್ಲಿ ಅಚಿಂತ್ಯ ಶಕ್ತಿಯಿಂದ ವ್ಯಾಪ್ತನಾಗಿರುವೆ. ಆದರೆ ಜನರ ದೃಷ್ಟಿಯು ಸತ್ತ್ವಾದಿಗುಣಗಳಲ್ಲಿ ಸಿಕ್ಕಿ ಹಾಕಿಕೊಂಡಿದ್ದರಿಂದ ತಮ್ಮೊಳಗೆ ಇರುವ ನಿನ್ನನ್ನು ಅವರು ಕಾಣಲಾರರು. ನಾನು ಒಂದಲ್ಲ ಅನೇಕ ಬಾರಿ ನಿನ್ನ ಮಾಯೆಯನ್ನು ಕಂಡಿರುವೆನು. ಆದರಿಂದ ನೀನು ಏನೂ ತಿಳಿಯದವರಂತೆ ಪಾಂಡವರ ಸಮಾಚಾರವನ್ನು ಕೇಳುವುದರಲ್ಲಿ ನನಗೆ ಅದ್ಭುತವೇನೂ ಕಾಣುತ್ತಿಲ್ಲ. ॥ ३७ ॥ ಭಗವಂತಾ! ನೀನು ನಿನ್ನ ಮಾಯೆಯಿಂದಲೇ ಈ ಜಗತ್ತನ್ನು ರಚಿಸಿ, ಸಂಹಾರಮಾಡುವೆ. ಇದು ಮಿಥ್ಯೆಯಾಗಿದ್ದರೂ ನಿನ್ನ ಮಾಯೆಯಿಂದಾಗಿ ಸತ್ಯವಾಗಿರುವಂತೆ ಕಂಡುಬರುತ್ತದೆ. ನೀನು ಯಾವಾಗ ಏನು ಮಾಡಬೇಕೆಂದಿರುವೆಯೋ ಇದನ್ನು ಸರಿಯಾಗಿ ಯಾರು ತಾನೇ ಬಲ್ಲರು ? ನಿನ್ನ ಸ್ವರೂಪವು ಸರ್ವಥಾ ಅಚಿಂತ್ಯವಾಗಿದೆ. ಅಂತಹ ಸರ್ವವಿಲಕ್ಷಣನಾದ ನಿನ್ನನ್ನು ಪದೇ-ಪದೇ ನಮಸ್ಕರಿಸುತ್ತೇನೆ. ॥ ३८ ॥ ಶರೀರ ಮತ್ತು ಇದರೊಂದಿಗೆ ಸಂಬಂಧಿಸಿದ ವಾಸನೆಗಳಲ್ಲಿ ಸಿಕ್ಕಿಹಾಕಿಕೊಂಡ ಜೀವನು ಜನ್ಮ-ಮೃತ್ಯುರೂಪವಾದ ಸಂಸಾರಚಕ್ರದಲ್ಲಿ ಅಲೆಯುತ್ತಾ ಇದ್ದು, ಈ ಶರೀರದಿಂದ ಹೇಗೆ ಮುಕ್ತನಾಗುವೆ ಎಂಬುದು ತಿಳಿಯುತ್ತಿಲ್ಲ. ವಾಸ್ತವವಾಗಿ ಜೀವಿಗಳ ಹಿತಕ್ಕಾಗಿಯೇ ನೀನು ವಿವಿಧ ಲೀಲಾವತಾರಗಳನ್ನು ಎತ್ತಿ ನಿನ್ನ ಪವಿತ್ರಕೀರ್ತಿಯ ಉಜ್ವಲವಾದ ದೀಪವನ್ನು ಪ್ರಜ್ವಲಿಸುವೆ. ಅಂತಹ ನಿನಗೆ ಸರ್ವಾತ್ಮನಾ ಶರಣಾಗಿದ್ದೇನೆ. ॥ ३९ ॥ ಪ್ರಭೋ! ನೀನು ಸಾಕ್ಷಾತ್ ಪರಬ್ರಹ್ಮನಾಗಿದ್ದರೂ ಮನುಷ್ಯರಂತಹ ಲೀಲಾನಾಟಕವನ್ನಾಡುತ್ತಾ ನನ್ನಲ್ಲಿ ಕೇಳುತ್ತಿರುವೆಯಲ್ಲ! ಅದಕ್ಕಾಗಿ ನಿನ್ನ ಸೋದರಳಿಯನೂ, ಪ್ರೇಮಿ ಭಕ್ತನೂ ಆದ ಯುಧಿಷ್ಠಿರನು ಏನು ಮಾಡಬೇಕೆಂದಿರುವನೋ ಅದನ್ನು ನಾನು ನಿನಗೆ ಹೇಳುತ್ತೇನೆ. ॥ ४० ॥

ಯಕ್ಷ್ಯತಿ ತ್ವಾಂ ಮಖೇಂದ್ರೇಣ ರಾಜಸೂಯೇನ ಪಾಂಡವಃ ।
ಪಾರಮೇಷ್ಠ್ಯಕಾಮೋ ನೃಪತಿಸ್ತದ್ಭವಾನನುಮೋದತಾಮ್ ॥ ೪೧ ॥

ತಸ್ಮಿನ್ ದೇವ ಕ್ರತುವರೇ ಭವಂತಂ ವೈ ಸುರಾದಯಃ ।
ದಿದೃಕ್ಷವಃ ಸಮೇಷ್ಯಂತಿ ರಾಜಾನಶ್ಚ ಯಶಸ್ವಿನಃ ॥ ೪೨ ॥

ಶ್ರವಣಾತ್ಕೀರ್ತನಾತ್ ಧ್ಯಾನಾತ್ ಪೂಯಂತೇಽಂತೇವಸಾಯಿನಃ ।
ತವ ಬ್ರಹ್ಮಮಯಸ್ಯೇಶ ಕಿಮುತೇಕ್ಷಾಭಿಮರ್ಶಿನಃ ॥ ೪೩ ॥

ಯಸ್ಯಾಮಲಂ ದಿವಿ ಯಶಃ ಪ್ರಥಿತಂ ರಸಾಯಾಂ
ಭೂಮೌ ಚ ತೇ ಭುವನಮಂಗಲ ದಿಗ್ವಿತಾನಮ್ ।
ಮಂದಾಕಿನೀತಿ ದಿವಿ ಭೋಗವತೀತಿ ಚಾಧೋ
ಗಂಗೇತಿ ಚೇಹ ಚರಣಾಂಬು ಪುನಾತಿ ವಿಶ್ವಮ್ ॥ ೪೪ ॥

*ಶ್ರೀಶುಕ ಉವಾಚ*

ತತ್ರ ತೇಷ್ವಾತ್ಮಪಕ್ಷೇಷ್ವಗೃಣ್ಹತ್ಸು ವಿಜಿಗೀಷಯಾ ।
ವಾಚಃ ಪೇಶೈಃ ಸ್ಮಯನ್ಭೃತ್ಯಮುದ್ಧವಂ ಪ್ರಾಹ ಕೇಶವಃ ॥ ೪೫ ॥

*ಶ್ರೀಭಗವಾನುವಾಚ*

ತ್ವಂ ಹಿ ನಃ ಪರಮಂ ಚಕ್ಷುಃ ಸುಹೃನ್ಮಂತ್ರಾರ್ಥತತ್ತ್ವವಿತ್ ।
ಅಥಾತ್ರ ಬ್ರೂಹ್ಯನುಷ್ಠೇಯಂ ಶ್ರದ್ದಧ್ಮಃ ಕರವಾಮ ತತ್ ॥ ೪೬ ॥

ಇತ್ಯುಪಾಮಂತ್ರಿತೋ ಭರ್ತ್ರಾ ಸರ್ವಜ್ಞೇನಾಪಿ ಮುಗ್ಧವತ್ ।
ನಿದೇಶಂ ಶಿರಸಾಽಽಧಾಯ ಉದ್ಧವಃ ಪ್ರತ್ಯಭಾಷತ ॥ ೪೭ ॥

ಬ್ರಹ್ಮಲೋಕದಲ್ಲಿ ಪ್ರಾಪ್ತವಾಗುವ ಭೋಗವು ಯುಧಿಷ್ಠಿರ ಮಹಾರಾಜನಿಗೆ ಇಲ್ಲೇ ದೊರೆತಿದೆ ; ಇದರಲ್ಲಿ ಸಂದೇಹವೇ ಇಲ್ಲ. ಆದರೂ ಅವನು ಶ್ರೇಷ್ಠವಾದ ರಾಜಸೂಯಯಜ್ಞದ ಮೂಲಕ ನಿನ್ನನ್ನು ಆರಾಧಿಸ ಬೇಕೆಂದಿರುವನು. ನೀನು ಕೃಪೆದೋರಿ ಅದನ್ನು ಅನುಮೋದಿಸುವವನಾಗು. ॥ ೪೧ ॥ ಭಗವಂತಾ ! ಆ ಶ್ರೇಷ್ಠವಾದ ಯಜ್ಞದಲ್ಲಿ ನಿನ್ನ ದರ್ಶನ ಪಡೆಯಲು ದೊಡ್ಡ-ದೊಡ್ಡ ದೇವತೆಗಳೂ, ಯಶೋವಂತರಾದ ನರಪತಿಗಳೂ ಆಗಮಿಸುವರು. ॥ ೪೨ ॥ ಪ್ರಭೋ! ನೀನು ಸಾಕ್ಷಾತ್ ವಿಜ್ಞಾನಾನಂದ ಘನಬ್ರಹ್ಮನೇ ಆಗಿರುವೆ. ನಿನ್ನ ನಾಮಶ್ರವಣ, ನಾಮ ಸಂಕೀರ್ತನ ಮತ್ತು ಧ್ಯಾನಮಾತ್ರದಿಂದ ಅಂತ್ಯಜರೂ ಕೂಡ ಪವಿತ್ರರಾಗಿ ಬಿಡುತ್ತಾರೆ. ಹೀಗಿರುವಾಗ ನಿನ್ನ ದರ್ಶನ, ಸ್ಪರ್ಶಮಾಡುವವರ ಕುರಿತು ಹೇಳುವುದೇನಿದೆ ? ॥ ೪೩ ॥ ತ್ರಿಭುವನ ಮಂಗಳನೇ ! ನಿನ್ನ ನಿರ್ಮಲ ಕೀರ್ತಿಯು ಸಮಸ್ತ ದಿಕ್ಕುಗಳಲ್ಲಿಯೂ, ಸ್ವರ್ಗ, ಮರ್ತ್ಯ, ಪಾತಾಳಲೋಕಗಳಲ್ಲಿಯೂ ಹರಡಿಕೊಂಡುಬಿಟ್ಟಿದೆ. ಹಾಗೆಯೇ ನಿನ್ನ ಚರಣಾಮೃತ ತೀರ್ಥವು ಸ್ವರ್ಗದಲ್ಲಿ ಮಂದಾಕಿನಿಯಾಗಿಯೂ, ಪಾತಾಳದಲ್ಲಿ ಭೋಗವತಿಯಾಗಿಯೂ, ಭೂಲೋಕದಲ್ಲಿ ಗಂಗೆ ಎಂಬ ಹೆಸರಿನಿಂದಲೂ ಪ್ರವಹಿಸಿ ಸಮಸ್ತ ವಿಶ್ವವನ್ನು ಪವಿತ್ರಗೊಳಿಸುತ್ತಿದೆ. ॥ ೪೪ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** - ಪರೀಕ್ಷಿತನೇ! ಸಭೆಯಲ್ಲಿ ಉಪಸ್ಥಿತರಾಗಿದ್ದ ಯದುವೀರರೆಲ್ಲರೂ ಮೊದಲು ಜರಾಸಂಧನೊಡನೆ ಯುದ್ಧಮಾಡಿ ಅವನನ್ನು ಗೆದ್ದುಕೊಳ್ಳ ಬೇಕೆಂದು ಅತ್ಯಂತ ಉತ್ಸುಕರಾಗಿದ್ದರು. ಆದ್ದರಿಂದ ನಾರದರ ಮಾತು ಅವರಿಗೆ ರುಚಿಸಲಿಲ್ಲ. ಆಗ ಬ್ರಹ್ಮಾದಿಗಳಿಗೆ ಶಾಸಕನಾದ ಭಗವಾನ್ ಶ್ರೀಕೃಷ್ಣನು ಮುಗುಳ್ನಗುತ್ತಾ ಸುಮಧುರವಾದ ಮಾತಿನಿಂದ ಉದ್ಧವನಲ್ಲಿ ಇಂತೆಂದನು - ॥ ೪೫ ॥

**ಭಗವಾನ್ ಶ್ರೀಕೃಷ್ಣನು ಹೇಳಿದನು** - ಉದ್ಧವನೇ! ನೀನು ನಮ್ಮ ಹಿತೈಷಿಯೂ, ಸುಹೃದನೂ ಆಗಿರುವೆ. ಮಂತ್ರಾಲೋಚನೆಗಳ ರಹಸ್ಯವನ್ನು ತಿಳಿದಿರುವೆ. ಅದರಿಂದ ನೀನು ನಮಗೆ ಕಣ್ಣಿನಂತೆಯೇ ಇರುವೆ. ಈಗ ನಾವು ಏನು ಮಾಡಬೇಕೆಂಬುದನ್ನು ನೀನೇ ಹೇಳು. ನಿನ್ನ ಮಾತಿನಲ್ಲಿ ನಮಗೆ ವಿಶ್ವಾಸವಿದೆ. ಆದ್ದರಿಂದ ನಿನ್ನ ಸಲಹೆಯಂತೆಯೇ ನಾವು ನಡೆದುಕೊಳ್ಳುವೆವು. ॥ ೪೬ ॥ ಭಗವಾನ್ ಶ್ರೀಕೃಷ್ಣನು ಸರ್ವಜ್ಞನಾಗಿದ್ದರೂ ಏನೂ ತಿಳಿಯದವನಂತೆ ನನ್ನಲ್ಲಿ ಸಲಹೆ ಕೇಳುತ್ತಿರುವನಲ್ಲ! ಇರಲಿ, ಅವನ ಆಜ್ಞೆಯನ್ನು ಶಿರಸಾವಹಿಸಿ ಆತನು ಉತ್ತರಿಸತೊಡಗಿದನು. ॥ ೪೭ ॥

*ಎಪ್ಪತ್ತನೆಯ ಅಧ್ಯಾಯವು ಮುಗಿಯಿತು. ॥ ೭೦ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಉತ್ತರಾರ್ಧೇ
ಭಗವದ್ಯಾನವಿಚಾರೇ ಸಪ್ತತಿತಮೋಽಧ್ಯಾಯಃ ॥ ೭೦ ॥

# ಎಪ್ಪತ್ತೊಂದನೆಯ ಅಧ್ಯಾಯ

## ಶ್ರೀಕೃಷ್ಣನು ಇಂದ್ರಪ್ರಸ್ಥಕ್ಕೆ ದಯಮಾಡಿಸಿದುದು

ಶ್ರೀಶುಕ ಉವಾಚ

ಇತ್ಯುದೀರಿತಮಾಕರ್ಣ್ಯ ದೇವರ್ಷೇರುದ್ಧವೋಽಬ್ರವೀತ್ ।
ಸಭ್ಯಾನಾಂ ಮತಮಾಜ್ಞಾಯ ಕೃಷ್ಣಸ್ಯ ಚ ಮಹಾಮತಿಃ ॥ ೧ ॥

ಉದ್ಧವ ಉವಾಚ

ಯದುಕ್ತಮೃಷಿಣಾ ದೇವ ಸಾಚಿವ್ಯಂ ಯಕ್ಷ್ಯತಸ್ತ್ವಯಾ ।
ಕಾರ್ಯಂ ಪೈತೃಷ್ವಸೇಯಸ್ಯ ರಕ್ಷಾ ಚ ಶರಣೈಷಿಣಾಮ್ ॥ ೨ ॥

ಯಷ್ಟವ್ಯಂ ರಾಜಸೂಯೇನ ದಿಕ್ಚಕ್ರಜಯಿನಾ ವಿಭೋ ।
ಅತೋ ಜರಾಸುತಜಯ ಉಭಯಾರ್ಥೋ ಮತೋ ಮಮ ॥ ೩ ॥

ಅಸ್ಮಾಕಂ ಚ ಮಹಾನರ್ಥೋ ಹ್ಯೇತೇನೈವ ಭವಿಷ್ಯತಿ ।
ಯಶಶ್ಚ ತವ ಗೋವಿಂದ ರಾಜ್ಞೋ ಬದ್ಧಾನ್ವಿಮುಂಚತಃ ॥ ೪ ॥

ಸ ವೈ ದುರ್ವಿಷಹೋ ರಾಜಾ ನಾಗಾಯುತಸಮೋ ಬಲೇ ।
ಬಲಿನಾಮಪಿ ಚಾನ್ಯೇಷಾಂ ಭೀಮಂ ಸಮಬಲಂ ವಿನಾ ॥ ೫ ॥

ದ್ವೈರಥೇ ಸ ತು ಜೇತವ್ಯೋ ಮಾ ಶತಾಕ್ಷೌಹಿಣೀಯುತಃ ।
ಬ್ರಹ್ಮಣ್ಯೋಽಭ್ಯರ್ಥಿತೋ ವಿಪ್ರೈರ್ನ ಪ್ರತ್ಯಾಖ್ಯಾತಿ ಕರ್ಹಿಚಿತ್ ॥ ೬ ॥

ಬ್ರಹ್ಮವೇಷಧರೋ ಗತ್ವಾ ತಂ ಭಿಕ್ಷೇತ ವೃಕೋದರಃ ।
ಹನಿಷ್ಯತಿ ನ ಸಂದೇಹೋ ದ್ವೈರಥೇ ತವ ಸನ್ನಿಧೌ ॥ ೭ ॥

ನಿಮಿತ್ತಂ ಪರಮೀಶಸ್ಯ ವಿಶ್ವಸರ್ಗನಿರೋಧಯೋಃ ।
ಹಿರಣ್ಯಗರ್ಭಃ ಶರ್ವಶ್ಚ ಕಾಲಸ್ಯಾರೂಪಿಣಸ್ತವ ॥ ೮ ॥

**ಶ್ರೀಶುಕಮುನಿಗಳು ಹೇಳುತ್ತಾರೆ** – ಪರೀಕ್ಷಿತ ಮಹಾರಾಜ ! ಮಹಾಮತಿಯಾದ ಉದ್ಧವನು ಶ್ರೀಕೃಷ್ಣನ ಮಾತನ್ನು ಕೇಳಿ, ದೇವರ್ಷಿಗಳಾದ ನಾರದರ, ಸಭಾಸದರ, ಬಂದಿರಾಜರುಗಳ ದೂತನ ನಿವೇದನೆಯ ಬಗೆಗೆ ಮತ್ತು ಶ್ರೀಕೃಷ್ಣನ ಅಭಿಪ್ರಾಯವೇ ನೆಂಬುದನ್ನು ವಿಚಾರಮಾಡಿ ಹೇಳತೊಡಗಿದನು. ॥ ೧ ॥

**ಉದ್ಧವನು ಹೇಳಿದನು** – ಭಗವಂತ ! ನಿನ್ನ ಸೋದರಳಿಯರಾದ ಪಾಂಡವರು ರಾಜಸೂಯಯಜ್ಞದಲ್ಲಿ ಭಾಗವಹಿಸಿ ಅವರಿಗೆ ಸಹಾಯ ಮಾಡಬೇಕೆಂದು ನಾರದರು ಹೇಳಿದ ಮಾತು ಸರಿಯಾಗಿದೆ. ಜೊತೆಗೆ ಶರಣಾಗತರ ರಕ್ಷಣೆಯೂ ಆವಶ್ಯಕವಾದ ಕರ್ತವ್ಯವೇ ಆಗಿದೆ. ॥ ೨ ॥ ಪ್ರಭೋ ! ಹತ್ತು ದಿಕ್ಕುಗಳನ್ನು ಜಯಿಸಿದವನೇ ರಾಜಸೂಯಯಜ್ಞವನ್ನು ಮಾಡಬಲ್ಲನು ಎಂಬ ದೃಷ್ಟಿಯಿಂದ ವಿಚಾರಮಾಡಿದಾಗ ಪಾಂಡವರ ಯಜ್ಞ ಮತ್ತು ಶರಣಾಗತರ ರಕ್ಷಣೆ ಎರಡೂ ಕಾರ್ಯಗಳಿಗಾಗಿ ಜರಾಸಂಧನನ್ನು ಜಯಿಸುವುದು ಆವಶ್ಯಕವಾಗಿದೆ ಎಂಬುದು ನಿರ್ವಿವಾದವಾಗಿದೆ. ॥ ೩ ॥ ಸ್ವಾಮಿ ! ಕೇವಲ ಜರಾಸಂಧನನ್ನು ಜಯಿಸುವುದರಿಂದ ನಮ್ಮ ಉದ್ದೇಶವು ಸಫಲವಾಗುವುದು ; ಜೊತೆಗೆ ಅದರಿಂದ ಬಂಧಿತರಾಜರ ಮುಕ್ತಿ ಮತ್ತು ಅವರ ಕಾರಣದಿಂದ ನಿನಗೆ ನಿರ್ಮಲವಾದ ಕೀರ್ತಿಯೂ ಪ್ರಾಪ್ತವಾಗುತ್ತದೆ. ॥ ೪ ॥ ಬಲದಲ್ಲಿ ಹತ್ತು ಸಾವಿರ ಆನೆಗಳ ಬಲವಿರುವ ಜರಾಸಂಧನನ್ನು ಇತರ ಬಲಿಷ್ಠರಾಜರು ಗೆಲ್ಲಲಾರರು. ಅವನಿಗೆ ಸಮಾನಬಲವಿರುವ ಭೀಮಸೇನನೊಬ್ಬನು ಮಾತ್ರ ಅವನನ್ನು ಜಯಿಸಬಲ್ಲನು. ॥ ೫ ॥ ಅವನೊಡನೆ ದ್ವಂದ್ವಯುದ್ಧವನ್ನೇ ಮಾಡಿ ಅವನನ್ನ ಗೆಲ್ಲಬೇಕು. ನೂರು ಅಕ್ಷೌಹಿಣಿ ಸೈನ್ಯದೊಂದಿಗೆ ಅವನನ್ನು ಯುದ್ಧಕ್ಕೆ ನಿಂತರೆ ಅವನನ್ನು ಗೆಲ್ಲುವುದು ಅಷ್ಟು ಸುಲಭವಲ್ಲ. ಜರಾಸಂಧನು ಬಹಳ ದೊಡ್ಡ ಬ್ರಾಹ್ಮಣಭಕ್ತನಾಗಿದ್ದಾನೆ. ಬ್ರಾಹ್ಮಣರು ಅವನಲ್ಲಿ ಏನೇ ಬೇಡಿದರೂ ಎಂದಿಗೂ ಅವನು ಇಲ್ಲವೆನ್ನುವುದಿಲ್ಲ. ॥ ೬ ॥ ಆದುದರಿಂದ ಭೀಮಸೇನನು ಬ್ರಾಹ್ಮಣವೇಷವನ್ನು ಧರಿಸಿ ಅವನ ಬಳಿಗೆ ಹೋಗಿ ಯುದ್ಧ ಭಿಕ್ಷೆಯನ್ನು ಬೇಡಬೇಕು. ಭಗವಂತಾ ! ನಿನ್ನ ಉಪಸ್ಥಿತಿಯಲ್ಲಿ ಭೀಮಸೇನ ಮತ್ತು ಜರಾಸಂಧರ ದ್ವಂದ್ವ ಯುದ್ಧ ನಡೆದರೆ ಭೀಮಸೇನನು ಅವನನ್ನು ಕೊಲ್ಲುವುದರಲ್ಲಿ ಸಂದೇಹವೇ ಇಲ್ಲ. ॥ ೭ ॥ ಪ್ರಭೋ ! ನೀನು ಸರ್ವಶಕ್ತಿವಂತನೂ, ರೂಪರಹಿತ ಕಾಲಸ್ವರೂಪನಾಗಿರುವೆ. ವಿಶ್ವದ ಸೃಷ್ಟಿ ಮತ್ತು ಪ್ರಳಯ ನಿನ್ನ ಶಕ್ತಿಯಿಂದಲೇ ನಡೆಯುತ್ತದೆ. ಬ್ರಹ್ಮ-ರುದ್ರರು ಅದರಲ್ಲಿ ಕೇವಲ ನಿಮಿತ್ತರಾಗಿದ್ದಾರೆ. ಹೀಗೆಯೇ ನಿನ್ನ ಶಕ್ತಿಯಿಂದಲೇ ಜರಾಸಂಧನ ವಧೆಯಾಗುವುದು; ಭೀಮಸೇನನು ನೆಪಮಾತ್ರಕ್ಕಿರುತ್ತಾನೆ. ॥ ೮ ॥

ಗಾಯಂತಿ ತೇ ವಿಶದಕರ್ಮ ಗೃಹೇಷು ದೇವ್ಯೋ
ರಾಜ್ಞಾಂ ಸ್ವಶತ್ರುವಧಮಾತ್ಮವಿಮೋಕ್ಷಣಂ ಚ ।
ಗೋಪ್ಯಶ್ಚ ಕುಂಜರಪತೇರ್ಜನಕಾತ್ಮಜಾಯಾಃ
ಪಿತ್ರೋಶ್ಚ ಲಬ್ಧಶರಣಾ ಮುನಯೋ ವಯಂ ಚ ॥ ೯ ॥

ಜರಾಸಂಧವಧಃ ಕೃಷ್ಣ ಭೂರ್ಯರ್ಥಾಯೋಪಕಲ್ಪತೇ ।
ಪ್ರಾಯಃ ಪಾಕವಿಪಾಕೇನ ತವ ಚಾಭಿಮತಃ ಕ್ರತುಃ ॥ ೧೦ ॥

ಶ್ರೀಶುಕ ಉವಾಚ

ಇತ್ಯುದ್ಧವವಚೋ ರಾಜನ್ ಸರ್ವತೋಭದ್ರಮಚ್ಯುತಮ್ ।
ದೇವರ್ಷಿರ್ಯದುವೃದ್ಧಾಶ್ಚ ಕೃಷ್ಣಶ್ಚ ಪ್ರತ್ಯಪೂಜಯನ್ ॥ ೧೧ ॥

ಅಥಾದಿಶತ್ಪ್ರಯಾಣಾಯ ಭಗವಾನ್ ದೇವಕೀಸುತಃ ।
ಭೃತ್ಯಾನ್ದಾರುಕಜೈತ್ರಾದೀನನುಜ್ಞಾಪ್ಯ ಗುರೂನ್ ವಿಭುಃ ॥ ೧೨ ॥

ನಿರ್ಗಮಯ್ಯಾವರೋಧಾನ್ ಸ್ವಾನ್ ಸಸುತಾನ್ ಸಪರಿಚ್ಛದಾನ್ ।
ಸಂಕರ್ಷಣಮನುಜ್ಞಾಪ್ಯ ಯದುರಾಜಂ ಚ ಶತ್ರುಹನ್ ।
ಸೂತೋಪನೀತಂ ಸ್ವರಥಮಾರುಹದ್ಗರುಡಧ್ವಜಮ್ ॥ ೧೩ ॥

ತತೋ ರಥದ್ವಿಪಭಟಸಾದಿನಾಯಕೈಃ
ಕರಾಲಯಾ ಪರಿವೃತ ಆತ್ಮಸೇನಯಾ ।
ಮೃದಂಗಭೇರ್ಯಾನಕಶಂಖಗೋಮುಖೈಃ
ಪ್ರಘೋಷಘೋಷಿತಕಕುಭೋ ನಿರಾಕ್ರಮತ್ ॥ ೧೪ ॥

ನೃವಾಜಿಕಾಂಚನಶಿಬಿಕಾಭಿರಚ್ಯುತಂ
ಸಹಾತ್ಮಜಾಃ ಪತಿಮನು ಸುವ್ರತಾ ಯಯುಃ ।
ವರಾಂಬರಾಭರಣವಿಲೇಪನಸ್ರಜಃ
ಸುಸಂವೃತಾ ನೃಭಿರಸಿಚರ್ಮಪಾಣಿಭಿಃ ॥ ೧೫ ॥

ಶಂಖಚೂಡನಿಂದ ಮುಕ್ತರಾದ ಗೋಪಿಯರು ನಿನ್ನ ಕೀರ್ತಿಯನ್ನು ಗಾನಮಾಡುವಂತೆ, ಮೊಸಳೆಯಿಂದ ಮುಕ್ತನಾದ ಗಜೇಂದ್ರನು, ನಿನಗೆ ಶರಣಾಗತರಾದ ಮುನಿಗಳು, ಸೀತೆಯನ್ನು ಉದ್ಧರಿಸಿದ ಲೀಲೆಯನ್ನು ನಿನ್ನ ತಂದೆ-ತಾಯಿಯರನ್ನು ಕಾರಾಗೃಹದಿಂದ ಬಂಧಮುಕ್ತಗೊಳಿಸಿದ ನಿನ್ನ ಲೀಲೆಯನ್ನು ನಾವು ಹಾಡುವಂತೆಯೇ ನೀನು ಜರಾಸಂಧನ ವಧೆ ಮಾಡಿಸಿದಾಗ ಬಂಧನದಿಂದ ಮುಕ್ತರಾದ ಆ ರಾಜರ ಪಟ್ಟಮಹಿಷಿಯರು ತಮ್ಮ ಅರಮನೆಗಳಲ್ಲಿ - ನೀನು ಅವರ ಶತ್ರುವನ್ನು ನಾಶಗೊಳಿಸಿ ತಮ್ಮ ಪ್ರಾಣಪತಿಗಳನ್ನು ಬಿಡಿಸಿದ ನಿನ್ನ ಅಲೌಕಿಕ ಲೀಲೆಯನ್ನು ಹಾಡುವರು. ॥ ೯ ॥ ಅದಕ್ಕಾಗಿ ಪ್ರಭೋ ! ಜರಾಸಂಧನ ವಧೆಯು ಅನೇಕ ಪ್ರಯೋಜನಗಳನ್ನು ಸಿದ್ಧಗೊಳಿಸುವುದು. ಸೆರೆಯಾದ ರಾಜರ ಪುಣ್ಯದ ಪರಿಣಾಮದಿಂದಲೋ, ಜರಾಸಂಧನ ಪಾಪದ ಪರಿಣಾಮದಿಂದಲೋ ರಾಜಸೂಯಯಾಗ ಮಾಡಲು ನಿನ್ನ ಒಪ್ಪಿಗೆಯೂ ಲಭಿಸಿದೆ. ಆದುದರಿಂದ ನೀನು ಮೊದಲಿಗೆ ಇಂದ್ರಪ್ರಸ್ಥಕ್ಕೆ ಹೋಗುವುದೇ ಸೂಕ್ತವಾಗಿದೆ ಎಂದು ನನಗೆ ಅನಿಸುತ್ತದೆ. ॥ ೧೦ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** - ಪರೀಕ್ಷಿತನೇ ! ಉದ್ಧವನ ಈ ಸಲಹೆಯು ಎಲ್ಲ ರೀತಿಯಿಂದ ಹಿತಕರವೂ, ನಿರ್ದೋಷವೂ ಆಗಿತ್ತು. ದೇವರ್ಷಿ ನಾರದರು, ಯದುವಂಶದ ಹಿರಿಯರು ಮತ್ತು ಸ್ವಯಂ ಭಗವಾನ್ ಶ್ರೀಕೃಷ್ಣನೂ ಅವನ ಮಾತನ್ನು ಸಮರ್ಥಿಸಿದರು. ॥ ೧೧ ॥ ಆಗ ಅಂತರ್ಯಾಮಿಯಾದ ಭಗವಾನ್ ಶ್ರೀಕೃಷ್ಣನು ವಸುದೇವನೇ ಮೊದಲಾದ ಹಿರಿಯರಿಂದ ಅನುಮತಿಯನ್ನು ಪಡೆದು ಸಾರಥಿಯಾದ ದಾರುಕನಿಗೆ ಮತ್ತು ಜೈತ್ರ ಮುಂತಾದ ಸೇವಕರಿಗೆ ಇಂದ್ರಪ್ರಸ್ಥಕ್ಕೆ ಹೋಗಲು ಸಿದ್ಧತೆಮಾಡಲು ಅಪ್ಪಣೆಮಾಡಿದನು. ॥ ೧೨ ॥ ಅನಂತರ ಶ್ರೀಕೃಷ್ಣನು ಯದುರಾಜ ಉಗ್ರಸೇನ ಮತ್ತು ಬಲರಾಮನಿಂದ ಅಪ್ಪಣೆಯನ್ನು ಪಡೆದು ಮಕ್ಕಳೊಂದಿಗೆ ರಾಣಿಯರನ್ನು ಮತ್ತು ಅವರ ಸಾಮಗ್ರಿಗಳನ್ನು ಮುಂದಾಗಿ ಕಳಿಸಿಕೊಟ್ಟು ಮತ್ತೆ ದಾರುಕನು ಸಿದ್ಧಪಡಿಸಿ ತಂದಿರುವ ಗರುಡಧ್ವಜ ರಥದಲ್ಲಿ ತಾನು ಕುಳಿತನು. ॥ ೧೩ ॥ ಬಳಿಕ ಶ್ರೀಕೃಷ್ಣನು ಗಜಾಶ್ವ-ರಥ-ಪದಾತಿಗಳಿಂದ ಕೂಡಿದ ಚತುರಂಗ ಸೇನಾಸಮೇತನಾಗಿ ಇಂದ್ರಪ್ರಸ್ಥಕ್ಕೆ ಪ್ರಸ್ಥಾನಮಾಡಿದನು. ಆಗ ಮೃದಂಗ, ಭೇರಿ, ಡೋಲು, ಶಂಖ, ಗೋಮುಖ ಮುಂತಾದ ವಾದ್ಯಗಳ ಧ್ವನಿಯು ದಶದಿಕ್ಕುಗಳಲ್ಲಿಯೂ ಪ್ರತಿಧ್ವನಿಸಿತು. ॥ ೧೪ ॥ ಸತಿಶಿರೋಮಣಿ ರುಕ್ಮಿಣಿಯೇ ಮೊದಲಾದ ಸಾವಿರಾರು ಶ್ರೀಕೃಷ್ಣನ ಪತ್ನಿಯರು ತಮ್ಮ-ತಮ್ಮ ಸಂತಾನಗಳೊಂದಿಗೆ ಸುಂದರವಾದ ವಸ್ತ್ರಾಭೂಷಣಗಳಿಂದಲೂ, ಚಂದನ, ಅಂಗರಾಗ, ಪುಷ್ಪಹಾರಗಳಿಂದ ಅಲಂಕರಿಸಿಕೊಂಡು, ಸ್ವರ್ಣಪಲ್ಲಕ್ಕಿಗಳಲ್ಲಿ, ಡೋಲಿಗಳಲ್ಲಿ, ರಥಗಳಲ್ಲಿ ಕುಳಿತುಕೊಂಡು ಪತಿದೇವನಾದ ಶ್ರೀಕೃಷ್ಣನ ಹಿಂದೆಯೇ ಹೋಗುತ್ತಿದ್ದರು. ಕಾಲಾಳುಗಳು ಕೈಗಳಲ್ಲಿ ಕತ್ತಿ-ಗುರಾಣಿಗಳನ್ನು ಹಿಡಿದುಕೊಂಡು ಅವರನ್ನು ರಕ್ಷಿಸುತ್ತಾ ನಡೆಯುತ್ತಿದ್ದರು. ॥ ೧೫ ॥

ನರೋಷ್ಟ್ರಗೋಮಹಿಷಖರಾಶ್ವತರ್ಯನಃ-
ಕರೇಣುಭಿಃ ಪರಿಜನವಾರಯೋಷಿತಃ ।
ಸ್ವಲಂಕೃತಾಃ ಕಟಕುಟಿಕಂಬಲಾಂಬರಾ-
ದ್ಯುಪಸ್ಕರಾ ಯಯುರಧಿಯುಜ್ಯ ಸರ್ವತಃ ॥ ೧೬ ॥

ಹಾಗೆಯೇ ದಾಸ-ದಾಸಿಯರೂ, ವೇಶ್ಯೆಯರೂ, ವಸ್ತ್ರಾಭರಣಗಳಿಂದ ಅಲಂಕೃತರಾಗಿ ಚಾಪೆಗಳೂ, ಗುಡಾರಗಳೂ, ಕಂಬಳಿಗಳೂ, ವಸ್ತ್ರಗಳೂ ಮೊದಲಾದ ಸಾಮಗ್ರಿಗಳನ್ನು ಆಳುಗಳ ಮೇಲೆಯೂ ಒಂಟೆ, ಎತ್ತು, ಕೋಣ, ಹೇಸರಗತ್ತೆ, ಆನೆ-ಬಂಡಿಗಳು, ಇವುಗಳ ಮೇಲೆ ಹೇರಿಕೊಂಡು, ತಾವು ಪಲ್ಲಕ್ಕಿ, ಒಂಟೆ, ಎತ್ತಿನಗಾಡಿ, ಆನೆಗಳು ಇವುಗಳ ಮೇಲೆ ಕುಳಿತು ಪ್ರಯಾಣ ಮಾಡಿದರು. ॥ ೧೬ ॥

ಬಲಂ ಬೃಹದ್ಧ್ವಜಪಟಛತ್ರಚಾಮರೈ-
ರ್ವರಾಯುಧಾಭರಣಕಿರೀಟವರ್ಮಭಿಃ ।
ದಿವಾಂಶುಭಿಸ್ತುಮುಲರವಂ ಬಭೌ ರವೇ-
ರ್ಯಥಾರ್ಣವಃ ಕ್ಷುಭಿತತಿಮಿಂಗಿಲೋರ್ಮಿಭಿಃ ॥ ೧೭ ॥

ಮೊಸಳೆಗಳಿಂದಲೂ, ದೊಡ್ಡ-ದೊಡ್ಡ ಅಲೆಗಳಿಂದಲೂ ಭೋರ್ಗರೆಯುವ ಸಮುದ್ರವು ಶೋಭಿಸುವಂತೆಯೇ, ಭಯಂಕರ ಶಬ್ದಗಳಿಂದಲೂ ಹಾರಾಡುತ್ತಿದ್ದ ದೊಡ್ಡ-ದೊಡ್ಡ ಧ್ವಜ-ಪತಾಕೆಗಳಿಂದಲೂ, ಛತ್ರ-ಚಾಮರಗಳಿಂದಲೂ, ಶ್ರೇಷ್ಠವಾದ ಅಸ್ತ್ರ-ಶಸ್ತ್ರಗಳಿಂದಲೂ, ವಸ್ತ್ರಾಭೂಷಣಗಳಿಂದಲೂ, ಕಿರೀಟಗಳಿಂದಲೂ, ಕವಚಗಳಿಂದಲೂ ಕೂಡಿದ ಶ್ರೀಕೃಷ್ಣನ ಸೈನ್ಯದ ಮೇಲೆ ಬಿದ್ದ ಸೂರ್ಯಕಿರಣಗಳಿಂದ ಅದು ಅತ್ಯಂತ ಶೋಭಾಯಮಾನವಾಗಿ ಕಾಣುತ್ತಿತ್ತು. ॥ ೧೭॥

ಅಥೋ ಮುನಿರ್ಯದುಪತಿನಾ ಸಭಾಜಿತಃ
ಪ್ರಣಮ್ಯ ತಂ ಹೃದಿ ವಿದಧದ್ವಿಹಾಯಸಾ ।
ನಿಶಮ್ಯ ತದ್ವ್ಯವಸಿತಮಾಹೃತಾರ್ಹಣೋ
ಮುಕುಂದಸಂದರ್ಶನನಿರ್ವೃತೇಂದ್ರಿಯಃ ॥ ೧೮ ॥

ಶ್ರೀಕೃಷ್ಣನಿಂದ ಸಮ್ಮಾನಿತರಾದ ನಾರದ ಮಹರ್ಷಿಗಳು ಅವನ ನಿಶ್ಚಯವನ್ನು ಕೇಳಿ ಅತ್ಯಂತ ಪ್ರಸನ್ನರಾದರು. ಭಗವಂತನ ದರ್ಶನದಿಂದ ಅವರ ಹೃನ್ಮನಗಳೂ, ಇಂದ್ರಿಯಗಳೂ ಪರಮಾನಂದ ಭರಿತವಾದುವು. ಬೀಳ್ಕೊಡುವಾಗ ಶ್ರೀಕೃಷ್ಣನು ಅವರನ್ನು ನಾನಾ ವಿಧವಾದ ಸಾಮಗ್ರಿಗಳಿಂದ ಪೂಜಿಸಿದನು. ದೇವಋಷಿ ನಾರದರು ಶ್ರೀಕೃಷ್ಣನನ್ನು ವಂದಿಸುತ್ತಾ, ಅವನ ದಿವ್ಯಮೂರ್ತಿಯನ್ನು ಹೃದಯದಲ್ಲಿ ಧರಿಸಿಕೊಂಡು ಆಕಾಶಮಾರ್ಗದಿಂದ ಹೊರಟುಹೋದರು. ॥ ೧೮ ॥

ರಾಜದೂತಮುವಾಚೇದಂ ಭಗವಾನ್ ಪ್ರೀಣಯನ್ ಗಿರಾ ।
ಮಾ ಭೈಷ್ಟ ದೂತ ಭದ್ರಂ ವೋ ಘಾತಯಿಷ್ಯಾಮಿ ಮಾಗಧಮ್ ॥ ೧೯ ॥

ಬಳಿಕ ಭಗವಾನ್ ಶ್ರೀಕೃಷ್ಣನು ಜರಾಸಂಧನ ಬಂದಿಯಾದ ರಾಜರ ದೂತನಿಗೆ ಸುಮಧುರ ಮಾತಿನಿಂದ ಆಶ್ವಾಸನೆಯನ್ನೀಯುತ್ತಾ – ದೂತನೇ ! ನೀನು ರಾಜರ ಬಳಿಗೆ ಹೋಗಿ – 'ಹೆದರಬೇಡಿರಿ. ನಿಮ್ಮೆಲ್ಲರಿಗೆ ಮಂಗಳವಾಗಲಿ. ನಾನು ಜರಾಸಂಧನನ್ನು ಕೊಲ್ಲಿಸುವೆನು.' ಎಂದು ಹೇಳು. ॥ ೧೯ ॥

ಇತ್ಯುಕ್ತಃ ಪ್ರಸ್ಥಿತೋ ದೂತೋ ಯಥಾವದವದನ್ನೃಪಾನ್ ।
ತೇಽಪಿ ಸಂದರ್ಶನಂ ಶೌರೇಃ ಪ್ರತ್ಯೈಕ್ಷನ್ ಯನ್ಮುಮುಕ್ಷವಃ ॥ ೨೦ ॥

ಹೀಗೆ ಭಗವಂತನ ಆಜ್ಞೆಯನ್ನು ಪಡೆದು ಆ ದೂತನು ಗಿರಿವ್ರಜಕ್ಕೆ ಹೊರಟು ಹೋದನು. ಅಲ್ಲಿ ರಾಜರಿಗೆ ಭಗವಾನ್ ಶ್ರೀಕೃಷ್ಣನ ಸಂದೇಶವನ್ನು ಯಥಾವತ್ತಾಗಿ ಮುಟ್ಟಿಸಿದನು. ಆ ರಾಜರೂ ಕೂಡ ಕಾರಾಗೃಹದಿಂದ ಬಿಡುಗಡೆ ಹೊಂದಲೂ, ಶೀಘ್ರವೇ ಭಗವಂತನ ಶುಭ ದರ್ಶನವನ್ನು ಪಡೆಯಲು ಕಾತರದಿಂದ ಪ್ರತೀಕ್ಷಿಸುತ್ತಿದ್ದರು. ॥ ೨೦ ॥

ಆನರ್ತಸೌವೀರಮರೂಂಸ್ತೀರ್ತ್ವಾ ವಿನಶನಂ ಹರಿಃ ।
ಗಿರೀನ್ ನದೀರತೀಯಾಯ ಪುರಗ್ರಾಮವ್ರಜಾಕರಾನ್ ॥ ೨೧ ॥

ಪರೀಕ್ಷಿತನೇ ! ಭಗವಾನ್ ಶ್ರೀಕೃಷ್ಣನು ದ್ವಾರಕೆಯಿಂದ ಹೊರಟು ಆನರ್ತ, ಸೌವೀರ, ಮರು, ಕುರುಕ್ಷೇತ್ರ ಇವುಗಳ ನಡುವೆ ಸಿಕ್ಕುವ ಪರ್ವತ ನದಿ, ನಗರ, ಗ್ರಾಮ, ಹಳ್ಳಿ, ಗಣಿಗಳಿದ್ದ ಪ್ರದೇಶಗಳನ್ನು ದಾಟಿ ಮುಂದರಿಯುತ್ತಿದ್ದನು. ॥ ೨೧ ॥

ತತೋ ದೃಷದ್ವತೀಂ ತೀರ್ತ್ವಾ ಮುಕುಂದೋಽಥ ಸರಸ್ವತೀಮ್ ।
ಪಂಚಾಲಾನಥ ಮತ್ಸ್ಯಾಂಶ್ಚ ಶಕ್ರಪ್ರಸ್ಥಮಥಾಗಮತ್ ॥ ೨೨ ॥

ಭಗವಾನ್ ಮುಕುಂದನು ದಾರಿಯಲ್ಲಿ ದೃಷದ್ವತೀ ಹಾಗೂ ಸರಸ್ವತೀ ನದಿಗಳನ್ನು ದಾಟಿ ಪಾಂಚಾಲ, ಮತ್ಸ್ಯ ದೇಶಗಳ ಮೂಲಕವಾಗಿ ಇಂದ್ರಪ್ರಸ್ಥವನ್ನು ತಲುಪಿದನು. ॥ ೨೨ ॥

ತಮುಪಾಗತಮಾಕರ್ಣ್ಯ ಪ್ರೀತೋ ದುರ್ದರ್ಶನಂ ನೃಣಾಮ್ ।
ಅಜಾತಶತ್ರುರ್ನಿರಗಾತ್ ಸೋಪಾಧ್ಯಾಯಃ ಸುಹೃದ್ವೃತಃ ॥ ೨೩ ॥

ಪರೀಕ್ಷಿತನೇ ! ಮಾನವರಿಂದ ಸಂದರ್ಶಿಸಲು ಸುದುರ್ಲಭನಾದ ಶ್ರೀಕೃಷ್ಣನು ಪರಿವಾರ ಸಹಿತವಾಗಿ ತನ್ನ ರಾಜಧಾನಿಗೆ ಬರುತ್ತಿದ್ದಾನೆಂಬ ವಾರ್ತೆಯನ್ನು ಕೇಳಿ ಅಜಾತಶತ್ರುವಾದ ಯುಧಿಷ್ಠಿರನು ಹಿರಿ-ಹಿರಿ ಹಿಗ್ಗಿದನು. ಅವನು ಆಚಾರ್ಯರೊಡನೆಯೂ, ಸ್ವಜನಬಂಧುಗಳೊಂದಿಗೂ ಭಗವಂತನನ್ನು ಇದಿರ್ಗೊಳ್ಳಲು ಊರ ಹೊರಬಾಗಿಲಿಗೆ ಬಂದನು. ॥ ೨೩ ॥

ಗೀತವಾದಿತ್ರಘೋಷೇಣ ಬ್ರಹ್ಮಘೋಷೇಣ ಭೂಯಸಾ ।
ಅಭ್ಯಯಾತ್ಸ ಹೃಷೀಕೇಶಂ ಪ್ರಾಣಾಃ ಪ್ರಾಣಮಿವಾದೃತಃ
॥ ೨೪ ॥

ದೃಷ್ಟ್ವಾ ವಿಕ್ಲಿನ್ನಹೃದಯಃ ಕೃಷ್ಣಂ ಸ್ನೇಹೇನ ಪಾಂಡವಃ ।
ಚಿರಾದ್ದೃಷ್ಟಂ ಪ್ರಿಯತಮಂ ಸಸ್ವಜೇಽಥ ಪುನಃ ಪುನಃ
॥ ೨೫ ॥

ದೋರ್ಭ್ಯಾಂ ಪರಿಷ್ವಜ್ಯ ರಮಾಮಲಾಲಯಂ
ಮುಕುಂದಗಾತ್ರಂ ನೃಪತಿರ್ಹತಾಶುಭಃ ।
ಲೇಭೇ ಪರಾಂ ನಿರ್ವೃತಿಮಶ್ರುಲೋಚನೋ
ಹೃಷ್ಯತ್ತನುರ್ವಿಸ್ಮೃತಲೋಕವಿಭ್ರಮಃ ॥ ೨೬ ॥

ತಂ ಮಾತುಲೇಯಂ ಪರಿರಭ್ಯ ನಿರ್ವೃತೋ
ಭೀಮಃ ಸ್ಮಯನ್ ಪ್ರೇಮಜಲಾಕುಲೇಂದ್ರಿಯಃ ।
ಯಮೌ ಕಿರೀಟೀ ಚ ಸುಹೃತ್ತಮಂ ಮುದಾ
ಪ್ರವೃದ್ಧಬಾಷ್ಪಾಃ ಪರಿರೇಭಿರೇಽಚ್ಯುತಮ್ ॥ ೨೭ ॥

ಅರ್ಜುನೇನ ಪರಿಷ್ವಕ್ತೋ ಯಮಾಭ್ಯಾಮಭಿವಾದಿತಃ ।
ಬ್ರಾಹ್ಮಣೇಭ್ಯೋ ನಮಸ್ಕೃತ್ಯ ವೃದ್ಧೇಭ್ಯಶ್ಚ ಯಥಾರ್ಹತಃ
॥ ೨೮ ॥

ಮಾನಿತೋ ಮಾನಯಾಮಾಸ ಕುರುಸೃಂಜಯಕೈಕಯಾನ್ ।
ಸೂತಮಾಗಧಗಂಧರ್ವಾ ವಂದಿನಶ್ಚೋಪಮಂತ್ರಿಣಃ
॥ ೨೯ ॥

ಮೃದಂಗಶಂಖಪಟಹವೀಣಾಪಣವಗೋಮುಖೈಃ ।
ಬ್ರಾಹ್ಮಣಾಶ್ಚಾರವಿಂದಾಕ್ಷಂ ತುಷ್ಟುವುರ್ನನೃತುರ್ಜಗುಃ
॥ ೩೦ ॥

ಏವಂ ಸುಹೃದ್ಭಿಃ ಪರ್ಯಸ್ತಃ ಪುಣ್ಯಶ್ಲೋಕಶಿಖಾಮಣಿಃ ।
ಸಂಸ್ತೂಯಮಾನೋ ಭಗವಾನ್ ವಿವೇಶಾಲಂಕೃತಂ ಪುರಮ್
॥ ೩೧ ॥

ಸಂಸಿಕ್ತವರ್ತ್ಮ ಕರಿಣಾಂ ಮದಗಂಧತೋಯೈ-
ಶ್ಚಿತ್ರಧ್ವಜೈಃ ಕನಕತೋರಣಪೂರ್ಣಕುಂಭೈಃ ।
ಮೃಷ್ಟಾತ್ಮಭಿರ್ನವದುಕೂಲವಿಭೂಷಣಸ್ರಗ್
ಗಂಧೈರ್ನೃಭಿರ್ಯುವತಿಭಿಶ್ಚ ವಿರಾಜಮಾನಮ್ ॥ ೩೨ ॥

ಮಂಗಳ ಗೀತೆಗಳು, ವಾದ್ಯಗಳು ಮೊಳಗಿದವು. ಅನೇಕ ಬ್ರಾಹ್ಮಣರು ಮಂತ್ರೋಚ್ಚಾರಣೆ ಮಾಡತೊಡಗಿದರು. ಇಂದ್ರಿಯಗಳು ಮುಖ್ಯ ಪ್ರಾಣದೊಡನೆ ಸೇರುವಂತೆ ಯುಧಿಷ್ಠಿರನು ಭಗವಾನ್ ಹೃಷಿಕೇಶನನ್ನು ಸ್ವಾಗತಿಸಲು ಮುಂದಾದನು. ॥ ೨೪ ॥ ಭಗವಾನ್ ಶ್ರೀಕೃಷ್ಣನನ್ನು ನೋಡಿದ ಯುಧಿಷ್ಠಿರನ ಹೃದಯವು ಸ್ನೇಹಾತಿರೇಕದಿಂದ ಗದ್ಗದವಾಯಿತು. ಬಹಳ ದಿವಸಗಳ ಬಳಿದ ತನ್ನ ಪ್ರಿಯನಾದ ಭಗವಾನ್ ಶ್ರೀಕೃಷ್ಣನನ್ನು ನೋಡುವ ಸೌಭಾಗ್ಯವು ಒದಗಿತ್ತು. ಆದ್ದರಿಂದ ಅವನು ಕೃಷ್ಣನನ್ನು ಬಾರಿ-ಬಾರಿಗೂ ಆಲಿಂಗಿಸಿಕೊಂಡನು. ॥ ೨೫ ॥ ಭಗವಾನ್ ಶ್ರೀಕೃಷ್ಣನ ಶ್ರೀವಿಗ್ರಹವು ಲಕ್ಷ್ಮೀದೇವಿಗೆ ಪವಿತ್ರವೂ, ವಾಸಸ್ಥಾನವೂ ಆಗಿದೆ. ಯುಧಿಷ್ಠಿರನು ತನ್ನೆರಡೂ ಭುಜಗಳಿಂದ ಅದನ್ನು ಆಲಿಂಗಿಸಿಕೊಂಡು ಸಮಸ್ತ ಪಾಪ-ತಾಪಗಳಿಂದ ಬಿಡುಗಡೆ ಹೊಂದಿದನು. ಅವನು ಪರಮಾನಂದದ ಸಾಗರದಲ್ಲಿ ಮುಳುಗಿ ಹೋದನು. ಕಣ್ಣುಗಳಿಂದ ಆನಂದಾಶ್ರುಗಳು ಸುರಿಯುತ್ತಿದ್ದು ಶರೀರ ಪುಳಕಗೊಂಡಿತು. ಅವನು ಲೋಕವ್ಯವಹಾರವನ್ನೇ ಸಂಪೂರ್ಣವಾಗಿ ಮರೆತು ಬಿಟ್ಟನು. ॥ ೨೬ ॥ ಅನಂತರ ಭೀಮಸೇನನು ನಸುನಗುತ್ತಾ ಸೋದರ ಮಾವನ ಮಗನಾದ ಶ್ರೀಕೃಷ್ಣನನ್ನು ಗಾಢವಾಗಿ ಆಲಿಂಗಿಸಿಕೊಂಡು ಆನಂದಿಸಿದನು. ಪ್ರೇಮಾತಿಶಯದಿಂದ ಪರವಶನಾಗಿ ಬಾಹ್ಯಸ್ಮೃತಿಯೇ ಸ್ತಬ್ಧವಾಯಿತು. ಅರ್ಜುನ-ನಕುಲ-ಸಹದೇವರೂ ಕೂಡ ತಮಗೆ ಅತ್ಯಂತ ಪ್ರಿಯನಾದ ಶ್ರೀಕೃಷ್ಣನನ್ನು ಆನಂದದಿಂದ ಆಲಿಂಗಿಸಿಕೊಂಡರು. ಆಗ ಅವರ ಕಣ್ಣುಗಳಿಂದ ಆನಂದಬಾಷ್ಪಗಳು ಸುರಿಯುತ್ತಿದ್ದವು. ॥ ೨೭ ॥ ಅರ್ಜುನನು ಪುನಃ ಭಗವಂತನನ್ನು ಆಲಿಂಗಿಸಿಕೊಂಡನು. ನಕುಲ-ಸಹದೇವರು ಅಭಿವಾದನ ಮಾಡಿದರು ಮತ್ತು ಭಗವಾನ್ ಶ್ರೀಕೃಷ್ಣನು ಬ್ರಾಹ್ಮಣರನ್ನೂ, ಕುರುವಂಶೀ ವೃದ್ಧರನ್ನೂ ಯಥಾಯೋಗ್ಯವಾಗಿ ನಮಸ್ಕಾರ ಮಾಡಿದನು. ॥ ೨೮ ॥ ಕುರು, ಸೃಂಜಯ, ಕೇಕಯ ದೇಶದ ರಾಜರೂ ಭಗವಾನ್ ಶ್ರೀಕೃಷ್ಣನನ್ನು ಸಮ್ಮಾನಿಸಿದರು. ಭಗವಂತನೂ ಅವರನ್ನು ಯಥೋಚಿತವಾಗಿ ಸತ್ಕರಿಸಿದನು. ಸೂತ-ಮಾಗಧ-ವಂದೀಜನರು ಮತ್ತು ಬ್ರಾಹ್ಮಣರು ಭಗವಂತನನ್ನು ಸ್ತುತಿಸತೊಡಗಿದರು. ಗಂಧರ್ವರು, ನಟರು, ವಿದೂಷಕ ಮುಂತಾದವರು ಮೃದಂಗ, ಶಂಖ, ಡೋಲು, ವೀಣೆ, ಕೊಂಬು-ಕಹಳೆಗಳನ್ನು ನುಡಿಸುತ್ತಾ , ಹಾಡುತ್ತಾ, ನರ್ತನವಾಡಿದರು. ॥ ೨೯-೩೦ ॥ ಹೀಗೆ ಪುಣ್ಯಶ್ಲೋಕ ಶಿರೋಮಣಿಯಾದ ಶ್ರೀಕೃಷ್ಣನು ಸುಹೃದ್-ಸ್ವಜನರೊಂದಿಗೆ ಸರ್ವಾಲಂಕಾರ ಶೋಭಿತವಾದ ಇಂದ್ರಪ್ರಸ್ಥ ನಗರಿಯನ್ನು ಪ್ರವೇಶಿಸಿದನು. ಆ ಸಮಯದಲ್ಲಿ ಜನರು ಪರಸ್ಪರವಾಗಿ ಭಗವಾನ್ ಶ್ರೀಕೃಷ್ಣನನ್ನು ಪ್ರಶಂಸಿಸುತ್ತಾ ನಡೆಯುತ್ತಿದ್ದರು. ॥ ೩೧ ॥ ಇಂದ್ರಪ್ರಸ್ಥ ನಗರದ ಮಾರ್ಗಗಳು ಮದಿಸಿದ ಆನೆಗಳ ಸುಗಂಧಯುಕ್ತವಾದ ಮದೋದಕದಿಂದ ತೋಯಿಸಲ್ಪಟ್ಟಿದ್ದವು. ಅಲ್ಲಲ್ಲಿ ಬಣ್ಣ-ಬಣ್ಣದ ಧ್ವಜ-ಪತಾಕೆಗಳು ಹಾರಾಡುತ್ತಿದ್ದವು. ಚಿನ್ನದ ತೋರಣಗಳನ್ನು ಕಟ್ಟಿದ್ದರು. ನೀರು ತುಂಬಿದ ಚಿನ್ನದ ಕಲಶಗಳನ್ನು ಶ್ರೀಕೃಷ್ಣನ ಸ್ವಾಗತಕ್ಕಾಗಿ ಎಲ್ಲೆಡೆಗಳಲ್ಲಿ ಇಡಲ್ಪಟ್ಟಿದ್ದವು. ನಗರದ ನರ-ನಾರಿಯರು ನೂತನವಸ್ತ್ರಗಳನ್ನು ಆಭರಣಗಳನ್ನು ತೊಟ್ಟು ಪುಷ್ಪಮಾಲಿಕೆಗಳನ್ನು ಧರಿಸಿಕೊಂಡು, ಸುಗಂಧ ದ್ರವ್ಯಗಳನ್ನು ಪೂಸಿಕೊಂಡು ಸರ್ವಾಲಂಕಾರ ಭೂಷಿತರಾಗಿ ಓಡಾಡುತ್ತಿದ್ದರು. ॥ ೩೨ ॥

ಉದ್ದೀಪ್ತದೀಪಬಲಿಭಿಃ ಪ್ರತಿಸದ್ಮಜಾಲ-
ನಿರ್ಯಾತಧೂಪರುಚಿರಂ ವಿಲಸತ್ಪತಾಕಮ್ ।
ಮೂರ್ಧನ್ಯಹೇಮಕಲಶೈ ರಜತೋರುಶೃಂಗೈ-
ರ್ಜುಷ್ಟಂ ದದರ್ಶ ಭವನೈಃ ಕುರುರಾಜಧಾಮ ॥ ೩೩ ॥

ಪ್ರಾಪ್ತಂ ನಿಶಮ್ಯ ನರಲೋಚನಪಾನಪಾತ್ರ-
ಮೌತ್ಸುಕ್ಯವಿಶ್ಲಥಿತಕೇಶದುಕೂಲಬಂಧಾಃ ।
ಸದ್ಯೋ ವಿಸೃಜ್ಯ ಗೃಹಕರ್ಮ ಪತೀಂಶ್ಚ ತಲ್ಪೇ
ದ್ರಷ್ಟುಂ ಯಯುರ್ಯುವತಯಃ ಸ್ಮ ನರೇಂದ್ರಮಾರ್ಗೇ ॥ ೩೪ ॥

ತಸ್ಮಿನ್ ಸುಸಂಕುಲ ಇಭಾಶ್ವರಥದ್ವಿಪದ್ಭಿಃ
ಕೃಷ್ಣಂ ಸಭಾರ್ಯಮುಪಲಭ್ಯ ಗೃಹಾಧಿರೂಢಾಃ ।
ನಾರ್ಯೋ ವಿಕೀರ್ಯ ಕುಸುಮೈರ್ಮನಸೋಪಗುಹ್ಯ
ಸುಸ್ವಾಗತಂ ವಿದಧುರುತ್ಸ್ಮಯವೀಕ್ಷಿತೇನ ॥ ೩೫ ॥

ಊಚುಃ ಸ್ತ್ರಿಯಃ ಪಥಿ ನಿರೀಕ್ಷ್ಯ ಮುಕುಂದಪತ್ನೀ-
ಸ್ತಾರಾ ಯಥೋಡುಪಸಹಾಃ ಕಿಮಕಾರ್ಯಮೂಭಿಃ ।
ಯಚ್ಚಕ್ಷುಷಾಂ ಪುರುಷಮೌಲಿರುದಾರಹಾಸ-
ಲೀಲಾವಲೋಕಕಲಯೋತ್ಸವಮಾತನೋತಿ ॥ ೩೬ ॥

ತತ್ರ ತತ್ರೋಪಸಂಗಮ್ಯ ಪೌರಾ ಮಂಗಲಪಾಣಯಃ ।
ಚಕ್ರುಃ ಸಪರ್ಯಾಂ ಕೃಷ್ಣಾಯ ಶ್ರೇಣೀಮುಖ್ಯಾ ಹತೈನಸಃ ॥ ೩೭ ॥

ಅಂತಃಪುರಜನೈಃ ಪ್ರೀತ್ಯಾ ಮುಕುಂದಃ ಫುಲ್ಲಲೋಚನೈಃ ।
ಸಸಂಭ್ರಮೈರಭ್ಯುಪೇತಃ ಪ್ರಾವಿಶದ್ರಾಜಮಂದಿರಮ್ ॥ ೩೮ ॥

ಪೃಥಾ ವಿಲೋಕ್ಯ ಭ್ರಾತ್ರೇಯಂ ಕೃಷ್ಣಂ ತ್ರಿಭುವನೇಶ್ವರಮ್ ।
ಪ್ರೀತಾತ್ಮೋತ್ಥಾಯ ಪರ್ಯಂಕಾತ್ಸಸ್ನುಷಾ ಪರಿಷಸ್ವಜೇ ॥ ೩೯ ॥

ಮನೆ-ಮನೆ ಹೊಸ್ತಿಲುಗಳಲ್ಲಿ ದೀಪಗಳನ್ನು ಬೆಳಗಿಸಿದ್ದರು, ಅದನ್ನು ನೋಡಿದಾಗ ದೀಪಾವಳಿಯೇ ನೆನಪಾಗುತ್ತಿತ್ತು. ಪ್ರತಿಯೊಂದು ಮನೆಗಳ ಗವಾಕ್ಷಿಗಳಿಂದ ಅಗರುರೂಪದ ಹೊಗೆ ಹೊರಸೂಸುತ್ತಿತ್ತು. ಎಲ್ಲ ಮನೆಗಳ ಮೇಲೆಯೂ ಧ್ವಜಗಳು ಹಾರಾಡುತ್ತಿದ್ದು, ಬೆಳ್ಳಿಯ ಶಿಖರಗಳಿದ್ದು, ಚಿನ್ನದ ಕಲಶಗಳು ಹೊಳೆಯುತ್ತಿದ್ದುವು. ಇಂತಹ ಸೌಧಗಳಿಂದ ಕೂಡಿದ್ದ ಪಾಂಡವರ ರಾಜಧಾನಿ ಇಂದ್ರಪ್ರಸ್ಥವನ್ನು ನೋಡುತ್ತಾ ಭಗವಾನ್ ಶ್ರೀಕೃಷ್ಣನು ಮುಂದರಿಯುತ್ತಿದ್ದನು. ॥ ೩೩ ॥ ಮನುಷ್ಯರ ಕಣ್ಣುಗಳ ಪಾನಪಾತ್ರೆ ಅರ್ಥಾತ್ ಅತ್ಯಂತ ದರ್ಶನೀಯನಾದ ಭಗವಾನ್ ಶ್ರೀಕೃಷ್ಣನು ರಾಜಮಾರ್ಗದಲ್ಲಿ ಬರುತ್ತಿರುವನೆಂದು ಕೇಳಿದ ನಗರದ ಯುವತಿಯರು ಅವನ ದರ್ಶನದ ಔತ್ಸುಕ್ಯದಿಂದ ಮನೆಯ ಕೆಲಸವನ್ನು ಅಷ್ಟಕ್ಕೆ ನಿಲ್ಲಿಸಿ, ತಮ್ಮ ಗಂಡಂದಿರನ್ನೂ ಬಿಟ್ಟು ಅವರಿಗೂ ಹೇಳದೆ ಓಡಿ ಹೋಗುತ್ತಿರುವಾಗ ಮುಡಿಯು ಬಿಚ್ಚಿಹೋಗಿರುವುದನ್ನು, ಉಟ್ಟಸೀರೆಯು ಸಡಲಿಸಿರುವುದನ್ನು ಗಮನಿಸದೆ ಧಾವಿಸಿ ರಾಜಬೀದಿಗೆ ಬಂದರು. ॥ ೩೪ ॥ ರಥಾಶ್ವ-ಗಜ-ಪದಾತಿ ಸೈನಿಕರಿಂದ ಸಮಾಕುಲವಾಗಿದ್ದ ರಾಜಪಥದಲ್ಲಿ ಪತ್ನಿಯರ ಸಮೇತನಾಗಿ ಬರುತ್ತಿದ್ದ ಭಗವಾನ್ ಶ್ರೀಕೃಷ್ಣನನ್ನು ಮನೆಗಳ ಉಪ್ಪರಿಗೆಗಳ ಮೇಲೆ ನಿಂತ ಸ್ತ್ರೀಯರು ದರ್ಶನಮಾಡಿ ಅವನ ಮೇಲೆ ಹೂವಿನ ಮಳೆಯನ್ನು ಸುರಿಸಿದರು. ಮನಸ್ಸಿನಿಂದಲೇ ಜಗದಾನಂದಕಂದನನ್ನು ಆಲಿಂಗಿಸಿಕೊಂಡು, ಪ್ರೇಮಪೂರ್ಣವಾದ ಮಂದಹಾಸದಿಂದಲೂ, ಕಡೆಗಣ್ಣ ನೋಟಗಳಿಂದಲೂ ಶ್ರೀಕೃಷ್ಣನನ್ನು ಸ್ವಾಗತಿಸಿದರು. ॥ ೩೫ ॥ ನಗರದ ನಾರಿಯರು ರಾಜಪಥದಲ್ಲಿ ಚಂದ್ರನೊಡನೆ ಇರುವ ನಕ್ಷತ್ರದೇವತೆಗಳಂತಿದ್ದ ಶ್ರೀಕೃಷ್ಣನ ಪತ್ನಿಯರನ್ನು ನೋಡಿ ಹೀಗೆ ಮಾತಾಡಿಕೊಂಡರು - ಸಖಿಯರೇ! ಪುರುಷಶ್ರೇಷ್ಠನಾದ ಶ್ರೀಕೃಷ್ಣನು ಉದಾರವಾದ ಹಾಸ್ಯದಿಂದಲೂ, ವಿಲಾಸಪೂರ್ಣ ಕಟಾಕ್ಷವೀಕ್ಷಣದಿಂದಲೂ ತನ್ನ ಪತ್ನಿಯರ ಕಡೆಗೆ ನೋಡುತ್ತಾ ಅವರ ಕಣ್ಣುಗಳಿಗೆ ಪರಮಾನಂದಪ್ರದನಾಗಿದ್ದಾನೆ. ಇಂತಹ ಸೌಭಾಗ್ಯವನ್ನು ಪಡೆಯಲು ಇವರು ಎಂತಹ ಪುಣ್ಯಕಾರ್ಯಗಳನ್ನು ಮಾಡಿದ್ದರು ?॥೩೬॥ ಹೀಗೆ ಭಗವಾನ್ ಶ್ರೀಕೃಷ್ಣನು ರಾಜಬೀದಿಯಲ್ಲಿ ಹೋಗುತ್ತಿದ್ದಾಗ ಅಲ್ಲಲ್ಲಿ ಪುಣ್ಯಾತ್ಮರಾದ ಶ್ರೀಮಂತರೂ, ವ್ಯಾಪಾರಿಗಳೂ, ಪರಜನರೂ ಅನೇಕ ಮಾಂಗಲಿಕ ದ್ರವ್ಯಗಳನ್ನು ತಂದು-ತಂದು ಶ್ರೀಕೃಷ್ಣನನ್ನು ಪೂಜಿಸಿ, ಸ್ವಾಗತಿಸಿ, ಸತ್ಕರಿಸುತ್ತಿದ್ದರು. ॥ ೩೭ ॥

ಅಂತಃಪುರದ ಸ್ತ್ರೀಯರು ಭಗವಾನ್ ಶ್ರೀಕೃಷ್ಣನನ್ನು ನೋಡಿ ಪ್ರೇಮಾನಂದದಲ್ಲಿ ಮುಳುಗಿಹೋದರು. ಅವರು ಪ್ರೇಮವಿಹ್ವಲ ಮತ್ತು ಆನಂದದಿಂದ ಅರಳಿದ್ದ ತಮ್ಮ ಕಣ್ಣುಗಳಿಂದ ಭಗವಂತನನ್ನು ಸ್ವಾಗತಿಸಿ ಸತ್ಕರಿಸಿದರು. ಅವರ ಸ್ವಾಗತ-ಸತ್ಕಾರವನ್ನು ಸ್ವೀಕರಿಸುತ್ತಾ ಶ್ರೀಕೃಷ್ಣನು ಅರಮನೆಯನ್ನು ಪ್ರವೇಶಿಸಿದನು. ॥ ೩೮ ॥ ಕುಂತಿಯು ತ್ರಿಭುವನೇಶ್ವರನಾದ ತನ್ನ ಅಣ್ಣನ ಮಗನಾದ ಶ್ರೀಕೃಷ್ಣನನ್ನು ನೋಡಿದಾಗ ಆಕೆಯ ಹೃದಯ ಪ್ರೇಮದಿಂದ ತುಂಬಿ ಬಂತು. ಅವಳು ಮಂಚದಿಂದಿಳಿದು ಸೊಸೆಯಾದ ದ್ರೌಪದಿಯೊಡನೆ ಮುಂದೆ ಬಂದು ಶ್ರೀಕೃಷ್ಣನನ್ನು ಗಾಢವಾಗಿ ಆಲಿಂಗಿಸಿಕೊಂಡಳು. ॥ ೩೯ ॥

ಗೋವಿಂದಂ ಗೃಹಮಾನೀಯ ದೇವದೇವೇಶಮಾದೃತಃ ।
ಪೂಜಾಯಾಂ ನಾವಿದತ್ ಕೃತ್ಯಂ ಪ್ರಮೋದೋಪಹತೋ ನೃಪಃ
॥ ೪೦ ॥

ಪಿತೃಷ್ವಸುರ್ಗುರುಸ್ತ್ರೀಣಾಂ ಕೃಷ್ಣಶ್ಚಕ್ರೇಽಭಿವಾದನಮ್ ।
ಸ್ವಯಂ ಚ ಕೃಷ್ಣಯಾ ರಾಜನ್ ಭಗಿನ್ಯಾ ಚಾಭಿವಂದಿತಃ
॥ ೪೧ ॥

ಶ್ವಶ್ರ್ವಾ ಸಂಚೋದಿತಾ ಕೃಷ್ಣಾ ಕೃಷ್ಣಪತ್ನೀಶ್ಚ ಸರ್ವಶಃ ।
ಆನರ್ಚ ರುಕ್ಮಿಣೀಂ ಸತ್ಯಾಂ ಭದ್ರಾಂ ಜಾಂಬವತೀಂ ತಥಾ
॥ ೪೨ ॥

ಕಾಲಿಂದೀಂ ಮಿತ್ರವಿಂದಾಂ ಚ ಶೈಬ್ಯಾಂ ನಾಗ್ನಜಿತೀಂ ಸತೀಮ್ ।
ಅನ್ಯಾಶ್ಚಾಭ್ಯಾಗತಾ ಯಾಸ್ತು ವಾಸಃಸ್ರಙ್ಮಂಡನಾದಿಭಿಃ
॥ ೪೩ ॥

ಸುಖಂ ನಿವಾಸಯಾಮಾಸ ಧರ್ಮರಾಜೋ ಜನಾರ್ದನಮ್ ।
ಸಸೈನ್ಯಂ ಸಾನುಗಾಮಾತ್ಯಂ ಸಭಾರ್ಯಂ ಚ ನವಂ ನವಮ್
॥ ೪೪ ॥

ತರ್ಪಯಿತ್ವಾ ಖಾಂಡವೇನ ವಹ್ನಿಂ ಫಾಲ್ಗುನಸಂಯುತಃ ।
ಮೋಚಯಿತ್ವಾಮಯಂ ಯೇನ ರಾಜ್ಞೇ ದಿವ್ಯಾ ಸಭಾ ಕೃತಾ
॥ ೪೫ ॥

ಉವಾಸ ಕತಿಚಿನ್ಮಾಸಾನ್ ರಾಜ್ಞಃ ಪ್ರಿಯಚಿಕೀರ್ಷಯಾ ।
ವಿಹರನ್ರಥಮಾರುಹ್ಯ ಫಾಲ್ಗುನೇನ ಭಟೈರ್ವೃತಃ
॥ ೪೬ ॥

ದೇವದೇವೇಶ್ವರ ಭಗವಾನ್ ಶ್ರೀಕೃಷ್ಣನನ್ನು ಆದರಭಾವದಿಂದ ಅರಮನೆಯೊಳಗೆ ಕರೆತಂದಾಗ ಯುಧಿಷ್ಠಿರನು ಆನಂದೋದ್ರೇಕದಿಂದ ಮೈಮರೆತನು. ಭಗವಂತನನ್ನು ಯಾವ ವಿಧದಿಂದ ಪೂಜಿಸಬೇಕೆಂಬುದು ತಿಳಿಯದೆ ಹೋಯಿತು. ॥ ೪೦ ॥ ಭಗವಾನ್ ಶ್ರೀಕೃಷ್ಣನು ತನ್ನ ಅತ್ತೆ ಕುಂತಿಯನ್ನು ಹಾಗೂ ಗುರುಪತ್ನಿಯರಿಗೂ ನಮಸ್ಕರಿಸಿದನು. ಅವನ ತಂಗಿಯಾದ ಸುಭದ್ರೆ ಮತ್ತು ದ್ರೌಪದಿಯು ಭಗವಂತನಿಗೆ ನಮಸ್ಕರಿಸಿದರು. ॥ ೪೧ ॥ ಅತ್ತೆಯಾದ ಕುಂತೀದೇವಿಯ ಪ್ರೇರಣೆಯಂತೆ ದ್ರೌಪದಿಯು ರುಕ್ಮಿಣೀ, ಸತ್ಯಭಾಮೆ, ಭದ್ರಾ, ಜಾಂಬವತೀ, ಕಾಲಿಂದೀ, ಮಿತ್ರವಿಂದಾ, ಲಕ್ಷ್ಮಣಾ ಮತ್ತು ಸತ್ಯಾ ಮೊದಲಾದ ಶ್ರೀಕೃಷ್ಣನ ಪಟ್ಟದರಾಣಿಯರನ್ನು ಹಾಗೂ ಅಲ್ಲಿಗೆ ಬಂದ ಶ್ರೀಕೃಷ್ಣನ ಇತರ ರಾಣಿಯರನ್ನು ವಸ್ತ್ರಾಭರಣ, ಪುಷ್ಪಹಾರಗಳಿಂದ ಯಥಾಯೋಗ್ಯವಾಗಿ ಸತ್ಕರಿಸಿದಳು. ॥ ೪೨-೪೩ ॥ ಧರ್ಮರಾಜ ಯುಧಿಷ್ಠಿರನು ಶ್ರೀಕೃಷ್ಣನಿಗೆ ಅವನ ಸೈನ್ಯಕ್ಕೆ, ಸೇವಕ-ಮಂತ್ರಿಗಳಿಗೆ ಹಾಗೂ ಪತ್ನಿಯರಿಗೆ ಯಥಾಯೋಗ್ಯವಾದ ಸುಖಕರ ವಸತಿಗಳನ್ನು ಏರ್ಪಡಿಸಿಕೊಟ್ಟು ಅನುದಿನವು ಹೊಸ-ಹೊಸ ಬಗೆಯ ಸತ್ಕಾರಗಳಿಂದ ಅವರೆಲ್ಲರನ್ನು ಉಪಚರಿಸುತ್ತಿದ್ದನು. ॥ ೪೪ ॥ ಭಗವಾನ್ ಶ್ರೀಕೃಷ್ಣನು ಅರ್ಜುನನೊಂದಿಗೆ ಇದ್ದು ಖಾಂಡವವನವನ್ನು ದಹಿಸಲು ಅಗ್ನಿಗೆ ಅನುವುಮಾಡಿಕೊಟ್ಟು ಅವನನ್ನು ತೃಪ್ತಪಡಿಸಿದನು. ಆ ಅಗ್ನಿಯಿಂದ ಬದುಕಿಸಿದ್ದ ಮಾಯಾಸುರನು ಭಗವಂತನ ಆಜ್ಞೆಯಂತೆ ಯುಧಿಷ್ಠಿರನಿಗೆ ದಿವ್ಯವಾದೊಂದು ಸಭಾಭವನವನ್ನು ನಿರ್ಮಿಸಿಕೊಟ್ಟನು. ॥ ೪೫ ॥ ಶ್ರೀಕೃಷ್ಣನು ಯುಧಿಷ್ಠಿರನನ್ನು ಸಂತೋಷಪಡಿಸಲೆಂದೇ ಕೆಲವು ತಿಂಗಳುಗಳ ಕಾಲ ಇಂದ್ರಪ್ರಸ್ಥದಲ್ಲೇ ಉಳಿದುಕೊಂಡನು. ಅವನು ಆಗಾಗ ಅರ್ಜುನನೊಡನೆ ರಥದಲ್ಲಿ ಕುಳಿತು ಅಲ್ಲಿ-ಇಲ್ಲಿ ಸಂಚರಿಸುತ್ತಿದ್ದನು. ಆಗ ಮಹಾ-ಮಹಾ ವೀರ ಸೈನಿಕರೂ ಕೂಡ ಅವರ ಸೇವೆಗೆ ಜೊತೆಯಲ್ಲೇ ಹೋಗುತ್ತಿದ್ದರು. ॥ ೪೬ ॥

ಎಪ್ಪತ್ತೊಂದನೆಯ ಅಧ್ಯಾಯವು ಮುಗಿಯಿತು. ॥ ೭೧ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಉತ್ತರಾರ್ಧೇ ಕೃಷ್ಣಸ್ಯೇಂದ್ರಪ್ರಸ್ಥಗಮನಂ ನಾಮೈಕಸಪ್ತತಿತಮೋಽಧ್ಯಾಯಃ ॥ ೭೧ ॥

# ಎಪ್ಪತ್ತೆರಡನೆಯ ಅಧ್ಯಾಯ

## ಪಾಂಡವರಿಂದ ರಾಜಸೂಯ ಯಜ್ಞದ ಉಪಕ್ರಮ ಮತ್ತು ಜರಾಸಂಧನ ಉದ್ಧಾರ

*ಶ್ರೀಶುಕ ಉವಾಚ*

ಏಕದಾ ತು ಸಭಾಮಧ್ಯೇ ಆಸ್ಥಿತೋ ಮುನಿಭಿರ್ವೃತಃ ।
ಬ್ರಾಹ್ಮಣೈಃ ಕ್ಷತ್ರಿಯೈರ್ವೈಶ್ಯೈರ್ಭ್ರಾತೃಭಿಶ್ಚ ಯುಧಿಷ್ಠಿರಃ
॥ ೧ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** - ಪರೀಕ್ಷಿತನೇ! ಒಂದು ದಿನ ಯುಧಿಷ್ಠಿರ ಮಹಾರಾಜನು ಹಲವಾರು ಮುನಿಗಳಿಂದಲೂ, ಬ್ರಾಹ್ಮಣರಿಂದಲೂ, ಕ್ಷತ್ರಿಯರಿಂದಲೂ, ವೈಶ್ಯರಿಂದಲೂ, ಭೀಮಸೇನನೇ ಮೊದಲಾದ ಸಹೋದರರಿಂದಲೂ, ಆಚಾರ್ಯರಿಂದಲೂ, ಕುರುಕುಲದ ಹಿರಿಯರಿಂದಲೂ, ಬಂಧು ಬಾಂಧವರಿಂದಲೂ ಕೂಡಿಕೊಂಡು ರಾಜಸಭೆಯಲ್ಲಿ ಕುಳಿತಿದ್ದನು.

ಆಚಾರ್ಯೈಃ ಕುಲವೃದ್ಧೈಶ್ಚ ಜ್ಞಾತಿಸಂಬಂಧಿ ಬಾಂಧವೈಃ ।
ಶೃಣ್ವತಾಮೇವ ಚೈತೇಷಾಮಾಭಾಷ್ಯೇದಮುವಾಚ ಹ ॥ ೨ ॥

*ಯುಧಿಷ್ಠಿರ ಉವಾಚ*

ಕ್ರತುರಾಜೇನ ಗೋವಿಂದ ರಾಜಸೂಯೇನ ಪಾವನೀಃ ।
ಯಕ್ಷ್ಯೇ ವಿಭೂತೀರ್ಭವತಸ್ತತ್ಸಂಪಾದಯ ನಃ ಪ್ರಭೋ ॥ ೩ ॥

ತ್ವತ್ಪಾದುಕೇ ಅವಿರತಂ ಪರಿ ಯೇ ಚರಂತಿ
ಧ್ಯಾಯಂತ್ಯಭದ್ರನಶನೇ ಶುಚಯೋ ಗೃಣಂತಿ ।
ವಿಂದಂತಿ ತೇ ಕಮಲನಾಭ ಭವಾಪವರ್ಗ-
ಮಾಶಾಸತೇ ಯದಿ ತ ಆಶಿಷ ಈಶ ನಾನ್ಯೇ ॥ ೪ ॥

ತದ್ದೇವದೇವ ಭವತಶ್ಚರಣಾರವಿಂದ-
ಸೇವಾನುಭಾವಮಿಹ ಪಶ್ಯತು ಲೋಕ ಏಷಃ ।
ಯೇ ತ್ವಾಂ ಭಜಂತಿ ನ ಭಜಂತ್ಯುತ ವೋಭಯೇಷಾಂ
ನಿಷ್ಠಾಂ ಪ್ರದರ್ಶಯ ವಿಭೋ ಕುರುಸೃಂಜಯಾನಾಮ್ ॥ ೫ ॥

ನ ಬ್ರಹ್ಮಣಃ ಸ್ವಪರಭೇದಮತಿಸ್ತವ ಸ್ಯಾತ್
ಸರ್ವಾತ್ಮನಃ ಸಮದೃಶಃ ಸ್ವಸುಖಾನುಭೂತೇಃ ।
ಸಂಸೇವತಾಂ ಸುರತರೋರಿವ ತೇ ಪ್ರಸಾದಃ
ಸೇವಾನುರೂಪಮುದಯೋ ನ ವಿಪರ್ಯಯೋಽತ್ರ ॥ ೬ ॥

*ಶ್ರೀಭಗವಾನುವಾಚ*

ಸಮ್ಯಗ್ವ್ಯವಸಿತಂ ರಾಜನ್ ಭವತಾ ಶತ್ರುಕರ್ಶನ ।
ಕಲ್ಯಾಣೀ ಯೇನ ತೇ ಕೀರ್ತಿರ್ಲೋಕಾನನುಭವಿಷ್ಯತಿ ॥ ೭ ॥

ಋಷೀಣಾಂ ಪಿತೃದೇವಾನಾಂ ಸುಹೃದಾಮಪಿ ನಃ ಪ್ರಭೋ ।
ಸರ್ವೇಷಾಮಪಿ ಭೂತಾನಾಮೀಪ್ಸಿತಃ ಕ್ರತುರಾಡಯಮ್ ॥ ೮ ॥

ವಿಜಿತ್ಯ ನೃಪತೀನ್ಸರ್ವಾನ್ಕೃತ್ವಾ ಚ ಜಗತೀಂ ವಶೇ ।
ಸಂಭೃತ್ಯ ಸರ್ವಸಂಭಾರಾನಾಹರಸ್ವ ಮಹಾಕ್ರತುಮ್ ॥ ೯ ॥

ಏತೇ ತೇ ಭ್ರಾತರೋ ರಾಜನ್ ಲೋಕಪಾಲಾಂಶಸಂಭವಾಃ ।
ಜಿತೋಽಸ್ಮ್ಯಾತ್ಮವತಾ ತೇಽಹಂ ದುರ್ಜಯೋ ಯೋಽಕೃತಾತ್ಮಭಿಃ ॥ ೧೦ ॥

ಆಗ ಭಗವಾನ್ ಶ್ರೀಕೃಷ್ಣನನ್ನು ಸಂಬೋಧಿಸುತ್ತಾ ಎಲ್ಲರೆದುರಿಗೆ ಇಂತೆಂದನು – ॥ ೧-೨ ॥

**ಧರ್ಮರಾಜ ಯುಧಿಷ್ಠಿರನು ಹೇಳಿದನು** – ಗೋವಿಂದ! ಸರ್ವಶ್ರೇಷ್ಠ ರಾಜಸೂಯಯಾಗದ ಮೂಲಕ ನಿನ್ನನ್ನು ಮತ್ತು ನಿನ್ನ ಪರಮಪಾವನ ವಿಭೂತಿಸ್ವರೂಪರಾದ ದೇವತೆಗಳನ್ನು ಪೂಜಿಸಲು ನಾನು ಬಯಸಿದ್ದೇನೆ. ಪ್ರಭೋ! ಕೃಪೆಮಾಡಿ ನನ್ನ ಈ ಸಂಕಲ್ಪವನ್ನು ನಡೆಸಿಕೊಡಬೇಕು. ॥ ೩ ॥ ಪದ್ಮನಾಭನೇ! ನಿನ್ನ ಚರಣಕಮಲಗಳ ಪಾದುಕೆಗಳು ಸಮಸ್ತ ಅಮಂಗಳಗಳನ್ನು ನಾಶಮಾಡುವಂತಹುಗಳು. ನಿರಂತರವಾಗಿ ಅವನ್ನು ಸೇವಿಸುವವರು, ಧ್ಯಾನಿಸುತ್ತಾ ಸ್ತುತಿಸುವವರೇ ನಿಜವಾದ ಪವಿತ್ರಾತ್ಮರು. ಅವರು ಜನ್ಮ-ಮೃತ್ಯುವಿನ ಚಕ್ರದಿಂದ ಬಿಡುಗಡೆ ಹೊಂದುವರು. ಅವರು ಒಂದು ವೇಳೆ ಸಾಂಸಾರಿಕ ವಿಷಯಗಳನ್ನು ಆಶಿಸಿದರೂ ಅವರಿಗೆ ಅವು ದೊರೆಯುತ್ತವೆ. ಆದರೆ ನಿನ್ನ ಚರಣಕಮಲಗಳಲ್ಲಿ ಶರಣಾಗದವರಿಗೆ ಮುಕ್ತಿಯು ಸಿಗುವುದಿಲ್ಲ, ಸಾಂಸಾರಿಕ ಭೋಗಗಳೂ ಸಿಗುವುದಿಲ್ಲ. ॥ ೪ ॥ ದೇವತೆಗಳಿಗೂ ಆರಾಧ್ಯನಾದ ಶ್ರೀಕೃಷ್ಣನೇ! ಸಂಸಾರಿ ಜನರು ನಿನ್ನ ಚರಣಕಮಲಗಳ ಸೇವೆಯ ಮಹಿಮೆಯನ್ನು ಕಾಣಲೆಂದೇ ನಾನು ಬಯಸುತ್ತೇನೆ. ಪ್ರಭೋ! ಕುರುವಂಶೀಯ ರಾಜರಲ್ಲಿ ಮತ್ತು ಸೃಂಜಯವಂಶೀಯ ರಾಜರಲ್ಲಿ ನಿನ್ನನ್ನು ಭಜಿಸುವವರ ಮತ್ತು ಭಜಿಸದವರ ವ್ಯತ್ಯಾಸವನ್ನು ಜನತೆಗೆ ನೀನು ತೋರಿಸಿಕೊಡು. ॥ ೫ ॥ ಪ್ರಭುವೇ! ನೀನು ಎಲ್ಲರ ಆತ್ಮನೂ, ಸಮದರ್ಶಿಯೂ, ಆತ್ಮಾನಂದದ ಸಾಕ್ಷಾತ್ಕಾರನೂ, ಪರಬ್ರಹ್ಮನೂ ಆಗಿರುವೆ. 'ಇದು ನನ್ನದು, ಇದು ಪರರದ್ದು; ಇವನು ನನ್ನವನು ಇವನು ಪರಕೀಯನು' ಎಂಬ ಭೇದಭಾವವು ನಿನ್ನಲ್ಲಿಲ್ಲ, ಹೀಗಿದ್ದರೂ ಕಲ್ಪವೃಕ್ಷವನ್ನು ಸೇವಿಸುವವರಿಗೆ ತಮ್ಮ ಭಾವನೆಗೆ ಅನುಸಾರವಾಗಿ ಸಕಲ ವಸ್ತುಗಳು, ಫಲಗಳು ಸಿಗುವಂತೆ ದೊರೆಯುತ್ತವೆ. ಆ ಫಲದಲ್ಲಿ ಇರುವ ನ್ಯೂನಾಧಿಕ್ಯವು ಅವರವರ ಸೇವೆಗೆ ಅನುರೂಪವಾಗಿಯೇ ಇರುವುದು. ಇದರಿಂದ ನಿನ್ನಲ್ಲಿ ವಿಷಮತೆ, ನಿರ್ದಯತೆ ಮುಂತಾದ ದೋಷಗಳು ಉಂಟಾಗುವುದಿಲ್ಲ. ॥ ೬ ॥

**ಭಗವಾನ್ ಶ್ರೀಕೃಷ್ಣನು ಹೇಳಿದನು** – ಶತ್ರುವಿಜಯಿಯಾದ ಯುಧಿಷ್ಠಿರನೇ! ರಾಜಸೂಯಜ್ಞಮಾಡುವ ನಿನ್ನ ನಿರ್ಧಾರವು ಶ್ಲಾಘ್ಯವಾಗಿದೆ. ಇದರಿಂದ ನಿನ್ನ ಮಂಗಳಮಯ ಕೀರ್ತಿಯು ಎಲ್ಲ ಲೋಕಗಳಲ್ಲಿಯೂ ಹರಡುವುದು. ॥ ೭ ॥ ರಾಜನೇ! ನಿನ್ನ ಈ ಮಹಾಯಜ್ಞವು ಋಷಿಗಳಿಗೂ, ಪಿತೃಗಳಿಗೂ, ದೇವತೆಗಳಿಗೂ, ಸುಹೃದರಿಗೂ ನಮಗೂ ಮತ್ತು ಸಮಸ್ತ ಪ್ರಾಣಿಗಳಿಗೂ ಅಭೀಷ್ಟವೇ ಆಗಿದೆ. ॥ ೮ ॥ ಮಹಾರಾಜ! ಭೂಮಿಯ ಸಮಸ್ತ ರಾಜರನ್ನು ಗೆದ್ದುಕೊಂಡು, ಇಡೀ ಪೃಥಿವಿಯನ್ನು ವಶಪಡಿಸಿಕೊಂಡು, ಯಜ್ಞೋಚಿತವಾದ ಸಮಸ್ತ ಸಾಮಗ್ರಿಗಳನ್ನು ಒಟ್ಟುಗೂಡಿಸಿಕೊಂಡು ಮತ್ತೆ ಈ ಮಹಾ ಯಜ್ಞಾನುಷ್ಠಾನವನ್ನು ಮಾಡು. ॥ ೯ ॥ ಧರ್ಮರಾಯನೇ! ನಿನ್ನ ನಾಲ್ಕು ತಮ್ಮಂದಿರು ವಾಯು, ಇಂದ್ರರೇ ಮೊದಲಾದ ಲೋಕಪಾಲರ ಅಂಶದಿಂದ ಹುಟ್ಟಿದವರು. ಅವರೆಲ್ಲರೂ ಮಹಾವೀರರಾಗಿದ್ದಾರೆ. ನೀನಾದರೋ ಮಹಾಮನಸ್ವಿಯೂ, ಸಂಯಮಿಯೂ ಆಗಿರುವೆ. ನೀವೆಲ್ಲರೂ ನಿಮ್ಮ ಸದ್ಗುಣಗಳಿಂದ ನನ್ನನ್ನು ವಶಪಡಿಸಿಕೊಂಡಿರುವಿರಿ. ಇಂದ್ರಿಯಗಳನ್ನೂ ಮನವನ್ನು ಸಂಯಮಿಸಿಕೊಳ್ಳದವರು ನನ್ನನ್ನು ವಶಪಡಿಸಿಕೊಳ್ಳಲಾರರು. ॥ ೧೦ ॥

ನ ಕಶ್ಚಿನ್ಮತ್ಪರಂ ಲೋಕೇ ತೇಜಸಾ ಯಶಸಾ ಶ್ರಿಯಾ ।
ವಿಭೂತಿಭಿರ್ವಾಭಿಭವೇದ್ದೇವೋಽಪಿ ಕಿಮು ಪಾರ್ಥಿವಃ ॥ ೧೧ ॥

ಶ್ರೀಶುಕ ಉವಾಚ

ನಿಶಮ್ಯ ಭಗವದ್ಗೀತಂ ಪ್ರೀತಃ ಫುಲ್ಲಮುಖಾಂಬುಜಃ ।
ಭ್ರಾತೄನ್ ದಿಗ್ವಿಜಯೇಽಯುಂಕ್ತ ವಿಷ್ಣುತೇಜೋಪಬೃಂಹಿತಾನ್ ॥ ೧೨ ॥

ಸಹದೇವಂ ದಕ್ಷಿಣಸ್ಯಾಮಾದಿಶತ್ಸಹ ಸೃಂಜಯೈಃ ।
ದಿಶಿ ಪ್ರತೀಚ್ಯಾಂ ನಕುಲಮುದೀಚ್ಯಾಂ ಸವ್ಯಸಾಚಿನಮ್ ।
ಪ್ರಾಚ್ಯಾಂ ವೃಕೋದರಂ ಮತ್ಸ್ಯೈಃ ಕೇಕಯೈಃ ಸಹ ಮದ್ರಕೈಃ ॥ ೧೩ ॥

ತೇ ವಿಜಿತ್ಯ ನೃಪಾನ್ವೀರಾ ಆಜಹ್ರುರ್ದಿಗ್ಭ್ಯ ಓಜಸಾ ।
ಅಜಾತಶತ್ರವೇ ಭೂರಿ ದ್ರವಿಣಂ ನೃಪ ಯಕ್ಷ್ಯತೇ ॥ ೧೪ ॥

ಶ್ರುತ್ವಾಜಿತಂ ಜರಾಸಂಧಂ ನೃಪತೇರ್ಧ್ಯಾಯತೋ ಹರಿಃ ।
ಆಹೋಪಾಯಂ ತಮೇವಾದ್ಯ ಉದ್ಧವೋ ಯಮುವಾಚ ಹ ॥ ೧೫ ॥

ಭೀಮಸೇನೋಽರ್ಜುನಃ ಕೃಷ್ಣೋ ಬ್ರಹ್ಮಲಿಂಗಧರಾಸ್ತ್ರಯಃ ।
ಜಗ್ಮುರ್ಗಿರಿವ್ರಜಂ ತಾತ ಬೃಹದ್ರಥಸುತೋ ಯತಃ ॥ ೧೬ ॥

ತೇ ಗತ್ವಾಽತಿಥ್ಯವೇಲಾಯಾಂ ಗೃಹೇಷು ಗೃಹಮೇಧಿನಮ್ ।
ಬ್ರಹ್ಮಣ್ಯಂ ಸಮಯಾಚೇರನ್ರಾಜನ್ಯಾ ಬ್ರಹ್ಮಲಿಂಗಿನಃ ॥ ೧೭ ॥

ರಾಜನ್ವಿದ್ಧ್ಯತಿಥೀನ್ ಪ್ರಾಪ್ತಾನರ್ಥಿನೋ ದೂರಮಾಗತಾನ್ ।
ತನ್ನಃ ಪ್ರಯಚ್ಛ ಭದ್ರಂ ತೇ ಯದ್ವಯಂ ಕಾಮಯಾಮಹೇ ॥ ೧೮ ॥

ಕಿಂ ದುರ್ಮರ್ಷಂ ತಿತಿಕ್ಷೂಣಾಂ ಕಿಮಕಾರ್ಯಮಸಾಧುಭಿಃ ।
ಕಿಂ ನ ದೇಯಂ ವದಾನ್ಯಾನಾಂ ಕಃ ಪರಃ ಸಮದರ್ಶಿನಾಮ್ ॥ ೧೯ ॥

ಯೋಽನಿತ್ಯೇನ ಶರೀರೇಣ ಸತಾಂ ಗೇಯಂ ಯಶೋ ಧ್ರುವಮ್ ।
ನಾಚಿನೋತಿ ಸ್ವಯಂ ಕಲ್ಪಃ ಸ ವಾಚ್ಯಃ ಶೋಚ್ಯ ಏವ ಸಃ ॥ ೨೦ ॥

ಪ್ರಪಂಚದಲ್ಲಿ ದೊಡ್ಡ-ದೊಡ್ಡ ದೇವತೆಗಳೂ ಕೂಡ ತೇಜ, ಯಶಸ್ಸು, ಲಕ್ಷ್ಮೀ, ಸೌಂದರ್ಯ, ಐಶ್ವರ್ಯ ಮುಂತಾದವುಗಳ ಮೂಲಕ ನನ್ನ ಭಕ್ತರನ್ನು ತಿರಸ್ಕರಿಸಲಾರರು. ಹಾಗಿರುವಾಗ ಯಾರೇ ರಾಜನು ಅವನ ತಿರಸ್ಕಾರವನ್ನು ಮಾಡಲು ಸಂಭವವೇ ಇಲ್ಲ. ॥ ೧೧ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** - ಪರೀಕ್ಷಿತನೇ! ಭಗವಂತನ ಮಾತನ್ನು ಕೇಳಿ ಮಹಾರಾಜ ಯುಧಿಷ್ಠಿರನ ಹೃದಯ ಆನಂದತುಂದಿಲವಾಯಿತು. ಅವನ ಮುಖವು ಪ್ರಫುಲ್ಲಿತ ವಾಯಿತು. ಆಗ ಅವನು ತನ್ನ ತಮ್ಮಂದಿರನ್ನು ದಿಗ್ವಿಜಯಕ್ಕಾಗಿ ಕಳಿಸಿದನು. ಭಗವಾನ್ ಶ್ರೀಕೃಷ್ಣನು ಪಾಂಡವರಲ್ಲಿ ತನ್ನ ಶಕ್ತಿಯನ್ನು ತುಂಬಿ ಅತ್ಯಂತ ಪ್ರಭಾವಿಯನ್ನಾಗಿಸಿದನು. ॥ ೧೨ ॥ ಧರ್ಮರಾಜ ಯುಧಿಷ್ಠಿರನು ಸೃಂಜಯವಂಶದ ವೀರರೊಂದಿಗೆ ಸಹದೇವನನ್ನು ದಕ್ಷಿಣ ದಿಕ್ಕಿಗೆ ದಿಗ್ವಿಜಯಕ್ಕಾಗಿ ಕಳಿಸಿದನು. ಮತ್ಸ್ಯದೇಶದವೀರ ರೊಂದಿಗೆ ನಕುಲನನ್ನು ಪಶ್ಚಿಮಕ್ಕೂ, ಕೇಕಯ ದೇಶದ ವೀರ ರೊಂದಿಗೆ ಅರ್ಜುನನ್ನು ಉತ್ತರಕ್ಕೂ, ಮದ್ರದೇಶದ ವೀರರೊಂದಿಗೆ ಭೀಮಸೇನನನ್ನು ದಿಗ್ವಿಜಯಕ್ಕಾಗಿ ಪೂರ್ವದಿಕ್ಕಿಗೂ ಕಳಿಸಿ ಕೊಟ್ಟನು. ॥ ೧೩ ॥ ಪರೀಕ್ಷಿತನೇ! ಭೀಮಸೇನನೇ ಮೊದಲಾದ ಆ ವೀರರು ತಮ್ಮ ಬಲ-ಪೌರುಷದಿಂದ ಎಲ್ಲ ದಿಕ್ಕಿನ ರಾಜರನ್ನು ಗೆದ್ದುಕೊಂಡು, ಯಜ್ಞಮಾಡಲು ಉದ್ಯುಕ್ತನಾದ ಯುಧಿಷ್ಠಿರನಿಗೆ ಅತುಲವಾದ ಧನವನ್ನು ತಂದು ಒಪ್ಪಿಸಿದರು. ॥ ೧೪ ॥ ಇನ್ನೂ ಜರಾಸಂಧನನ್ನು ಗೆದ್ದುಕೊಂಡಿಲ್ಲ ಎಂಬುದನ್ನು ಕೇಳಿದ ಯುಧಿಷ್ಠಿರನು ಚಿಂತಾತುರನಾದನು. ಆ ಸಮಯದಲ್ಲಿ ಭಗವಾನ್ ಶ್ರೀಕೃಷ್ಣನು ಹಿಂದೆ ಉದ್ಧವನು ಹೇಳಿದ ಉಪಾಯವನ್ನು ಧರ್ಮ ರಾಯನಿಗೆ ತಿಳಿಸಿದನು. ॥ ೧೫ ॥ ಪರೀಕ್ಷಿತನೇ! ಅನಂತರ ಭೀಮ ಸೇನ, ಅರ್ಜುನ ಮತ್ತು ಭಗವಾನ್ ಶ್ರೀಕೃಷ್ಣ ಹೀಗೆ ಮೂವರೂ ಬ್ರಾಹ್ಮಣರ ವೇಷವನ್ನು ಧರಿಸಿ ಜರಾಸಂಧನ ರಾಜಧಾನಿಯಾದ ಗಿರಿವ್ರಜಕ್ಕೆ ಹೋದರು. ॥ ೧೬ ॥ ಜರಾಸಂಧನು ಬ್ರಾಹ್ಮಣರ ಭಕ್ತ ನಾಗಿದ್ದು, ಗೃಹಸ್ಥೋಚಿತವಾದ ಧರ್ಮಗಳನ್ನು ಪಾಲಿಸುವವನಾಗಿ ಇದ್ದನು. ಶ್ರೀಕೃಷ್ಣನೇ ಮೊದಲಾದ ಕ್ಷತ್ರಿಯ ವೀರರು ಬ್ರಾಹ್ಮಣರ ವೇಷಗಳನ್ನು ಧರಿಸಿ ಅತಿಥಿ-ಅಭ್ಯಾಗತರ ಸತ್ಕಾರ ಸಮಯದಲ್ಲಿ ಜರಾಸಂಧನ ಬಳಿಗೆ ಹೋಗಿ ಅವನಲ್ಲಿ ಹೀಗೆ ಯಾಚಿಸಿ ದರು. ॥ ೧೭ ॥ ಮಹಾರಾಜ! ನಿನಗೆ ಮಂಗಳವಾಗಲಿ. ನಾವು ಮೂವರೂ ನಿಮ್ಮ ಅತಿಥಿಗಳಾಗಿದ್ದು ಬಹಳ ದೂರದಿಂದ ಬಂದಿ ದ್ದೇವೆ. ನಿಶ್ಚಯವಾಗಿಯೂ ನಾವು ನಿನ್ನಿಂದ ಒಂದು ವಿಶೇಷ ಪ್ರಯೋಜನವನ್ನು ಪಡೆಯಲು ಇಲ್ಲಿಗೆ ಬಂದಿರುವೆವು. ಅದುದ ರಿಂದ ನಾವು ನಿನ್ನಿಂದ ಅಪೇಕ್ಷಿಸುವುದನ್ನು ನೀನು ಅವಶ್ಯಕವಾಗಿ ಕೊಡಬೇಕು. ॥ ೧೮ ॥ ಲೋಕದಲ್ಲಿ ತಿತಿಕ್ಷುಗಳಿಗೆ ಸೈರಿಸಲಾಗದಿರು ವುದು ಯಾವುದಿದೆ? ದುಷ್ಟರು ಮಾಡದಿರುವ ಅಕಾರ್ಯ ಯಾವುದಿದೆ? ಉದಾರಿಗಳಿಗೆ ಕೊಡದಿರುವ ವಸ್ತುವು ಯಾವು ದಿದೆ? ಸಮದರ್ಶಿಗಳಿಗೆ ಪರರೆಂಬುವರು ಯಾರಿದ್ದಾರೆ? ॥ ೧೯ ॥ ಯಾವ ಮನುಷ್ಯನು ತಾನು ಸಮರ್ಥನಾಗಿದ್ದರೂ ಅನಿತ್ಯವಾದ ಈ ಶರೀರದಿಂದ ಸತ್ಪುರುಷರು ಹೊಗಳುವಂತಹ ಅವಿನಾಶಿಯಾದ ಶಾಶ್ವತವಾದ ಯಶಸ್ಸನ್ನು ಸಂಪಾದಿಸುವುದಿಲ್ಲವೋ ಅವನನ್ನು ಎಷ್ಟು ನಿಂದಿಸಿದರೂ ಕಡಿಮೆಯೇ. ಅವನ ಜೀವನವು ಅತ್ಯಂತ ಶೋಚ ನೀಯವಾಗಿದೆ. ॥ ೨೦ ॥